# THE STORY OF THE PANDAVAS

# ಪಾಂಡವರ ಕಥೆ

## (ದ್ವಿತೀಯಭಾಗ)


ಲೇಖಕ ಮತ್ತು ಪ್ರಕಾಶಕ

ಆರ್. ಕೆ. ಸುಬ್ರಾಯಪ್ಪ ಎಂ. ಎ., ಬಿ. ಟಿ.

ಹೆಡ್ ಮಾಸ್ಟರ್ ಗೌ|| ಮರಿಮಲ್ಲಪ್ಪನವರ ಮಿಡಲ್ ಸ್ಕೂಲ್

ಮೈಸೂರು



(ಪ್ರಥಮ ಮುದ್ರಣ ೧೦೦೦ ಪ್ರತಿಗಳು)





1935

ಬೆಲೆ ೧—೦—೦

# ಗ್ರಂಥಕರ್ತನ ನಾಲ್ಕಾರು ನುಡಿಗಳು

ಅನೇಕ ಶತಮಾನಗಳ ಹಿಂದೆ ವೇದವ್ಯಾಸರು ಪಾಂಡವರನ್ನು ನಿಮಿತ್ತವಾಗಿಟ್ಟುಕೊಂಡು, ತಾವು ಜನ್ಮವೆತ್ತಿದ ಭರತಖಂಡಕ್ಕಾಗಿ ಅಲ್ಲ—ಇಡೀ ಪ್ರಪಂಚಕ್ಕಾಗಿ—ಈ ಮಹಾಭಾರತ ಕಥೆಯನ್ನು ಬರೆದರು. ಇದು ಪಾಂಡವರ ಕಥೆಯಲ್ಲ; ಪ್ರತಿ ಮಾನವನ ಕಥೆ. ಭಾರತವು ಒಬ್ಬನ ಒಡವೆಯಲ್ಲ; ಇಡೀ ಮಾನವ ಕೋಟಿಯ ಒಡವೆ. ನಮ್ಮ ನಮ್ಮ ಕಥೆಯನ್ನು ಯಾರಾದರೂ ಹೇಳುತ್ತಿದ್ದರೆ ಅದನ್ನು ಕೇಳಬೇಕೆನ್ನಿಸುತ್ತದೆ. ಹೇಳಿದ್ದನ್ನೇ ಹೇಳುತ್ತಿದ್ದರೂ ಕೇಳಿದ್ದನ್ನೇ ಕೇಳಬೇಕು ಎನ್ನಿಸುತ್ತದೆ. ನಾವು ಹಿಂದೆ ಮಾಡಿದ ಸಾಹಸಕಾರ್ಯಗಳನ್ನು ಎಷ್ಟಾವೃತ್ತಿ ಇತರರಿಗೆ ಹೇಳಿದರೂ, ನಮಗೆ ಬೇರೆ ತೃಪ್ತಿಯಾಗುವುದಿಲ್ಲ. ಭಾರತವು ನಮ್ಮ ಕಥೆಯೇ ಆದುದರಿಂದ ಎಷ್ಟಾವೃತ್ತಿ ಓದಿದರೂ ಇನ್ನೊಂದಾವೃತ್ತಿ ಓದಬೇಕು ಎನ್ನಿಸುತ್ತದೆ. ಇದೇ ಭಾರತದ ಗುಟ್ಟು.

ನಮ್ಮ ದೈಹಿಕ, ಬೌದ್ಧಿಕ, ಕಲಾಸಂಬಂಧಿಕ ಸಾಮಾಜಿಕಕಾರ್ಯಗಳೆಲ್ಲವೂ, ಸ್ವಯಂ ಉತ್ಕೃಷ್ಟತಾ, ಕೋಪ, ತಪ್ಪಿಸಿಕೊಳ್ಳೋಣ, ಗುಂಪಿನಲ್ಲಿರೋಣ, ಕಟ್ಟೋಣ, ಕೂಡಿಹಾಕೋಣ, ಮಕ್ಕಳನ್ನು ಪ್ರೀತಿಸೋಣ, ವ್ಯಾಮೋಹ ಮುಂತಾದ ಸಹಜಬುದ್ಧಿಗಳನ್ನೂ, ಆಟ, ಅನುಕರಣ, ಆಸಕ್ತಿ ಮುಂತಾದ ದೈವದತ್ತವಾದ ಇತರ ಶಕ್ತಿಗಳನ್ನೂ ಅನುಸರಿಸಿಕೊಂಡಿವೆ. ಈ ಸಹಜಬುದ್ಧಿಗಳ ಮತ್ತು ಶಕ್ತಿಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ನಾವು ಆಗಾಗ್ಗೆ ಅವಕಾಶಗಳನ್ನು ಕಲ್ಪಿಸುತ್ತಿರಬೇಕು. ಬಾಹ್ಯಪ್ರಪಂಚದಲ್ಲಿ ಅವುಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಸರಿಯಾದ

ಇದರಲ್ಲೇನಾದರೂ ಲೋಪ ದೋಷಗಳಿದ್ದರೆ ಯಾರಾದರೂ ತಿಳಿಸಿದಲ್ಲಿ ಅವುಗಳನ್ನು ಎರಡನೆಯ ಮುದ್ರಣದಲ್ಲಿ ಸರಿಪಡಿಸುವೆನು.

ಧ್ವನಿಯಲ್ಲಿ ಒಂದು ಬಗೆ ಶಕ್ತಿಯುಂಟು. ರೂಢಿಯಲ್ಲಿರುವ ಕೆಲವು ಶಬ್ದಗಳು ವ್ಯಾಕರಣದ ಕಟ್ಟಿಗೆ ಸಿಕ್ಕಿಬೀಳದಿದ್ದರೂ ಅವುಗಳಲ್ಲಿ ಅಡಕವಾಗಿರುವ ಶಕ್ತಿಗಾಗಿ ಅವುಗಳನ್ನು ಧಾರಾಳವಾಗಿ ಉಪಯೋಗಿಸಿರುತ್ತೇನೆ. ಬೇಕಾದೆಡೆಗಳಲ್ಲಿ ಭಾರತದ ಸನ್ನಿವೇಶಗಳನ್ನು ಸ್ವಲ್ಪಮಟ್ಟಿಗೆ ಬದಲಾಯಿಸಿರುವೆನು. ಭಾರತವನ್ನು ತಿಳಿದಿರುವವರಿಗೆ ಅದು ಚೆನ್ನಾಗಿ ಗೊತ್ತಾಗುವುದು. ಭಾರತವನ್ನು ತಿಳಿಯದವರು ಅದನ್ನು ತಿಳಿಯಬೇಕಾದ ಪ್ರಕೃತವೇ ಇಲ್ಲ. ಭಾರತವು ಯಾರು ಹೇಗೆ ಎಳೆದರೆ ಹಾಗೆ ಬರುತ್ತದೆಂಬುದನ್ನು ತೋರಿಸಲು ನನ್ನ ಅಲ್ಪಮತಿಗೆ ತಕ್ಕಂತೆ ಅಲ್ಲಲ್ಲೆ ಸೂಚನೆಗಳನ್ನು ಕೊಟ್ಟಿದ್ದೇನೆ. ಇತರ ಭಾಷೆಗಳಿಂದ ಬಂದಿರುವ ಪದಗಳನ್ನು ಕನ್ನಡದ ಪದಗಳಂತೆ ಧಾರಾಳವಾಗಿ ಉಪಯೋಗಿಸಿದ್ದೇನೆ. ರೂಢಿಯಲ್ಲಿರುವ ಪದಗಳು ಸಂಸ್ಕೃತವಾಗಲಿ, ಕನ್ನಡವಾಗಲಿ, ಅಥವಾ ಯಾವ ಭಾಷೆಯದೇ ಆಗಲಿ, ಕನ್ನಡ ಲೋಕದಲ್ಲಿ ನಮಗೆ ಎಲ್ಲವೂ ಕನ್ನಡ ಪದಗಳೆಂಬ ಭಾವನೆಯನ್ನಿಟ್ಟುಕೊಂಡು ಸಮಾಸ ಪದಗಳನ್ನು ಮಾಡಿ ಧಾರಾಳವಾಗಿ ಉಪಯೋಗಿಸಿರುತ್ತೇನೆ. ವಾಚಕಮಹಾಶಯರು ಈ ವಿಷಯಗಳನ್ನು ನೆನಪಿನಲ್ಲಿಟ್ಟುಕೊಂಡು ಈ ಗ್ರಂಥವನ್ನು ನೋಡಬೇಕೆಂಬುದೇ ನನ್ನ ವಿನಂತಿ.

ನನ್ನ ಈ ಗ್ರಂಥಕ್ಕೆ ಶ್ರೀಮನ್ಮಹಾರಾಜಾಧಿರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹಾದುರ್ರವರಿಂದ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬ ಮಹಾಭಾರತದ ಕನ್ನಡ ಟೀಕು ಎಂಬುದೂ, ಕನ್ನಡ ಮಹಾಭಾರತವೂ ಮುಖ್ಯ ಆಧಾರಗ್ರಂಥಗಳಾಗಿವೆ.

ತಮ್ಮ ಅಮೂಲ್ಯವಾದ ಕಾಲವನ್ನು ನನ್ನ ಹಸ್ತಪ್ರತಿಯನ್ನು ಓದುವುದಕ್ಕೂ, ಕೇಳುವುದಕ್ಕೂ ವಿನಿಯೋಗಿಸಿ ತಮ್ಮ ಅಮೋಘವಾದ

ಸಲಹೆಗಳನ್ನು ಕೊಟ್ಟು, ಈ ಗ್ರಂಥರಚನೆಗೆ ಸಹಾಯ ಮಾಡಿದ ಮಹಾ ರಾಜಾ ಹೈಸ್ಕೂಲು ಕನ್ನಡ ಪಂಡಿತರುಗಳಾದ ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳಿಗೂ ಶ್ರೀಮಾನ್ ಮಿರಲೆ ಕೃಷ್ಣಪ್ಪನವರಿಗೂ, ಮಹಾರಾಣಿ ಪುತ್ರು ಮರಿಮಲ್ಲಪ್ಪ ಹೈಸ್ಕೂಲು ಕನ್ನಡಪಂಡಿತರೂ, ನನ್ನ ಅಣ್ಣಂದಿರೂ ಆದ ಶ್ರೀಮಾನ್ ಆರ್. ಕೆ. ಶ್ರೀನಿವಾಸಯ್ಯನವರಿಗೂ, ಶ್ರೀಮಾನ್ ಆರ್. ಕೆ. ಕೃಷ್ಣಪ್ಪನವರಿಗೂ, ಮಹಾರಾಜಾ ಕಾಲೇಜು ಸಂಸ್ಕೃತ ಟ್ಯೂಟರಾದ ಶ್ರೀಮಾನ್ ಆರ್. ಎನ್. ಸೂರ್ಯನಾರಾಯಣ ಎಂ. ಎ. ಯವರಿಗೂ ಮಿಡಲ್‌ಸ್ಕೂಲ್ ರಿಟೈರ್ಡ್ ಹೆಡ್‌ಮಾಸ್ಟರಾದ ಶ್ರೀಮಾನ್ ಸೂರ್ಯನಾರಾಯಣರಾಯರಿಗೂ, ತು ಮ ಕೂ ರು ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿರುವ ಶ್ರೀಮಾನ್ ಟಿ. ಕೃಷ್ಣರಾವ್ ಎಂ. ಈ. ಡಿ ಯವರಿಗೂ ಹಸ್ತಪ್ರತಿಗಳನ್ನು ಬರೆಯಲು ನನಗೆ ಸಹಾಯ ಮಾಡಿದ ಇತರರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ಈ ಪುಸ್ತಕವನ್ನು ಮುದ್ರಿಸುವಾಗ ತಪ್ಪುಗಳಿಲ್ಲದಂತೆ ಪರಿಶೋಧಿಸಿ ನನಗೆ ಸಹಾಯ ಮಾಡಿದ ಅರಮನೆ ವಿದ್ವಾಂಸರಾದ ಶ್ರೀಮಾನ್ ಶಾಂತಿರಾಜ ಶಾಸ್ತ್ರಿಗಳಿಗೆ ನಾನು ಚಿರಋಣಿಯಾಗಿದ್ದೇನೆ.

**ಆರ್. ಕೆ. ಸುಬ್ರಾಯಪ್ಪ,**

ಗ್ರಂಥಕರ್ತ.



ಇದರಲ್ಲೇನಾದರೂ ಲೋಪ ದೋಷಗಳಿದ್ದರೆ ಯಾರಾದರೂ ತಿಳಿಸಿದಲ್ಲಿ ಅವುಗಳನ್ನು ಎರಡನೆಯ ಮುದ್ರಣದಲ್ಲಿ ಸರಿಪಡಿಸುವೆನು.

ಧ್ವನಿಯಲ್ಲಿ ಒಂದು ಬಗೆ ಶಕ್ತಿಯುಂಟು. ರೂಢಿಯಲ್ಲಿರುವ ಕೆಲವು ಶಬ್ದಗಳು ವ್ಯಾಕರಣದ ಕಟ್ಟಿಗೆ ಸಿಕ್ಕಿಬೀಳದಿದ್ದರೂ ಅವುಗಳಲ್ಲಿ ಅಡಕವಾಗಿರುವ ಶಕ್ತಿಗಾಗಿ ಅವುಗಳನ್ನು ಧಾರಾಳವಾಗಿ ಉಪಯೋಗಿಸಿರುತ್ತೇನೆ. ಬೇಕಾದೆಡೆಗಳಲ್ಲಿ ಭಾರತದ ಸನ್ನಿವೇಶಗಳನ್ನು ಸ್ವಲ್ಪಮಟ್ಟಿಗೆ ಬದಲಾಯಿಸಿರುವೆನು. ಭಾರತವನ್ನು ತಿಳಿದಿರುವವರಿಗೆ ಅದು ಚೆನ್ನಾಗಿ ಗೊತ್ತಾಗುವುದು. ಭಾರತವನ್ನು ತಿಳಿಯದವರು ಅದನ್ನು ತಿಳಿಯಬೇಕಾದ ಪ್ರಕೃತವೇ ಇಲ್ಲ. ಭಾರತವು ಯಾರು ಹೇಗೆ ಎಳೆದರೆ ಹಾಗೆ ಬರುತ್ತದೆಂಬುದನ್ನು ತೋರಿಸಲು ನನ್ನ ಅಲ್ಪಮತಿಗೆ ತಕ್ಕಂತೆ ಅಲ್ಲಲ್ಲೆ ಸೂಚನೆಗಳನ್ನು ಕೊಟ್ಟಿದ್ದೇನೆ. ಇತರ ಭಾಷೆಗಳಿಂದ ಬಂದಿರುವ ಪದಗಳನ್ನು ಕನ್ನಡದ ಪದಗಳಂತೆ ಧಾರಾಳವಾಗಿ ಉಪಯೋಗಿಸಿದ್ದೇನೆ. ರೂಢಿಯಲ್ಲಿರುವ ಪದಗಳು ಸಂಸ್ಕೃತವಾಗಲಿ, ಕನ್ನಡವಾಗಲಿ, ಅಥವಾ ಯಾವ ಭಾಷೆಯದೇ ಆಗಲಿ, ಕನ್ನಡ ಲೋಕದಲ್ಲಿ ನಮಗೆ ಎಲ್ಲವೂ ಕನ್ನಡ ಪದಗಳೆಂಬ ಭಾವನೆಯನ್ನಿಟ್ಟುಕೊಂಡು ಸಮಾಸ ಪದಗಳನ್ನು ಮಾಡಿ ಧಾರಾಳವಾಗಿ ಉಪಯೋಗಿಸಿರುತ್ತೇನೆ. ವಾಚಕಮಹಾಶಯರು ಈ ವಿಷಯಗಳನ್ನು ನೆನಪಿನಲ್ಲಿಟ್ಟುಕೊಂಡು ಈ ಗ್ರಂಥವನ್ನು ನೋಡಬೇಕೆಂಬುದೇ ನನ್ನ ವಿನಂತಿ.

ನನ್ನ ಈ ಗ್ರಂಥಕ್ಕೆ ಶ್ರೀಮನ್ಮಹಾರಾಜಾಧಿರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹಾದುರ್ರವರಿಂದ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬ ಮಹಾಭಾರತದ ಕನ್ನಡ ಟೀಕು ಎಂಬುದೂ, ಕನ್ನಡ ಮಹಾಭಾರತವೂ ಮುಖ್ಯ ಆಧಾರಗ್ರಂಥಗಳಾಗಿವೆ.

ತಮ್ಮ ಅಮೂಲ್ಯವಾದ ಕಾಲವನ್ನು ನನ್ನ ಹಸ್ತಪ್ರತಿಯನ್ನು ಓದುವುದಕ್ಕೂ, ಕೇಳುವುದಕ್ಕೂ ವಿನಿಯೋಗಿಸಿ ತಮ್ಮ ಅಮೋಘವಾದ

ಸಲಹೆಗಳನ್ನು ಕೊಟ್ಟು, ಈ ಗ್ರಂಥರಚನೆಗೆ ಸಹಾಯ ಮಾಡಿದ ಮಹಾರಾಜಾ ಹೈಸ್ಕೂಲು ಕನ್ನಡ ಪಂಡಿತರುಗಳಾದ ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳಿಗೂ ಶ್ರೀಮಾನ್ ಮಿರಲೆ ಕೃಷ್ಣಪ್ಪನವರಿಗೂ, ಮಹಾರಾಣಿ ಪುತ್ತು ಮರಿಮಲ್ಲಪ್ಪ ಹೈಸ್ಕೂಲು ಕನ್ನಡಪಂಡಿತರೂ, ನನ್ನ ಅಣ್ಣಂದಿರೂ ಆದ ಶ್ರೀಮಾನ್ ಆರ್. ಕೆ. ಶ್ರೀನಿವಾಸಯ್ಯನವರಿಗೂ, ಶ್ರೀಮಾನ್ ಆರ್. ಕೆ. ಕೃಷ್ಣಪ್ಪನವರಿಗೂ, ಮಹಾರಾಜಾ ಕಾಲೇಜು ಸಂಸ್ಕೃತ ಟ್ಯೂಟರಾದ ಶ್ರೀಮಾನ್ ಆರ್. ಎನ್. ಸೂರ್ಯನಾರಾಯಣ ಎಂ. ಎ. ಯವರಿಗೂ ಮಿಡಲ್‌ಸ್ಕೂಲ್ ರಿಟೈರ್ಡ್ ಹೆಡ್‌ಮಾಸ್ಟರಾದ ಶ್ರೀಮಾನ್ ಸೂರ್ಯನಾರಾಯಣರಾಯರಿಗೂ, ತು ಮ ಕೂ ರು ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿರುವ ಶ್ರೀಮಾನ್ ಟಿ. ಕೃಷ್ಣರಾವ್ ಎಂ. ಈ. ಡಿ ಯವರಿಗೂ ಹಸ್ತಪ್ರತಿಗಳನ್ನು ಬರೆಯಲು ನನಗೆ ಸಹಾಯ ಮಾಡಿದ ಇತರರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ಈ ಪುಸ್ತಕವನ್ನು ಮುದ್ರಿಸುವಾಗ ತಪ್ಪುಗಳಿಲ್ಲದಂತೆ ಪರಿಶೋಧಿಸಿ ನನಗೆ ಸಹಾಯ ಮಾಡಿದ ಅರಮನೆ ವಿದ್ವಾಂಸರಾದ ಶ್ರೀಮಾನ್ ಶಾಂತಿರಾಜ ಶಾಸ್ತ್ರಿಗಳಿಗೆ ನಾನು ಚಿರಋಣಿಯಾಗಿದ್ದೇನೆ.

**ಆರ್. ಕೆ. ಸುಬ್ರಾಯಪ್ಪ,**

ಗ್ರಂಥಕರ್ತ.



# ವಿಷಯಸೂಚಿ



ಶ್ರೀ ಕೃಷ್ಣ

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ |

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ||

|| ಶ್ರೀ ||

# ಪಾಂಡವರ ಕಥೆ

## ಅರಣ್ಯಪರ್ವ

### ಒಂದನೆಯ ಅಧ್ಯಾಯ

#### ಆರ್ಜನೆ

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯರಹಿತನಾದ ಧರ್ಮರಾಯನು ಕಪಟಿಯಾದ ಶಕುನಿಯ ಮೋಸಜಾಲಕ್ಕೆ ಸಿಕ್ಕಿ, ದುಷ್ಟಾತ್ಮನಾದ ದುರ್ಯೋಧನನೊಡನೆ ಪಗಡೆಯಾಟಕ್ಕೆ ಕುಳಿತನು. ಸೋತರೆ ರಾಜ್ಯಕೋಶಗಳನ್ನೆಲ್ಲಾ ಬಿಟ್ಟು ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡುವೆನೆಂದು ಪಂದ್ಯ ಮಾಡಿಕೊಂಡಿದ್ದನು. ಅಕ್ಷಹೃದಯಜ್ಞನಾದ ಶಕುನಿಯ ಮುಂದೆ ಧರ್ಮರಾಯನು ಎಷ್ಟುಮಾತ್ರದವನು ! ಎಲ್ಲವನ್ನೂ ಸೋತು ಪ್ರತಿಜ್ಞಾಪಾಲನೆಗಾಗಿ ದ್ರೌಪದಿಯೊಡನೆ ತಮ್ಮಂದಿರನ್ನು ಕಟ್ಟಿಕೊಂಡು ಆಯುಧಸಮೇತ ಹೊರಟನು. ಪ್ರಜೆಗಳ ಹಿತವೇ ತನ್ನ ಹಿತವೆಂದು ತಿಳಿದುಕೊಂಡು ಯಾವಾಗಲೂ ಪ್ರಜಾಸೇವೆಯಲ್ಲಿಯೇ ನಿರತನಾಗಿದ್ದ ಧರ್ಮಜನನ್ನು ಎಲ್ಲರೂ ಅತಿಯಾಗಿ ಪ್ರೀತಿಸುತ್ತಿದ್ದರು. ನಿರ್ಭಯವಾಗಿ ನಗರವಾಸಿಗಳೆಲ್ಲರೂ ಭೀಷ್ಮ ದ್ರೋಣರ ಮುಂದೆ ದುರಾತ್ಮನಾದ ದುರ್ಯೋಧನನ ದುಷ್ಟತನವನ್ನು ನಿಂದಿಸತೊಡಗಿದರು. ಅಗಲಿಕೆಯ ದುಃಖವನ್ನು ತಾಳಲಾರದೆ ಎಲ್ಲರೂ ಅವನ ಹಿಂದೆಯೇ ಹೊರಟರು. ತನ್ನನ್ನು ಬಿಟ್ಟಿರಲಾರದೆ ತನ್ನನ್ನೇ ಹಿಂಬಾಲಿಸಿ ಬರುತ್ತಿರುವ ಪುರವಾಸಿಗಳನ್ನು ಧರ್ಮರಾಯನು ಕಂಡು, ಹದಿಮೂರು ವರ್ಷಗಳಾದ ನಂತರ ತಮ್ಮ ಸೇವೆ

ಮಾಡಲು ಪುನಃ ಸಿದ್ಧನಾಗುವೆನೆಂದು ಸಾಂತ್ವವಚನಗಳಿಂದ ಸಂತೈಸಿ, ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಬೇಕೆಂದು ಕೇಳಿಕೊಂಡನು. ಅವನ ಮನಸ್ಸಂತೋಷಪಡಿಸುವುದಕ್ಕಾಗಿ ಎಲ್ಲರೂ ಹಿಂದಿರುಗಿದರು. ಆದರೆ ವೇದಾಧ್ಯಯನಸಂಪನ್ನರಾಗಿಯೂ, ಅಗ್ನಿಹೋತ್ರಿಗಳಾಗಿಯೂ, ನಿಷ್ಠರಾಗಿಯೂ ಇದ್ದ ಕೆಲವರು ಬ್ರಾಹ್ಮಣರು ಮಾತ್ರ ಅವನ ಮಾತು ಕೇಳದೆ ಅವನನ್ನು ಅನುಸರಿಸಿ ಮುಂದೆ ನಡೆದರು. ಆಗ ಧರ್ಮರಾಜನು ಅವರನ್ನು ಕುರಿತು "ಬ್ರಾಹ್ಮಣರನ್ನು ಕ್ಲೇಶಪಡಿಸಿದರೆ ದೇವತೆಗಳಿಗೂ ಬಾಧೆ ತಪ್ಪದು: ಹೀಗಿರುವಲ್ಲಿ ನಮ್ಮಂಥವರಿಗೆ ಹೇಳತಕ್ಕದ್ದೇನು? ಕಾಡಿನಲ್ಲಿ ನಮ್ಮ ಜೀವನ ಪಥವನ್ನು ಸಾಗಿಸುವುದೇ ಕಷ್ಟವಾಗಿರುವಾಗ ನಿಮ್ಮನ್ನೆಲ್ಲ ಕಾಪಾಡುವುದೆಂತು? ' ಎಂದನು. ಆಗ ಅವರು " ಎಲೈ ಅರಸೇ, ನಮಗಾಗಿ ನೀನು ಕಷ್ಟಪಡಬೇಕಾಗಿಲ್ಲ. ನಮ್ಮ ನಮ್ಮ ಆಹಾರ ವನ್ನು ನಾವು ಸಂಪಾದಿಸಿಕೊಳ್ಳುತ್ತೇವೆ" ಎಂದರು. ಆದರೂ ಧರ್ಮ ರಾಯನಿಗೆ ಸಮಾಧಾನವಾಗಲಿಲ್ಲ. 'ಬ್ರಾಹ್ಮಣರನ್ನು ಕ್ಲೇಶಪಡಿಸಬೇ ಕಲ್ಲ' ಎಂಬ ಬೇಗೆಯು ತಪ್ಪಲಿಲ್ಲ.

ಆಗ ಧರ್ಮರಾಜನು, ತಮ್ಮ ಕುಲಪುರೋಹಿತರಾದ ಧೌಮ್ಯರನ್ನು ಕಂಡು, ಅವರಲ್ಲಿ ತನ್ನನ್ನನುಸರಿಸಿ ಬರುತ್ತಿರುವ ಬ್ರಾಹ್ಮಣರ ನಿಷ್ಠೆಯು ವನ್ನೂ ತನ್ನ ಶಕ್ತಿಹೀನತೆಯನ್ನೂ ಪ್ರಸ್ತಾಪಿಸಿದನು. ಆಗ ಧೌಮ್ಯರು ಅದಕ್ಕೊಂದುಪಾಯವನ್ನು ಹೇಳಿದರು " ಸಕಲ ಪ್ರಾಣಿಗಳಿಗೂ ಜೀವ ನಾಧಾರವಾಗಿರುವವನು ಸೂರ್ಯದೇವನು. ಅವನಿಂದಲೇ ವೃಷ್ಟಿಯಾಗು ವುದು; ಭೂಮಿಯನ್ನು ಉತ್ತು ಬಿತ್ತಿದ ಬೀಜವು ಮೊಳಕೆಯಾಗಿ ದೊಡ್ಡ ದಾಗುವುದೂ ಅವನಿಂದಲೇ; ಗಿಡ ವೃಕ್ಷಗಳೂ ಪೈರುಪಚ್ಚೆಗಳೂ ಎಲೆ ಹೂ ಕಾಯಿಗಳನ್ನು ಬಿಡುವುದೂ ಅವನಿಂದಲೇ; ಅವನಿಂದಲೇ ಧಾನ್ಯ ಗಳೂ ಹಣ್ಣುಹಂಪಲುಗಳೂ ಪಕ್ವವಾಗಿ ಭುಂಜಿಸಲು ಯೋಗ್ಯವಾಗು ವುವು. ಇಂತಪ್ಪ ಸೂರ್ಯದೇವನನ್ನು ನೀನು ನಿನ್ನ ತಪಃಪ್ರಭಾವದಿಂದ

ಒಲಿಸಿಕೊಂಡೆಯಾದರೆ, ನಿನ್ನ ಸಕಲ ಇಷ್ಟಾರ್ಥಗಳೂ ನೆರವೇರುವುವು" ಎಂದು ಹೇಳಿ ಸೂರ್ಯಮಂತ್ರವನ್ನುಪದೇಶ ಮಾಡಿದರು. ದೃಢಸಂಕಲ್ಪನೂ, ಸತ್ಯಸಂಧನೂ ಆದ ಧರ್ಮಜನು ಹಾಗೆಯೇ ಸೂರ್ಯೋಪಾಸನೆ ಮಾಡಲು, ಸೂರ್ಯನು ಅವನಿಗೆ ಕಾಣಿಸಿಕೊಂಡು "ಎಲೈ ಧರ್ಮರಾಯನೇ, ನಿನ್ನ ಮನಸ್ಸಿನ ಅಭೀಷ್ಟಗಳೆಲ್ಲವೂ ನೆರವೇರುವುವು. ನಿನ್ನ ವನವಾಸವು ಮುಗಿಯುವ ವರೆಗೂ ನಿನ್ನ ಅನ್ನವನ್ನು ಕೊಡುತ್ತೇನೆ. ಈ ತಾಮ್ರದ ಪಾತ್ರೆಯನ್ನು ಸ್ವೀಕರಿಸು. ದ್ರೌಪದಿಯು ಈ ಪಾತ್ರೆಯಿಂದ ಶಾಕ, ಫಲ, ಮೂಲಗಳನ್ನೂ ಷಡ್ರಸೋಪೇತವಾದ ಪಕ್ವಾನ್ನವನ್ನೂ ಎಷ್ಟು ಅಪೇಕ್ಷಿಸುವಳೋ ಅಷ್ಟು ಇಂದು ಮೊದಲು ಅಕ್ಷಯವಾಗುವುದು. ಇನ್ನು ಹದಿನಾಲ್ಕನೆಯ ವರ್ಷದಲ್ಲಿ ನಿನಗೆ ರಾಜ್ಯಪ್ರಾಪ್ತವಾಗುವುದು" ಎಂದು ಹೇಳಿ ಅಂತರ್ಧಾನನಾದನು.

ಇತ್ತ ಧರ್ಮರಾಯನು ಸೂರ್ಯನಿಂದ ಪ್ರಸಾದಿತನಾಗಿ ಧೌಮ್ಯರ ಪಾದಕ್ಕೆ ವಂದನೆಯನ್ನು ಮಾಡಿ, ಭೀಮಾರ್ಜುನ ನಕುಲ ಸಹದೇವರನ್ನು ಆಲಿಂಗನಮಾಡಿಕೊಂಡು, ದ್ರೌಪದಿ ನಮಸ್ಕಾರಮಾಡಲು, ಆಕೆಯೊಡನೆ ಅಡಿಗೆಮನೆಯಲ್ಲಿ ಖಾದ್ಯ, ಲೇಹ್ಯ, ಚೋಷ್ಯ, ಪೇಯ ಎಂಬ ನಾಲ್ಕು ವಿಧವಾದ ಪಕ್ವಾನ್ನವನ್ನು ಸ್ವಲ್ಪಸ್ವಲ್ಪವಾಗಿ ಮಾಡಿಸಿದಾಗ್ಗೂ ಅದು ಅಕ್ಷಯವಾಗಿ ಹೆಚ್ಚುತ್ತಿರಲು, ಅದರಿಂದ ಬ್ರಾಹ್ಮಣರಿಗೆ ಮೊದಲು ಭೋಜನ ಮಾಡಿಸಿ ಬಳಿಕ ತಮ್ಮಂದಿರು ಭೋಜನ ಮಾಡಿದನಂತರ ವಿಘಸಾನ್ನವನ್ನು ತಾನು ಊಟಮಾಡಿದನು. ಬಳಿಕ ದ್ರೌಪದಿಯು ಉಳಿದ ಅನ್ನವನ್ನು ಭೋಜನಮಾಡಿದಳು ; ಅನ್ನವು ಮುಗಿಯಿತು. ಹೀಗೆ ಧರ್ಮರಾಯನು ಸೂರ್ಯನ ವರಪ್ರಸಾದದಿಂದ ಪ್ರತಿದಿವಸವೂ ಅತಿಥಿಸತ್ಕಾರಮಾಡುತ್ತ ಬಹು ಸುಖದಿಂದಿದ್ದನು.

ಹೀಗೆ ಕೆಲವು ಕಾಲ ಕಳೆಯಿತು. ಯಾವಾಗ್ಗೂ ಮುಂದಿನ ಯೋಚನೆಗಳು ಧರ್ಮರಾಯನನ್ನು ಬಹುವಾಗಿ ಬಾಧಿಸುತ್ತಿದ್ದುವು. ಒಂದು

ದಿನ ಧರ್ಮರಾಜನು ಅರ್ಜುನನನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು "ಎಲೈ ಅರ್ಜುನನೇ, ಭೀಷ್ಮ ದ್ರೋಣ ಕೃಪ ಕರ್ಣ ಅಶ್ವತ್ಥಾಮರಲ್ಲಿ ಧನುರ್ವೇದವು ನಾಲ್ಕು ಪಾದಗಳಿಂದಲೂ ನೆಲೆಗೊಂಡಿರುವುದು. ಅವರು ಐಂದ್ರ, ವಾರುಣ, ಬ್ರಾಹ್ಮ ಮೊದಲಾದ ಅಸ್ತ್ರಗಳನ್ನೂ ಸಾಮಾನ್ಯ ಬಾಣಗಳನ್ನೂ ಪ್ರಯೋಗಿಸತಕ್ಕ ಕ್ರಮವನ್ನೂ, ಅವುಗಳಿಗೆ ಪ್ರತೀಕಾರ ಮಾಡುವುದನ್ನೂ ಚೆನ್ನಾಗಿ ತಿಳಿದಿರುವರು. ದುರ್ಯೋಧನನು ಅವರನ್ನು ಸಂತೋಷಪಡಿಸಿ, ಅವರ ಒಲುಮೆಗೆ ಪಾತ್ರನಾದರೆ, ಮುಂದೆ ಯುದ್ಧ ಒದಗಿದಲ್ಲಿ, ಅವರು ತಮ್ಮ ತಮ್ಮ ಸಾಮರ್ಥ್ಯಗಳನ್ನು ತೋರಿಸದೆ ಬಿಡರು. ಕೌರವನು ಧನಸಂಪತ್ತಿನಿಂದಲೂ, ರಾಜ್ಯಸಂಪತ್ತಿನಿಂದಲೂ, ಸಹಾಯಸಂಪತ್ತಿನಿಂದಲೂ, ಕೂಡಿದವನಾಗಿದ್ದಾನೆ. ಪ್ರಜಾನುರಾಗ ನಮ್ಮಮೇಲೆ ಪೂರ್ಣವಿದ್ದರೂ, ಪ್ರಭುತ್ವಶಕ್ತಿಯು ಅವರಿಂದೇನೂ ಆಗದಂತೆ ಮಾಡಿಬಿಡುವುದು. ಮುಂದಿನ ಸಕಲ ಕಾರ್ಯಗಳೂ ನಿನ್ನಿಂದಲೇ ಆಗಬೇಕು. ವೇದವ್ಯಾಸರು ನನಗೊಂದು ರಹಸ್ಯವಾದ ಮಂತ್ರೋಪದೇಶ ಮಾಡಿರುವರು. ಆ ಮಂತ್ರವನ್ನು ನೀನು ಸ್ವೀಕರಿಸಿ, ಉಗ್ರತಪಸ್ಸಿನಿಂದ ದೇವತೆಗಳ ಒಲುಮೆಗೆ ಪಾತ್ರನಾಗಿ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ಬಾ. ಯುದ್ಧಸಮಯದಲ್ಲಿ ಶಸ್ತ್ರಾಭ್ಯಾಸಕ್ಕೆ ಕುಳಿತುಕೊಳ್ಳುವುದೂ, ಬೆಂಕಿಯು ಹತ್ತಿ ಉರಿಯುತ್ತಿರುವಾಗ ಬಾವಿ ತೋಡಲು ಮೊದಲು ಮಾಡುವುದೂ, ವಿವೇಕಿಗಳ ಮಾರ್ಗವಲ್ಲ. ಇದು ನಮಗೆ ಶಸ್ತ್ರಾಸ್ತ್ರಸಿದ್ಧತೆಗೆ ಸರಿಯಾದ ಕಾಲವು. ಮುಂದೆ ಯುದ್ಧವಾಗಲಿ, ಬಿಡಲಿ, ನಾವು ಸಿದ್ಧರಾಗಿರೋಣ. ಇದರಲ್ಲೇನೂ ದೋಷವಿಲ್ಲ. ಮುಂದೆ ಯುದ್ಧವೇ ಸಿದ್ಧವೆಂದು ನನಗೇನೋ ಅನ್ನಿಸುತ್ತಿದೆ. ಏನಾದರಾಗಲಿ, ಈಗಲೇ ಹೊರಡು" ಎಂದನು.

ಎಲ್ಲರನ್ನೂ ಬಿಟ್ಟು, ತನ್ನನ್ನೇ ಈ ಮಹಾಕಾರ್ಯಕ್ಕೆ ಆರಿಸಿದುದರಿಂದ ಅರ್ಜುನನು ಉಬ್ಬಿದನು. ಎಲ್ಲರ ಅಪ್ಪಣೆಯನ್ನೂ ಪಡೆದು ಧನುರ್ಧಾರಿಯಾಗಿ ಉತ್ತರ ದಿಗ್ಭಾಗದಲ್ಲಿರುವ ಇಂದ್ರಕೀಲಕ್ಕೆ ಹೊರಟನು.

ನಾಲ್ಕಾರು ದಿವಸಗಳು ಪ್ರಯಾಣಮಾಡಿ ಇಂದ್ರಕೀಲಪರ್ವತದ ಸಮೀಪವನ್ನೈದಿದನು. ಅಲ್ಲಿ ಹೋಗುತ್ತಿರುವಾಗ ಒಂದು ದಿನ "ಎಲೈ ಅರ್ಜುನನೇ, ನಿಲ್ಲು ನಿಲ್ಲು" ಎಂಬ ವಾಣಿಯು ಕೇಳಿಸಿತು. ತನ್ನ ಹೆಸರು ಹಿಡಿದು ಕೂಗುವವರಾರೆಂದು ಸುತ್ತಲೂ ನೋಡಿದನು. ಯಾರೂ ಕಣ್ಣಿಗೆ ಬೀಳಲಿಲ್ಲ. ಹಾಗೆಯೇ ಕುತೂಹಲ ಹೆಚ್ಚಲು, ದಾರಿ ಬಿಟ್ಟು ಧ್ವನಿ ಬಂದ ಕಡೆ ಸ್ವಲ್ಪದೂರ ಹೋಗಿ ನೋಡಲು, ಒಂದು ವೃಕ್ಷದ ಕೆಳಗೆ ಬ್ರಹ್ಮತೇಜಸ್ಸಿನಿಂದ ಪ್ರಕಾಶಮಾನನೂ, ಜಟಾಧಾರಿಯೂ, ಕೃಶನೂ ಆದ ಒಬ್ಬ ಋಷಿಯನ್ನು ಕಂಡನು. ದೂರದಿಂದಲೇ ನಮಸ್ಕಾರ ಮಾಡಿದನು. ಆಗ ಋಷಿಯು ಅರ್ಜುನನನ್ನು ಸಮೀಪಕ್ಕೆ ಬರುವಂತೆ ಸಂಜ್ಞೆ ಮಾಡಿದನು. ಅರ್ಜುನನು ಅತಿ ನಮ್ರತೆಯಿಂದ ಋಷಿಯ ಸಮೀಪವನ್ನೈದಿ ನಿಂತುಕೊಂಡಿರಲು, ಆಗ ಆ ಋಷಿಯು "ಅಯ್ಯಾ, ನೀನು ಯಾರು? ಧನುರ್ಬಾಣಗಳನ್ನೂ, ಕವಚವನ್ನೂ, ಖಡ್ಗವನ್ನೂ ಕೈ ತೊಡವುಗಳನ್ನೂ ಧರಿಸಿಕೊಂಡು ಕ್ಷತ್ರಿಯ ಧರ್ಮವನ್ನನುಸರಿಸಿ ಬಂದಿರುವೆ. ಈ ಪ್ರದೇಶವು ಕ್ರೋಧ ಹರ್ಷಗಳನ್ನು ಜಯಿಸಿ, ತಪಸ್ವಿಗಳಾಗಿಯೂ ಶಾಂತರಾಗಿಯೂ ಇರುವ ಬ್ರಾಹ್ಮಣರಿಗೆ ಆಶ್ರಯವಾಗಿರುವುದು. ಇಲ್ಲಿ ಆಯುಧಗಳಿಂದೇನು ಪ್ರಯೋಜನ? ಇಲ್ಲಿ ಯುದ್ಧ ಮಾಡತಕ್ಕವರೇ ಇಲ್ಲ. ನೀನು ಪುಣ್ಯತಮವಾದ ಸ್ಥಾನಕ್ಕೆ ಬಂದಿರುವೆ. ಈ ಧನುಸ್ಸನ್ನು ತೆಗೆದಿಡು. ಲೋಕದಲ್ಲಿ ತೇಜೋವಂತನಾಗಿಯೂ, ಶೂರನಾಗಿಯೂ ಇರುವ ಪುರುಷನು ಇದ್ದಾನೆಯೇ?" ಎಂದು ಪರಿಹಾಸದಿಂದ ಮಾತನಾಡಿದನು. ಅರ್ಜುನನು ನಿಶ್ಚಲಚಿತ್ತನಾಗಿ ಮೊದಲಿನಂತೆ ದೃಢನಾಗಿಯೇ ಇದ್ದನು. ಆಗ ಆ ಬ್ರಾಹ್ಮಣವೇಷದಲ್ಲಿದ್ದ ಇಂದ್ರನು ತನ್ನ ನಿಜಸ್ವರೂಪವನ್ನು ತೋರಿಸಿ "ಎಲೈ ಅರ್ಜುನನೇ, ಅಸ್ತ್ರಗಳಿಂದಾಗಬೇಕಾದುದೇನು? ಬೇಕಾದ ವರವನ್ನು ಬೇಡಿಕೋ, ಕೊಡುವೆನು" ಎಂದನು. ಆಗ ಅರ್ಜುನನು "ಎಲೈ ದೇವೇಂದ್ರನೇ, ಲೋಭಕ್ಕೂ ಮೋಹಕ್ಕೂ ಸಿಕ್ಕಿ

ಭೋಗವನ್ನೂ ಐಶ್ವರ್ಯವನ್ನೂ ಅಪೇಕ್ಷಿಸುವವನಲ್ಲ. ಕಾಡಿನಲ್ಲಿ ಸಹೋದರರನ್ನು ಬಿಟ್ಟು ಬಂದಿರುವೆನು. ನಮ್ಮ ವೈರಿಗಳಾದ ಕೌರವರ ಹಗೆತನವನ್ನು ಇನ್ನೂ ತೀರಿಸಿಲ್ಲ. ಈಗ ನಾನು ಭೋಗಾಪೇಕ್ಷಿಯಾದರೆ ಅಪಕೀರ್ತಿಗೆ ಗುರಿಯಾದೇನು" ಎಂದನು. ಆಗ ಇಂದ್ರನು "ಎಲೈ ಮಗನೇ, ಪಿನಾಕಪಾಣಿಯಾದ ಈಶ್ವರನನ್ನು ಯಾವಾಗ ನೋಡುವೆಯೋ, ಆಗ ನಿನಗೆ ನಾನು ಸಕಲ ಅಸ್ತ್ರಗಳನ್ನೂ ಕೊಡುವೆನು. ಅದಕ್ಕೆ ನೀನು ಯತ್ನ ಮಾಡು. ಆ ಮಹಾದೇವನ ದರ್ಶನದಿಂದ ನೀನು ಸಿದ್ಧನಾಗಿ ಸ್ವರ್ಗಲೋಕಕ್ಕೆ ಬರುವೆ" ಎಂದು ಹೇಳಿ ಅಲ್ಲೇ ಕಣ್ಮರೆಯಾದನು.

ಅಪರಿಮಿತ ಪರಾಕ್ರಮಶಾಲಿಯಾದ ಅರ್ಜುನನು, ನಿಶ್ಚಲಚಿತ್ತದಿಂದ ಮನೋಹರವಾದ ಒಂದು ತಾಣದಲ್ಲಿ, ಮಹಾದೇವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಲುದ್ಯುಕ್ತನಾದನು. ಮಹಾದೇವನು ಇವನ ತಪಸ್ಸಿಗೆ ಮೆಚ್ಚಿ ಕಿರಾತವೇಷಧಾರಿಯಾಗಿ ಅವನಿದ್ದೆಡೆಗೆ ಬಂದನು; ಆಗ ದನುಪುತ್ರನಾದ ಮೂಕನೆಂಬ ರಾಕ್ಷಸನು, ಹಂದಿಯ ವೇಷವನ್ನು ಧರಿಸಿ ಅರ್ಜುನನನ್ನು, ಕೊಲ್ಲಬೇಕೆಂಬ ಉದ್ದೇಶದಿಂದ, ಅತ್ತ ಹೋಗುತ್ತಿದ್ದುದನ್ನು ಕಂಡನು. ತನ್ನ ಕಡೆ ಬರುತ್ತಿದ್ದ ಹಂದಿಯನ್ನು ಅರ್ಜುನನೂ ನೋಡಿದನು. ಕೂಡಲೆ ಗಾಂಡೀವ ಧನುಷ್ಟಂಕಾರ ಮಾಡಿ, ಸರ್ಪಗಳಿಗೆ ಸಮಾನವಾದ ಬಾಣಗಳನ್ನು ತೊಟ್ಟು ಪ್ರಯೋಗಿಸಲು ಸಿದ್ಧನಾದನು. ಕಿರಾತವೇಷಧಾರಿಯಾದ ಮಹಾದೇವನು ಅರ್ಜುನನನ್ನು ತಡೆದು 'ನನ್ನ ಬೇಟೆಗೆ ನೀನು ಕೈಹಾಕಬೇಡ' ಎಂದನು. ಅರ್ಜುನನು ಲಕ್ಷ್ಯಮಾಡದೆ ಬಾಣಗಳನ್ನು ಬಿಟ್ಟೇಬಿಟ್ಟನು. ಕಿರಾತನೂ ಬಿಟ್ಟನು. ಇಬ್ಬರ ಬಾಣಗಳೂ ಏಕಕಾಲದಲ್ಲಿ ಹಂದಿಯ ಶರೀರವನ್ನು ಪ್ರವೇಶಿಸಿ ಅದನ್ನು ಕೊಂದುಹಾಕಿದುವು. ಬೇಟೆ 'ನನ್ನದು' 'ನನ್ನದು' ಎಂಬ ವ್ಯಾಜ್ಯವು ಹುಟ್ಟಿತು. ಇಬ್ಬರಿಗೂ ಹೋರಾಟಕ್ಕೆ ಪ್ರಾರಂಭವಾಯಿತು. ಅರ್ಜುನನ ಅಸ್ತ್ರಶಸ್ತ್ರಗಳೆಲ್ಲವೂ ಉಡುಗಿಹೋದುವು. ಅವನ ಗಾಂಡೀವ ಧನುಸ್ಸನ್ನು ಕಿರಾ

ತನು ನುಂಗಿ ಬಿಟ್ಟನು. ಮುಷ್ಟಿಯುದ್ಧಕ್ಕೆ ಮೊದಲಾಯಿತು. ಪಿನಾಕಪಾಣಿಯ ಪೆಟ್ಟಿನಿಂದ ಪಾರ್ಥನು ಮೂರ್ಛಿತನಾದನು. ಎಚ್ಚೆತ್ತು ಅಚಲನಾಗಿ ನಿಂತಿರುವ ಕಿರಾತನನ್ನು ಕಂಡು ಕುಪಿತನಾಗಿ 'ಎಲೋ ಕಿರಾತನೇ, ಇಗೋ ಬಂದೆ, ನಿನ್ನನ್ನು ಯಮಪುರಿಗೆ ಕಳುಹಿಸುವೆನು' ಎಂದು ಹೇಳುತ್ತ, ಮರಳಿನಿಂದ ಒಂದು ಲಿಂಗವನ್ನು ಮಾಡಿ, ಭಕ್ತಿಪುರಸ್ಸರವಾಗಿ ತ್ರಿನೇತ್ರನನ್ನು ಭಜಿಸಿ, ಪುನಃ ಕಾಳಗಕ್ಕೆ ನಿಂತನು. ತಾನು ಮಾಡಿದ ಪೂಜಾದ್ರವ್ಯವೆಲ್ಲವೂ ಕಿರಾತನ ತಲೆಯ ಮೇಲೆ ಇದ್ದುದನ್ನು ಕಂಡು, ಆಶ್ಚರ್ಯಭರಿತನಾಗಿ, ಭಯದಿಂದ ನಡುಗುತ್ತ, ಕಿರಾತವೇಷಧಾರಿಯಾದ ಮಹಾದೇವನ ಪಾದದ ಮೇಲೆ ಬಿದ್ದು, ತನ್ನ ಅಪರಾಧವನ್ನು ಕ್ಷಮಿಸಿ ರಕ್ಷಿಸೆಂದು ಬಹುವಾಗಿ ಬೇಡಿಕೊಂಡನು.

ಮಹಾದೇವನು ಪ್ರೀತಿಯಿಂದ ಅವನ ಅಂಗಾಂಗವನ್ನೆಲ್ಲ ತಡವರಿಸುತ್ತ, ಅವನನ್ನು ಬಾಚಿ ಅಪ್ಪಿಕೊಂಡು, "ಮಗನೇ, ಸುಪ್ರೀತನಾದೆನು. ಬೇಕಾದ ವರ ಬೇಡು, ನೀಡುವೆನು" ಎಂದನು. ಆಗ ಅರ್ಜುನನು ಮಹಾದೇವನನ್ನು ಸ್ತುತಿಸುತ್ತ "ಪಾಶುಪತಾಸ್ತ್ರ ಕೊಡು" ಎಂದು ಬೇಡಿದನು ಆಗ ಈಶ್ವರನು, ಆ ಅಸ್ತ್ರದ ಪ್ರಯೋಗೋಪಸಂಹಾರಗಳ ರಹಸ್ಯವನ್ನು ಅರ್ಜುನನಿಗೆ ಉಪದೇಶಮಾಡಿ, ಗಾಂಡೀವ ಧನುಸ್ಸನ್ನು ಪುನಃ ಅವನಿಗೆ ಕೊಟ್ಟು, ಸ್ವರ್ಗಕ್ಕೆ ಹೋಗುವಂತೆ ಅಪ್ಪಣೆ ಮಾಡಿ, ಅಂತರ್ಧಾನನಾದನು.

ಇತ್ತ ಅರ್ಜುನನನ್ನು ನೋಡಲು ವರುಣನೂ, ಕುಬೇರನೂ, ಯಮಧರ್ಮನೂ ಅಲ್ಲಿಗೆ ಬಂದರು. ಈಶ್ವರನಿಂದ ಪ್ರಸಾದಿತನಾದ ಪಾರ್ಥನನ್ನು ನೋಡಿ, ಆನಂದದಿಂದ ಅಪ್ಪಿಕೊಂಡು, ತಮ್ಮ ತಮ್ಮ ದಿವ್ಯಾಸ್ತ್ರಗಳನ್ನು ಕೊಟ್ಟರು. ಆ ವೇಳೆಗೆ ಇಂದ್ರನಿಂದ ಆಜ್ಞಪ್ತನಾದ ಮಾತಲಿಯು ರಥವನ್ನು ತಂದು ಅರ್ಜುನನ ಮುಂದೆ ನಿಲ್ಲಿಸಿದನು. ವರುಣನಿಗೂ ಕುಬೇರನಿಗೂ, ಯಮನಿಗೂ ನಮಸ್ಕಾರಮಾಡಿ, ಅವರ ಅಪ್ಪಣೆಯನ್ನು

ಪಡೆದು ದೇವೇಂದ್ರನಂತೆ ಒಪ್ಪುತ್ತಿರುವ ಅರ್ಜುನನು, ರಥಾರೂಢನಾಗಿ, ಸ್ವರ್ಗಲೋಕದ ರಾಜಧಾನಿಯಾದ ಅಮರಾವತಿಯನ್ನು ಹೊಕ್ಕನು.

ಅಲ್ಲಿ ಇಂದ್ರನ ಅರಮನೆಯಲ್ಲಿ ವಾಸಮಾಡುತ್ತ, ಆತನ ಹಸ್ತದಿಂದಲೇ ದಿವ್ಯಾಸ್ತ್ರಗಳ ಪ್ರಯೋಗೋಪಸಂಹಾರಗಳನ್ನು ಶಿಕ್ಷಾಪೂರ್ವಕವಾಗಿ ಅಭ್ಯಾಸಮಾಡುತ್ತ, ಇಂದ್ರನಿಗೆ ಪ್ರಿಯವಾಗಿಯೂ, ಶತ್ರುಗಳಿಗೆ ದುಸ್ಸಹವಾಗಿಯೂ ಇರುವ ವಜ್ರಾಸ್ತ್ರವನ್ನೂ, ಅಶನಿನಾಮಕವಾದ ಅಸ್ತ್ರವನ್ನೂ, ಇನ್ನೂ ಅನೇಕ ಅಸ್ತ್ರಗಳನ್ನೂ ಸಂಗ್ರಹಿಸಿ, ಐದು ವರ್ಷಗಳ ಕಾಲ ಅಲ್ಲಿಯೇ ಇದ್ದನು. ಈ ಮಧ್ಯೆ ಇಂದ್ರನಿಂದ ಆಜ್ಞಪ್ತನಾದ ಚಿತ್ರಸೇನನು ಅರ್ಜುನನಿಗೆ ನೃತ್ಯ ಗೀತ ವಾದ್ಯಗಳನ್ನು ಕಲಿಸಿಕೊಟ್ಟನು. ಅವನಿಂದ ಗಾಂಧರ್ವ ವೇದವನ್ನೂ ಸಾಂಗವಾಗಿ ಅಭ್ಯಾಸಮಾಡಿದನು. ಯಾವುದಕ್ಕೂ ಕೊರತೆಯಿಲ್ಲದೆ, ಸಕಲ ಭೋಗ ಸಂಪನ್ನನಾಗಿ, ಇಂದ್ರನ ಅರಮನೆಯಲ್ಲಿದ್ದರೂ, ಯಾವಾಗಲೂ ತನ್ನ ಅಣ್ಣ ತಮ್ಮಂದಿರುಗಳನ್ನು ನೆನೆಯುತ್ತ, ಮನಸ್ಸಿಗೆ ನೆಮ್ಮದಿಯಿಲ್ಲದೆ ಇದ್ದನು.

ಹೀಗೆ ಅಗಲಿಕೆಯ ದುಃಖದಿಂದ ಕೊರೆಯುತ್ತಿದ್ದ ಅರ್ಜುನನು, ಒಂದು ದಿವಸ ಸಿಂಹಾಸನಾರೂಢನಾಗಿದ್ದ ಇಂದ್ರನ ಅರ್ಧಾಸನದಲ್ಲಿ, ತಾನೂ ಪ್ರಕಾಶಿಸುತ್ತಿದ್ದನು. ಆಜಾನುಬಾಹುವಾಗಿಯೂ, ವಿಶಾಲವಕ್ಷಸ್ಥಲನಾಗಿಯೂ, ಅವಯವ ಸೌಷ್ಠವವುಳ್ಳವನಾಗಿಯೂ, ಶುಭಲಕ್ಷಣಯುಕ್ತನಾಗಿಯೂ ಇದ್ದ ಅರ್ಜುನನು ಬಾಡಿದ ಮುಖವುಳ್ಳವನಾಗಿದ್ದರೂ ನೋಡುವುದಕ್ಕೆ ಏನೋ ಒಂದು ಬಗೆ ಮನೋಹರನಾಗಿದ್ದನು. ತ್ರೈಲೋಕ್ಯ ಸುಂದರಿಯಾದ ಊರ್ವಶಿಯ ದೃಷ್ಟಿಯು ಅರ್ಜುನನ ಮೇಲೆ ಬಿದ್ದಿತು. ಅರ್ಜುನನೂ ಅವಳನ್ನು ದೃಷ್ಟಿಸಿ ಒಂದರೆಘಳಿಗೆ ನೋಡಿದನು. ನೋಟಗಳೆರಡೂ ಬೆರೆತವು. ಮೋಹಜಾಲದಲ್ಲಿ ಸಿಕ್ಕಿ ನರಳುತ್ತಿದ್ದ ಊರ್ವಶಿಯು ತನ್ನಂತೆಯೇ ಕಾಮಪೀಡಿತನಾಗಿ ತನ್ನನ್ನೂ ನೋಡಿದನೆಂದು ತಿಳಿದುಕೊಂಡಳು. ಯಾರಾದರೇನು ! ಸ್ತ್ರೀಪುರುಷವ್ಯಾಮೋಹ

ವೆಂಬ ಸಹಜಧರ್ಮವು ಅತಿ ಪ್ರಬಲವಾದುದು. ಅದರ ಸಿಕ್ಕಿನಿಂದ ತಪ್ಪಿಸಿಕೊಳ್ಳುವವರು ಅತಿ ವಿರಳ. ಅರಿಷಡ್ವರ್ಗಗಳನ್ನು ಜಯಿಸಿರುವ ಮಹರ್ಷಿಗಳಿಗೂ ಅದರ ಬಾಧೆ ತಪ್ಪದು. ಸ್ತ್ರೀ ಯ ರಿ ಗ ೦ ತೂ ಅದರಿಂದ ತಪ್ಪಿಸಿಕೊಳ್ಳುವುದು ಅತಿ ದುರ್ಲಭವು. ಪುರುಷವ್ಯಾಮೋಹ ಸಹಜಬುದ್ಧಿಯಿದ್ದು ಅರ್ಜುನನ್ನು ತನ್ನವಸನನ್ನಾಗಿ ಮಾಡಿಕೊಳ್ಳಬೇಕೆಂಬ ತವಕವು ಊರ್ವಶಿಗೆ ಉಂಟಾಯಿತು. ಮುಂದಿನ ಕಾರ್ಯದ ಕಾರಣಗಳನ್ನು ಕಂಡು ಬಲ್ಲವರಾರು? ಪಟ್ಟಮಹಿಷಿಯಂತೆ ಇಂದ್ರನಿಗೆ ವಿಲಾಸಲಾಗಿದ್ದ ಊರ್ವಶಿಯು ಅಂದು ತನ್ನ ಸ್ಥಾನವನ್ನು ಮರೆತಳು. ಅರ್ಜುನನು ತನ್ನಮಗನಿಗೆ ಸಮನೆಂಬುದು ಅಂದು ಅವಳ ಸ್ಮೃತಿಪಥಕ್ಕೆ ಸಿಕ್ಕದೆ ಹೋಯಿತು. ಬೆಂಕಿಗೆ ಬಿದ್ದ ಪತಂಗದ ಹುಳುವಿನಂತೆ ತಾಪವನ್ನು ಸಹಿಸಲಾರದವಳಾಗಿ ಸಂಜೆಯಾಗುವುದನ್ನೇ ಇದಿರು ನೋಡುತ್ತಿದ್ದಳು.

ರಾತ್ರಿಯಾಯಿತು. ದಿವ್ಯವಾದ ಗಂಧವನ್ನು ತೊಡೆದುಕೊಂಡು ಘಮಘಮಿಸುವ ಪರಿಮಳವನ್ನು ಬೀರುವ ಪುಷ್ಪಗಳನ್ನು ಮುಡಿದುಕೊಂಡು, ಆಭರಣಗಳಿಂದಲಂಕೃತಳಾಗಿ, ಮಿಂಚಿನ ಬಳ್ಳಿಯಂತೆ ಪ್ರಕಾಶಿಸುತ್ತ ರತಿಯೋ ಎಂಬಂತೆ ಕಾಣಿಸುತ್ತ ಅರ್ಜುನನಿದ್ದಲ್ಲಿ ಹೋದಳು. ಅರ್ಜುನನು ಇವಳು ಬಂದುದನ್ನು ನೋಡಿ ಸಂಶಯಗ್ರಸ್ತನಾಗಿ ತನ್ನ ಆಸನವನ್ನು ಬಿಟ್ಟೆದ್ದು ನಮಸ್ಕಾರ ಮಾಡಿ, ಮರ್ಯಾದೆಯಿಂದ ಕುಳ್ಳಿರಿಸಿದನು. ತಾಪವನ್ನು ನೀಗಿ ಸುಖವನ್ನನುಭವಿಸಬೇಕೆಂದು ಬಂದ ಊರ್ವಶಿಗೆ ಇಚ್ಛಾಭಂಗವಾಯಿತು. "ತಾಯಿಯಂತಿರುವ ನಿನ್ನೊಡನೆ ಬೆರೆಯಲಾರೆನು." ಎಂದು ಖಂಡಿತವಾಗಿ ಹೇಳಿಬಿಟ್ಟನು. ಊರ್ವಶಿಗೆ ಮನಸ್ಸೊಡೆಯಿತು. ಕೋಪವು ಉಕ್ಕಿತು; ತಡೆಯಲಾರದೆ "ನಪುಂಸಕನಾಗು" ಎಂದು ಶಪಿಸಿ, ಹೃದಯ ವೇದನೆಯನ್ನು ಸಹಿಸಲಾರದವಳಾಗಿ ಅಲ್ಲಿ ನಿಲ್ಲದೆ, ಸರ್ರನೆ ಸ್ಥಳ ಬಿಟ್ಟು ಹೊರಟು ಹೋದಳು. ಈ ಸಂಗತಿಯು ಇಂದ್ರನಿಗೆ ವರದಿಯಾಯಿತು; ನಸುನಗುತ್ತ "ಅಜ್ಞಾತವಾಸ

ಕಾಲದಲ್ಲಿ ಈ ಶಾಪಫಲವನ್ನು ಒಂದು ವರ್ಷಕಾಲ ಅನುಭವಿಸು" ಎಂದು ಕರುಣಿಸಿದನು.

ಹೀಗೆ ತನಗೆ ಮುಂದೆ ಉಪಯೋಗಕ್ಕೆ ಬರಬಹುದಾದುದನ್ನೆಲ್ಲ ಸಂಗ್ರಹಿಸಿಕೊಂಡು ದೇವತೆಗಳಿಗೆ ಕಂಟಕರಾದ ನಿವಾತ ಕವಚರನ್ನೂ ಹಿರಣ್ಯಪುರದ ರಾಕ್ಷಸರನ್ನೂ ಸಂಹರಿಸಿ, ದೇವೇಂದ್ರನ ಅಪ್ಪಣೆಯನ್ನು ಪಡೆದು, ಗಂಧಮಾದನ ಪರ್ವತದ ಮೇಲಿದ್ದ ಕುಬೇರನ ಅರಮನೆಯಲ್ಲಿ ವಾಸ ಮಾಡುತ್ತಿದ್ದ ತನ್ನ ಸಹೋದರರಲ್ಲಿಗೆ ಬಂದನು.

ಅರ್ಜುನನು ಬಂದ ವೇಳೆಗೆ ಸರಿಯಾಗಿ ತನಗೆ ಪ್ರಾಣದಂತಿರುವ ಪಾಂಡವರನ್ನು ನೋಡಿಕೊಂಡು ಹೋಗುವುದಕ್ಕಾಗಿ ದ್ವಾರಕಾನಗರದಿಂದ ಕೃಷ್ಣನೂ ಅಲ್ಲಿಗೆ ಹೋದನು. ಎಲ್ಲರೂ ಅರ್ಜುನನನ್ನು ಬಹುವಾಗಿ ಶ್ಲಾಘಿಸಿದರು. ಕೃಷ್ಣನು ಭೀಮನನ್ನು ಮೂದಲಿಸುವಂತೆ ಕೆಲವು ಮಾತುಗಳನ್ನಾಡಿದನು. ಭೀಮನಿಗೆ ಅದು ಸಹನೆ ಬರಲಿಲ್ಲ. ಕೂಡಲೆ ಕೋಪವುಂಟಾಯಿತು. ಕೋಪದ ಕೊನೆಯು ಕೃಷ್ಣಾರ್ಜುನರಲ್ಲಿ ಪ್ರತಿಫಲಿಸದೆ, ಶಿವನನ್ನು ಪ್ರತ್ಯಕ್ಷ ಮಾಡಿಕೊಳ್ಳುವುದರಲ್ಲಿ ಪರ್ಯವಸಾನವಾಯಿತು. ಆಗ ಭೀಮನು "ಈಶ್ವರನನ್ನು ಪ್ರತ್ಯಕ್ಷ ಮಾಡಿಕೊಳ್ಳುವುದಕ್ಕೆ ಇಂದ್ರಕೀಲಕ್ಕೆ ಹೋಗಬೇಕೆ? ಇದ್ದಲ್ಲಿಯೇ ಈಶ್ವರನು ಬರುವಂತೆ ಮಾಡುವೆನು" ಎಂದು ಹೇಳಿ ತನ್ನ ಗದೆಯನ್ನು ತಿರುಗಿಸಿ ಮೇಲಕ್ಕೆಸೆದು, 'ಈ ಗದೆಯು ಕೆಳಗೆ ಬರುವುದರೊಳಗಾಗಿ ಶಿವನು ಪ್ರತ್ಯಕ್ಷನಾಗದಿದ್ದರೆ ಈ ಎದೆಯನ್ನೊಡ್ಡಿ ಪ್ರಾಣ ಬಿಡುವೆನು' ಎಂದು ಹೇಳುತ್ತ ಏಕಾಗ್ರಚಿತ್ತದಿಂದ ಪಾರ್ವತೀಪತಿಯನ್ನು ಧ್ಯಾನಿಸುತ್ತ ಅದು ಬೀಳುವ ಸ್ಥಳಕ್ಕೆ ಸರಿಯಾಗಿ ತನ್ನ ಎದೆಯನ್ನೊಡ್ಡಿದನು. ಗದೆಯು ಎದೆಗೆ ತಾಕುವ ವೇಳೆಗೆ ಸರಿಯಾಗಿ ಪರಮೇಶ್ವರನು ಅಲ್ಲಿಗೆ ಬಂದು ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಏಕಾಗ್ರಚಿತ್ತದಿಂದ ತನ್ನನ್ನೇ ಸ್ಮರಿಸುತ್ತಿರುವ ಭೀಮನನ್ನು ಬಾಚಿ ತಬ್ಬಿಕೊಂಡು, "ನಿನ್ನ ಭಕ್ತಿಗೆ ಮೆಚ್ಚಿದೆನು. ಮಗನೇ,

ಬೇಕಾದ ವರ ಬೇಡು, ಕೊಡುವೆನು'' ಎಂದನು. ''ನಾನು ನೀನೇ ಆಗಬೇಕು'' ಎಂದನು ''ಮುಂದೆ ನಡೆಯುವ ಕುರುಕ್ಷೇತ್ರದ ಯುದ್ಧ ಕಾಲದಲ್ಲಿ ಒಂದೂವರೆ ತಾಸು ನೀನು ನಾನೇ ಆಗುವೆ'' ಎಂದು ಕರುಣಿಸಿ ಕಣ್ಮರೆಯಾದನು.

ವನವಾಸದ ವಾಯಿದೆಯು ಮುಗಿಯುತ್ತ ಬಂದಿತು. ಕವಚ ಕುಂಡಲಧಾರಿಯಾದ ರಾಧೇಯನನ್ನು ಯಾರೂ ಸಂಹರಿಸಲಾರರೆಂಬ ಭಯವು ಧರ್ಮರಾಯನನ್ನು ಹಗಲೂ ರಾತ್ರಿ ಬಹುವಾಗಿ ಬಾಧಿಸುತ್ತಿತ್ತು. ಹೀಗೆ ಮನಶ್ಶಾಂತಿಯಿಲ್ಲದೆ ಒದ್ದಾಡುತ್ತಿರುವ ಧರ್ಮಜನಲ್ಲಿಗೆ ಇಂದ್ರನು ಬಂದು ''ಹೆದರಬೇಡ, ನೆಮ್ಮದಿಯಿಂದಿರು; ನಾನು ನಿನಗೆ ನೆರವಾಗಿ ಕರ್ಣನಿಂದ ಕವಚ ಕುಂಡಲಗಳನ್ನು ಅಪಹರಿಸುವೆನು'' ಎಂದನು. ಕೂಡಲೆ ಇಂದ್ರನು ಬ್ರಾಹ್ಮಣವೇಷಧಾರಿಯಾಗಿ ಯಾಚಕ ಬೇಡಲಿಕ್ಕೆ ಕರ್ಣನ ಬಳಿಗೆ ಹೋದನು. ಆಗ ಕರ್ಣನ ತಂದೆಯಾದ ಸೂರ್ಯನು, ''ನಿನ್ನ ಕವಚ ಕುಂಡಲಗಳನ್ನು ಅಪಹರಿಸಲು ಬ್ರಾಹ್ಮಣ ವೇಷದಿಂದ ಇಂದ್ರನು ಬಂದಿರುವನು; ಕೊಡಬೇಡ. ನಿನ್ನ ಹಿತಕ್ಕಾಗಿ ಮೊದಲೇ ನಿನಗೆ ತಿಳಿಸಿರುವೆನು'' ಎಂದು ಕಿವಿಯಲ್ಲಿ ಊದಿ ಹೊರಟು ಹೋದನು. ಬೇಡಿದವರಿಗೆ ನೀಡುವುದೇ ಹುಟ್ಟುಗುಣವಾಗುಳ್ಳ ಕರ್ಣನು ಗಂಗಾತೀರದಲ್ಲಿ ಗಾಯತ್ರೀ ಜಪವನ್ನು ಮಾಡುತ್ತಿದ್ದನು. ಕೂಡಲೆ ಕಣ್ತೆರೆದು ಬ್ರಾಹ್ಮಣವೇಷದಲ್ಲಿದ್ದ ಇಂದ್ರನನ್ನು ಕಂಡು ''ಕವಚ ಕುಂಡಲಗಳಿಗಾಗಿ ಬಂದಿರುವ ನೀನು ಬ್ರಾಹ್ಮಣನಲ್ಲ. ಅವುಗಳನ್ನು ಕೊಡಲಾರೆ. ಅವುಗಳಿಗೆ ಪ್ರತಿಯಾಗಿ ನನಗೆ ಏನಾದರೂ ಕೊಟ್ಟರೆ, ನೀನು ಅವುಗಳನ್ನು ಸ್ವೀಕರಿಸಬಹುದು. ಸುಮ್ಮನೆ ಬೇರೆ ಕೊಡತಕ್ಕವನಲ್ಲ'' ಎಂದನು. ಆಗ ಇಂದ್ರನು ''ನನ್ನಲ್ಲಿರುವ ಶಕ್ತ್ಯಾಯುಧವನ್ನು ನಿನಗೆ ಕೊಡುವೆನು. ಆದರೆ ನಿನಗೆ ಭಯಪ್ರಾಪ್ತವಾದಾಗ ಒಬ್ಬ ವೀರನ ಮೇಲೆ ಮಾತ್ರ ಪ್ರಯೋಗಿಸಬೇಕು. ಒಂದಾವೃತ್ತಿ ಪ್ರಯೋಗಿಸಿದ

ಮೇಲೆ ಮತ್ತೊಂದಾವೃತ್ತಿ ಪ್ರಯೋಗಿಸಕೂಡದು. ಇದಕ್ಕೊಪ್ಪಿದರೆ ಸನ್ನ ಶಕ್ತ್ಯಾಯುಧವನ್ನು ಕೊಡುವೆನು " ಎಂದನು. ಅದಕ್ಕೊಪ್ಪಿ ಕರ್ಣನು ಇಂದ್ರನ ಪ್ರಭಾವದಿಂದ ತನ್ನ ಶರೀರಕ್ಕೆ ಸ್ವಲ್ಪವೂ ಅಪಾಯುವಾಗದಂತೆ ತನ್ನ ಕವಚ ಕುಂಡಲಗಳನ್ನು ತೆಗೆದು ಕೊಟ್ಟು ' ಏಕವೀರಘಾತಿನಿ ' ಎಂಬ ಶಕ್ತ್ಯಾಯುಧವನ್ನು ಪಡೆದು ಶತ್ರುಗಳ ಶರಘಾತದಿಂದ ಅಭೇದ್ಯನಾಗಿದ್ದ ಕರ್ಣನು ಅಂದು ಮೊದಲು ಭೇದ್ಯನಾದನು.



|| ಶ್ರೀ ||

## ಎರಡನೆಯ ಅಧ್ಯಾಯ

# ಪರಾಕ್ರಮ ಪ್ರದರ್ಶನ

---

ಎಲ್ಲೆಲ್ಲೂ ಅಂಧಕಾರಮಯವಾಗಿತ್ತು. ಭಯಂಕರವಾಗಿಯೂ, ರಾಕ್ಷಸರ ಆವಾಸಸ್ಥಾನವಾಗಿಯೂ, ಇದ್ದ ಕಾಮ್ಯಕವನವನ್ನು ಒಂದು ನಡುರಾತ್ರಿ ಪಾಂಡವರು ಪ್ರವೇಶಮಾಡಿದರು. ರಾತ್ರಿಕಾಲವೇ ರಾಕ್ಷಸರ ಸಂಚಾರ; ಮನುಷ್ಯರೇ ಅವರ ಆಹಾರ. ಅಲ್ಲಿ ವಾಸಮಾಡುತ್ತಿದ್ದ ಋಷಿಗಳೂ ವನಚಾರಿಗಳಾದ ಗೋಪಾಲಕರೂ ರಾತ್ರಿ ವೇಳೆಯಲ್ಲಿ ಆ ಸ್ಥಳವನ್ನು ಬಿಟ್ಟು ದೂರ ಹೋಗುತ್ತಿದ್ದರು. ಸ್ಥಳ ವಿದ್ಯಮಾನ ಪರಿಚಯವಿಲ್ಲದ ಪಾಂಡವರು ಭಯಂಕರವಾದ ಅರ್ಧರಾತ್ರಿ ಸಮಯದಲ್ಲಿ ಎಲ್ಲರೂ ನಿದ್ದೆ ಮಾಡುತ್ತಿರುವಾಗ ನಿಶ್ಶಬ್ದವಾಗಿ ಆ ವನದಲ್ಲಿ ಹೋಗುತ್ತಿರಲು ನೀಲಮೇಘದಂತೆ ಕಾಣುವ ಅದ್ಭುತಾಕಾರನಾದ ಕಿರ್ಮೀರನು ಅವರ ದಾರಿಯನ್ನು ಅಡ್ಡಗಟ್ಟಿ ಬಹಳವಾಗಿ ಗರ್ಜಿಸಿದನು. ನಿಶ್ಶಬ್ದವಾಗಿದ್ದ ವನವೆಲ್ಲವೂ ಭಯಂಕರವಾದ ಧ್ವನಿಯಿಂದ ತುಂಬಿತು. ಮಾಯಾವಿಯಾದ ರಾಕ್ಷಸನು ಮೈನಾಕದಂತೆ ಇವರ ದಾರಿಯಲ್ಲಿ ಕಾಣಿಸಿಕೊಂಡನು. ರಕ್ಷೋಘ್ನವಾದ ನಾನಾಮಂತ್ರಗಳನ್ನು ಪ್ರಯೋಗಿಸಿ ಧೌಮ್ಯನು ಮಾಯೆಯನ್ನು ತಪ್ಪಿಸಿದನು. ಕಿರ್ಮೀರನು ನಿಜರೂಪವನ್ನು ತಾಳಿ ಪಾಂಡವರ ಮುಂದೆ ನಿಂತನು ಆಗ ಧರ್ಮರಾಯನು ಅವನನ್ನು ಕುರಿತು "ನೀನು ಯಾರು ? ಯಾರ ಮಗ ? ನಿನ್ನ ಕೆಲಸವೇನು ? ಹೇಳು" ಎಂದನು. ಆಗ ಅವನು "ನಾನು ಬಕಾಸುರನ ಒಡಹುಟ್ಟಿದವನು. ನನ್ನನ್ನು ಕಿರ್ಮೀರನೆಂದು ಕರೆಯುವರು, ಯುದ್ಧದಲ್ಲಿ ಮನುಷ್ಯ

ರನ್ನು ಸೋಲಿಸಿ, ಅವರನ್ನು ಆಹಾರಮಾಡಿಕೊಂಡು ನಿರ್ಭಯವಾಗಿ ಇಲ್ಲಿ ಸಂಚರಿಸುತ್ತಿರುವೆನು. ಈಗ ನೀವು ನನಗೆ ಆಹಾರವಾಗಿ ಬಂದಿರು ವಿರಿ. ನಿಮ್ಮನ್ನು ಕೊಂದು ನನ್ನ ಕ್ಷುದ್ಬಾಧೆಯನ್ನು ಪರಿಹರಿಸಿಕೊಳ್ಳು ವೆನು ; ನೀವು ಯಾರು ?" ಎಂದನು.

ಆಗ ಧರ್ಮಜನು ತಾನು ರಾಜ್ಯ ಕಳೆದುಕೊಂಡು ತಮ್ಮಂದಿರೊ ಡನೆ ವನವಾಸಕ್ಕಾಗಿ ಹೊರಟಿರುವ ವೃತ್ತಾಂತವನ್ನು ತಿಳುಹಿಸಲು ಕಿರ್ಮ್ಮಾರನಿಗೆ ಹಿಂದಿನ ನೆನಪು ಬಂದು "ಹಗೆ ತೀರಿಸಿಕೊಳ್ಳಲು ಕಾಲವು ಸನ್ನಿಹಿತವಾಯಿತು; ನನ್ನ ಸಹೋದರನನ್ನು ಸಂಹರಿಸಿದ ಭೀಮಸೇನ ನನ್ನು ಸಂಹರಿಸಬೇಕೆಂದು ಆಯುಧಪಾಣಿಯಾಗಿ ಎಲ್ಲೆಲ್ಲೂ ಹುಡುಕು ತ್ತಿದ್ದೆನು. ಇದುವರೆಗೂ ಅವನು ಸಿಕ್ಕಿಯೇ ಇರಲಿಲ್ಲ. ಈಗ ತಾನಾ ಗಿಯೇ ಸಿಕ್ಕಿರುವನು. ಈತನನ್ನು ಕೊಂದು ಈತನ ರಕ್ತದಿಂದ ಬಕನಿಗೆ ತರ್ಪಣಕೊಟ್ಟು ನನ್ನ ಹಗೆ ತೀರಿಸಿಕೊಂಡು, ರಾಕ್ಷಸ ಕಂಟಕನಾದ ಈತನನ್ನು ತಿಂದು ಜೀರ್ಣಿಸಿಕೊಳ್ಳುವೆನು" ಎಂದನು.

ಈ ಮಾತುಗಳನ್ನು ಕೇಳುತ್ತಿದ್ದ ಭೀಮಸೇನನಿಗೆ ಕೂಡಲೆ ರೌದ್ರಾ ವೇಶವು ಬಂತು. ಕಣ್ಣುಗಳು ಕೆಂಪಾದುವು; ಹುಬ್ಬುಗಳು ಗಂಟಿಕ್ಕಿಕೊಂ ಡುವು ; ಮೀಸೆಯು ಎದ್ದು ನಿಂತಿತು. ಧಮನಿಯಲ್ಲಿ ರಕ್ತವು ವೇಗವಾಗಿ ಪ್ರವಹಿಸಲು ಮೊದಲಾಯಿತು. ಕಟಕಟನೆ ಹಲ್ಲುಗಳನ್ನು ಕಡಿಯುತ್ತ ಸಮೀಪದಲ್ಲಿದ್ದ ವೃಕ್ಷವನ್ನು ಕಿತ್ತುಕೊಂಡು ಎಲೆಗಳನ್ನು ತರಿದು ಕಿರ್ಮ್ಮಾ ರನೊಡನೆ ಕುಸ್ತಿಗೆ ಸಿದ್ಧನಾದನು. ಆ ರಾಕ್ಷಸನು ಮತ್ತೊಂದು ವೃಕ್ಷ ವನ್ನು ಕಿತ್ತುಕೊಂಡು ದಂಡಧಾರಿಯಾದ ಯಮನಂತೆ ಭೀಮನ ಮೇಲೆ ಬಿದ್ದನು. ಇಬ್ಬರಿಗೂ ಸ್ವಲ್ಪಕಾಲ ಯುದ್ಧವಾಯಿತು. ಕಿರ್ಮ್ಮಾರನು ಭೀಮನ ಪೆಟ್ಟುಗಳನ್ನು ತಡೆಯಲಾರದೆ ನಿತ್ರಾಣನಾಗಿ ಕೆಳಗೆ ಬಿದ್ದನು ಶರೀರವೆಲ್ಲವೂ ನಜ್ಜುಗುಜ್ಜಾಗಿ ಹೋಯಿತು. ಕಣ್ಣುಗುಡ್ಡೆ ಮೇಲಾ ಯಿತು. ಶ್ವಾಸವು ಮೆತ್ತಗಾಗುತ್ತ ಬಂತು. ಪರ್ವತಾಕಾರವಾಗಿದ್ದ ಅವನ

ಹೆಣವನ್ನು ಅಲ್ಲೇ ಒಂದುಕಡೆ ಬಿಸಾಡಿ ದ್ರೌಪದಿಯನ್ನು ಮುಂದೆಮಾಡಿಕೊಂಡು ಯಥೇಚ್ಛವಾಗಿ ನಿರಾತಂಕದಿಂದ ಮುಂದೆ ನಡೆದರು.

ಹೀಗೆ ಯಥೇಚ್ಛವಾಗಿ ಕಾಡಿನಲ್ಲಿ ಸಂಚಾರ ಮಾಡುತ್ತ, ತೀರ್ಥಯಾತ್ರಾಸೇವದಿಂದ ಪಾಂಡವರು ಗಂಧಮಾದನ ಪರ್ವತದ ತಪ್ಪಲಿನಲ್ಲಿ ಅರ್ಜುನನ ಆಗಮನವನ್ನು ನಿರೀಕ್ಷಿಸುತ್ತ ವಾಸ ಮಾಡಿಕೊಂಡಿರಲು, ದುಷ್ಟಾತ್ಮನೂ ಪಾಪಬುದ್ಧಿಯುಳ್ಳವನೂ ಆದ ಜಟಾಸುರನು, ಅನೇಕ ಶಾಸ್ತ್ರಗಳನ್ನು ಬಲ್ಲ ಬ್ರಾಹ್ಮಣನಂತೆ ನಟಿಸುತ್ತ, ಧರ್ಮರಾಯನ ಸಮೀಪದಲ್ಲಿ ಬಂದು ಸೇರಿಕೊಂಡನು. ಅವರ ಧನುರ್ಬಾಣಗಳನ್ನೂ, ಬತ್ತಳಿಕೆಗಳನ್ನೂ, ದ್ರೌಪದಿಯನ್ನೂ ಅಪಹರಿಸಿಕೊಂಡು ಹೋಗಬೇಕೆಂಬುದೇ ಅವನ ಮುಖ್ಯಧ್ಯೇಯವಾಗಿತ್ತು. ಭೀಮನಿಲ್ಲದಿರುವ ಕಾಲವನ್ನೇ ಕಾಯುತ್ತಿದ್ದನು. ಭೀಮನಿಗೇನೋ ಅವನು ಬಂದಾಗಲೇ ಸಂಶಯ; ಪರ್ಣಶಾಲೆಯಲ್ಲಿರುವಾಗಲೆಲ್ಲ ಅವನ ಚರ್ಯೆಗಳಲ್ಲಿಯೇ ಭೀಮನ ದೃಷ್ಟಿ.

ಜಟಾಸುರನು ಭೀಮನಿಲ್ಲದಿರುವ ಕಾಲವನ್ನೇ ಹೊಂಚು ಹಾಕುತ್ತಿದ್ದನು. ಒಂದು ದಿವಸ ಭೀಮನೊಬ್ಬನೇ ಬೇಟೆಗೆ ಹೋಗಿದ್ದನು. ಲೋಮಶನೂ, ಧೌಮ್ಯನೂ, ಇತರ ಬ್ರಾಹ್ಮಣರೂ ಸ್ನಾನಾರ್ಥವಾಗಿ ನದಿಗೆ ಹೋಗಿದ್ದರು. ಘಟೋತ್ಕಚನು ವಿಹಾರಾರ್ಥವಾಗಿ ತನ್ನ ಪರಿವಾರದೊಡನೆ ಎಲ್ಲೋ ದೂರ ಹೋಗಿದ್ದನು ಧರ್ಮರಾಯ, ದ್ರೌಪದಿ, ನಕುಲ ಸಹದೇವರು ಮಾತ್ರ ಅಲ್ಲಿದ್ದರು. ಆಗ ಜಟಾಸುರನು ತನ್ನ ಘೋರರೂಪವನ್ನು ತಾಳಿ ಧರ್ಮರಾಯ, ದ್ರೌಪದಿ, ನಕುಲ, ಸಹದೇವರನ್ನೆತ್ತಿಕೊಂಡು ಧನುರ್ಬಾಣಗಳನ್ನು ಕಟ್ಟಿ ಕಂಕುಳಲ್ಲಿರಿಸಿಕೊಂಡು ಹೊರಟನು. ಸಹದೇವನು ರಾಕ್ಷಸನಿಂದ ನುಲಿಚಿಕೊಂಡು 'ಭೀಮಾ, ಭೀಮಾ' ಎಂದು ಕೂಗುತ್ತ ಓಡಿದನು. ವೇಗವಾಗಿ ಹೋಗುತ್ತಿದ್ದ ರಾಕ್ಷಸನ ನಡಗೆಯನ್ನು ನಿಧಾನ ಮಾಡಲು ಧರ್ಮರಾಯನು ಅವನ

ಹೆಗ್ಗತ್ತಿನ ಮೇಲೆ ಬಲವಾಗಿ ಊರಿ ಕುಳಿತನು. ರಾಕ್ಷಸನ ಗತಿಯು ಮಂದವಾಯಿತು. ಅಲ್ಲೇ ಸ್ವಲ್ಪ ದೂರದಲ್ಲಿ ಬರುತ್ತಿದ್ದ ಭೀಮಸೇನನ ಕಿವಿಗೆ ಸಹದೇವನ ಧ್ವನಿಯು ಬಿತ್ತು. ಕೂಡಲೆ ಮೋಸಗಾರನಾದ ಆ ಬ್ರಾಹ್ಮಣನ ನೆನಪು ಬಂತು. ವಾಯುವೇಗದಿಂದ ಸಹದೇವನ ಸಮೀಪ ವನ್ನೈದಿ, ನಡೆದ ಸಂಗತಿಗಳನ್ನೆಲ್ಲ ಮನಸ್ಸಿಗೆ ತಂದುಕೊಂಡು ಯುದ್ಧ ಸನ್ನದ್ಧನಾಗಿ "ಎಲೋ, ರಾಕ್ಷಸಾಧಮ, ನಿಲ್ಲು ನಿಲ್ಲು," ಎಂದು ಕೂಗುತ್ತ ಅವನನ್ನು ಅಡ್ಡಗಟ್ಟಿದನು. ಧರ್ಮರಾಯಾದಿಗಳನ್ನು ಕೆಳಕ್ಕಿಳಿಸಿ ಜಟಾಸುರನೂ ಯುದ್ಧಕ್ಕೆ ಸನ್ನದ್ಧನಾದನು. ಇಬ್ಬರೂ ಹೋರಾಡಲು ತೊಡಗಿದರು. ಮೊದಲು ಬಾಹುಯುದ್ಧವಾಯಿತು. ಆಮೇಲೆ ಕಲ್ಲುಬಂಡೆಗಳಿಂದ ಪರಸ್ಪರ ಹೊಡೆದಾಟಕ್ಕೆ ಮೊದಲುಮಾಡಿದರು; ಆಮೇಲೆ ವೃಕ್ಷಗಳು. ಹೀಗೆ ಒಂದು ಮುಹೂರ್ತಕಾಲ ಇಬ್ಬರಿಗೂ ಜಗಳ ನಡೆಯಿತು. ಕೊನೆಗೆ ಭೀಮನು ವಜ್ರಕ್ಕೆ ಸಮಾನವಾದ ತನ್ನ ಕೈಯಿಂದ ರಾಕ್ಷಸನ ತಲೆಯ ಮೇಲೆ ಬಲವಾದ ಪೆಟ್ಟಿಕ್ಕಿದನು. ರಾಕ್ಷಸನು ಆ ಪೆಟ್ಟಿನಿಂದ ಬಹುವಾಗಿ ನೊಂದು ಮುಂದೆ ಕೈಮಾಡಲಾರದೆ ಹೋದನು. ಬಳಿಕ ಭೀಮನು ಅವನನ್ನು ಎತ್ತಿ ನೆಲದ ಮೇಲೆ ಕುಕ್ಕಿ ಅವನ ಶರೀರವೆಲ್ಲ ಜಜ್ಜುಜಜ್ಜಾಗುವಂತೆ ಹೊಸಕಿ ಮೊಳಗೈಯಿಂದ ಗುದ್ದಿ ಕತ್ತನ್ನು ಮುರಿದಿಕ್ಕಿದನು. ರಾಕ್ಷಸನ ಮೃತದೇಹವು ನೋಡುವುದಕ್ಕೆ ಭಯಂಕರವಾಗಿತ್ತು. ಶತ್ರುಸಂಹಾರಮಾಡಿ ಭೀಮನು ಧರ್ಮಜನ ಬಳಿ ನಿಂತನು. ಎಲ್ಲರೂ ಬಹುವಾಗಿ ಭೀಮನನ್ನು ಸ್ತೋತ್ರಮಾಡಿದರು.

ಇಲ್ಲಿ ಹೀಗೆ ಭೀಮನು ತನ್ನ ಪರಾಕ್ರಮಪ್ರದರ್ಶನ ಮಾಡುತ್ತಿರಲು, ಅತ್ತ ದೇವಲೋಕದಲ್ಲಿ ಅರ್ಜುನನಿಗೆ ತನ್ನ ಪರಾಕ್ರಮಪ್ರದರ್ಶನ ಮಾಡಲು ಸಮಯ ದೊರೆಯಿತು. ಸಕಲ ಅಸ್ತ್ರಗಳನ್ನೂ ಉಪದೇಶಮಾಡಿಕೊಟ್ಟ ಗುರುವಿಗೆ ಕಾಣಿಕೆಯನ್ನೊಪ್ಪಿಸುವುದು ಶಿಷ್ಯನ ಧರ್ಮ. ಇಂದ್ರನು ಅನೇಕ ದಿವ್ಯಾಸ್ತ್ರಗಳ ಪ್ರಯೋಗೋಪಸಂಹಾರಗಳನ್ನು ತಾನೇ

ಹೇಳಿ ಕೊಟ್ಟನು. ಪರಾಕ್ರಮವೊಂದು ವಿನಾ ಇಂದ್ರನಿಗೆ ಇಷ್ಟವಾದ ಅಪೂರ್ವವಾದ ವಸ್ತುಗಳೊಂದೂ ಅವನಲ್ಲಿರಲಿಲ್ಲ. ಆಗ ಇಂದ್ರನು ಎಲೈ ಸವ್ಯಸಾಚಿಯೇ, ಮೂರು ಲೋಕದಲ್ಲೂ ನಿನಗೆ ಅಸಾಧ್ಯವಾದ ಕಾರ್ಯವು ಯಾವುದೂ ಇಲ್ಲ. ನನಗೆ ಶತ್ರುಗಳಾದ ನಿವಾತ ಕವಚ ರೆಂಬ ಮೂರು ಕೋಟಿ ಮಂದಿ ದಾನವರು ದುರ್ಗಮವಾದ ಸಮುದ್ರ ದೊಳಗೆ ವಾಸ ಮಾಡುತ್ತಿರುವರು. ಅವರೆಲ್ಲರೂ ಸಮಾನಬಲವೂ, ಪರಾ ಕ್ರಮವೂ, ರೂಪೂ ಉಳ್ಳವರು. ಅವರನ್ನು ನೀನು ಜಯಿಸಿದುದೇ ಆದರೆ ನನಗೆ ಗುರುದಕ್ಷಿಣೆಯು ಸಲ್ಲುವುದು " ಎಂದನು. ಸಮರೋತ್ಸುಕನಾದ ಅರ್ಜುನನು " ನಿನ್ನ ಇಷ್ಟದಂತೆ ನಿನ್ನ ಶತ್ರುಗಳನ್ನು ಜಯಿಸಿ ನನ್ನ ಪರಾ ಕ್ರಮಕಾಣಿಕೆಯನ್ನು ನಿನ್ನ ಪಾದದಲ್ಲಿ ಒಪ್ಪಿಸುವೆನು " ಎಂದು ಹೇಳು ವುದರೊಳಗಾಗಿ ಮಾತಲಿಯು ರಥದೊಡನೆ ಸಿದ್ಧನಾದನು. ವಿಜಯಾ ರ್ಥವಾಗಿ ಅರ್ಜುನನು ರಥವನ್ನೇರಿದನು. ಯಾವ ಶಂಖದ ಪ್ರಭಾವದಿಂದ ಇಂದ್ರನು ಅನೇಕ ದಾನವಶ್ರೇಷ್ಠರನ್ನು ಜಯಿಸಿದ್ದನೋ ಆ ದೇವದತ್ತ ವೆಂಬ ಶಂಖವನ್ನು ದೇವತೆಗಳು ಅಂದು ಅರ್ಜುನನಿಗೆ ಅರ್ಪಿಸಿದರು. ಕುದುರೆಗಳು ಹಜ್ಜೆ ಇಕ್ಕಿದುವು ; ಎಲ್ಲರೂ ಜಯಘೋಷ ಮಾಡಿದರು.

ರಥವು ನಿವಾತ ಕವಚರ ಆವಾಸಸ್ಥಾನವನ್ನು ಮುಟ್ಟಿತು. ಅಲ್ಲಿ ಯಾರೊಡನೆ ಫಲುಗುಣನು ಯುದ್ಧಮಾಡಬೇಕು ? ರಾಕ್ಷಸರು ಮಾಯಾ ವಿಗಳು. ಯಾರೂ ಕಣ್ಣಿಗೆ ಬೀಳಲೇ ಇಲ್ಲ. ಆಗ ಅರ್ಜುನನು ದೇವದತ್ತ ವನ್ನು ಬಲವಾಗಿ ಊದಿದನು. ಕವಚಕುಂಡಲಧಾರಿಗಳಾದ ರಾಕ್ಷಸರು ಅರ್ಜುನನಿಗೆ ಕಾಣಿಸಿಕೊಂಡರು. ಮತ್ತು ಅನೇಕ ತೀಕ್ಷ್ಣವಾದ ಬಾಣ ಗಳನ್ನೂ ಪ್ರಯೋಗಿಸಿದರು. ಅರ್ಜುನನೂ ಅವರ ಮೇಲೆ ಪ್ರತಿಬಾಣಗ ಳನ್ನು ಪ್ರಯೋಗಿಸಿದನು. ಬಾಣಗಳಿಗೆ ಪ್ರತಿಬಾಣಗಳನ್ನೂ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನೂ ಪ್ರಯೋಗಿಸುತ್ತ ಬಹಳವಾಗಿ ಹೋರಾಡಿ ಸಹಸ್ರ ಸಂಖ್ಯೆಯಿಂದ ರಾಕ್ಷಸರನ್ನು ಯಮನಪುರಿಗೆ ಕಳುಹಿಸಿದನು. ಆ

ಮೇಲೆ ಶಿಲಾವರ್ಷಕ್ಕೆ ಪ್ರಾರಂಭವಾಯಿತು. ಐಂದ್ರಾಸ್ತ್ರದಿಂದ ಶಿಲಾವರ್ಷವನ್ನು ನಾಶಮಾಡಿದನು. ಆ ಮೇಲೆ ಉದಕಧಾರೆಗೆ ಮೊದಲಾಯಿತು. ಪ್ರಳಯಕಾಲದಲ್ಲಿ ಎಲ್ಲವೂ ನೀರಿನಲ್ಲಿ ಮುಚ್ಚಿಕೊಳ್ಳುವಂತೆ ಮುಚ್ಚಿಕೊಂಡುಬಿಟ್ಟಿತು. ಅರ್ಜುನನಿಗೆ ಕಣ್ಣು ಕಾಣದೆ ಹೋಯಿತು. ವಾಯುವ್ಯಾಸ್ತ್ರದಿಂದ ಜಲವೃಷ್ಟಿಯನ್ನು ನಾಶಮಾಡಿದನು. ಮಾಯಾವಿಗಳಾದ ರಾಕ್ಷಸರು ಅಗ್ನಿಯನ್ನೂ ಬಿರುಗಾಳಿಯನ್ನೂ ಕಲ್ಪಿಸಿದರು. ವಾರುಣಾಸ್ತ್ರದಿಂದ ಅಗ್ನಿಯನ್ನೂ ಪರ್ವತಾಸ್ತ್ರದಿಂದ ಬಿರುಗಾಳಿಯನ್ನೂ ಪರಿಹರಿಸಿದನು. ಆ ಮೇಲೆ ಎಲ್ಲರೂ ಒಟ್ಟಾಗಿ ಏಕಕಾಲದಲ್ಲಿ ಭಯಂಕರವಾಗಿಯೂ, ಘೋರವಾಗಿಯೂ ಇರುವ ಅಗ್ನಿವೃಷ್ಟಿಯನ್ನೂ, ಶಿಲಾವೃಷ್ಟಿಯನ್ನೂ, ಪ್ರಚಂಡ ವಾಯುವನ್ನೂ ನಿರ್ಮಾಣ ಮಾಡಿದರು. ಎಲ್ಲೆಲ್ಲೂ ಅಂಧಕಾರವು ವ್ಯಾಪಿಸಿತು. ರಥಾಶ್ವಗಳು ಮುಂದಕ್ಕೆ ನಡೆಯದೆ ಹೋದುವು. ಮಾತಲಿಯು ರಥದ ಮೇಲೆ ನಿಲ್ಲಲಾರದೆ ಹೋದನು. ಕೈಯಲ್ಲಿದ್ದ ಚಾವಟಿಯು ಕೆಳಗೆ ಬಿತ್ತು. ಅರ್ಜುನನಿಗೂ ಸ್ವಲ್ಪ ಕಳವಳವುಂಟಾಯಿತು ಮಾತಲಿಯು ಅಡಿಗಡಿಗೂ "ಅರ್ಜುನಾ, ಎಲ್ಲಿದ್ದೀಯೆ ? ಅರ್ಜುನಾ, ಎಲ್ಲಿದ್ದೀಯೆ ?" ಎಂದು ಭೀತಿಯಿಂದ ಕೂಗುವುದಕ್ಕೆ ಮೊದಲು ಮಾಡಿದನು. "ಎಷ್ಟೋ ದಾನವರ ಯುದ್ಧವನ್ನು ನೋಡಿದ್ದೇನೆ. ಇಂಥ ಯುದ್ಧವನ್ನು ಎಂದೂ ಎಲ್ಲೂ ನೋಡಲಿಲ್ಲ ; ಮುಂದೆ ನೋಡುವ ಹಾಗೂ ಇಲ್ಲ" ಎಂದು ಮಾತಲಿಯು ತನ್ನಷ್ಟಕ್ಕೆ ತಾನೇ ಅಂದುಕೊಂಡನು. ಆಗ ಅರ್ಜುನನು ಧೈರ್ಯವನ್ನು ತಂದುಕೊಂಡು "ಹೆದರಬೇಡ; ಚಲಿಸದೆ ರಥದ ಮೇಲೆ ಕುಳಿತಿರು; ನನ್ನ ಪ್ರಭಾವವನ್ನು ತೋರಿಸುವೆನು" ಎಂದು ಹೇಳುತ್ತ ಸಮ್ಮೋಹನಾಸ್ತ್ರವನ್ನು ಆ ದಾನವರ ಮೇಲೆ ಪ್ರಯೋಗ ಮಾಡಿದನು. ಮಾಯೆಯು ನಷ್ಟವಾಯಿತು. ಜಗತ್ತು ಪ್ರಕಾಶವಾಯಿತು. ಮಾತಲಿಯು ರಥವನ್ನು ಬೇಗ ಮುಂದಕ್ಕೆ ನಡೆಯಿಸಿದನು. ತಮಗೆ ಸೋಲು ನಿಜವೆಂದು ತಿಳಿದೂ ರಾಕ್ಷಸರು

ಕಣ್ಣಿಗೆ ಕಾಣದ ವಿಮಾನಗಳಲ್ಲಿ ಕುಳಿತುಕೊಂಡು ವಿಷದ್ರಾವಕಗಳಿಂದಲೂ, ಕಲ್ಲುಗಳಿಂದಲೂ, ಗಾಜಿನ ಚೂರುಗಳಿಂದಲೂ, ಕಬ್ಬಿಣದ ಮೊಳೆಗಳಿಂದಲೂ ಕೂಡಿರುವ ಬಾಂಬುಗಳ ವೃಷ್ಟಿಯನ್ನು ಅರ್ಜುನನ ಮೇಲೆ ಸುರಿಸಿದರು. ಆಗ ಅರ್ಜುನನು ಅದೃಶ್ಯಾಸ್ತ್ರಗಳಿಂದ ಅವರೊಡನೆ ಯುದ್ಧ ಮಾಡಿ ಅನೇಕ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ರಾಕ್ಷಸರನ್ನೆಲ್ಲ ಕೊಂದು ಅವರ ಪುರಪ್ರವೇಶ ಮಾಡಿದನು. ಅವರ ಪಟ್ಟಣವು ಅಮರಾವತಿಯನ್ನು ಹೋಲುತ್ತಿತ್ತು. ಅದು ಮೊದಲು ದೇವತೆಗಳ ಪಟ್ಟಣವಾಗಿತ್ತು. ದೇವತೆಗಳನ್ನು ಓಡಿಸಿ ರಾಕ್ಷಸರು ಅದನ್ನು ಆಕ್ರಮಿಸಿಕೊಂಡಿದ್ದರು ಪಟ್ಟಣವನ್ನು ಒಂದು ಹಿಡಿತಕ್ಕೆ ತಂದು. ಮಾತಲಿಯೊಡನೆ ಸಂತೋಷದಿಂದ ಇಂದ್ರಲೋಕಾಭಿಮುಖನಾದನು.

ಹೋಗುತ್ತಿರುವಾಗ ದಾರಿಯಲ್ಲಿ ದಿವ್ಯವಾಗಿಯೂ, ಸೂರ್ಯಾಗ್ನಿಗಳಂತೆ ಪ್ರಕಾಶಮಾನವಾಗಿಯೂ, ಆಕಾಶದಲ್ಲಿ ತೇಲಾಡುತ್ತಲೂ, ಇರುವ ಒಂದು ವಿಮಾನಪುರಿಯನ್ನು ಕಂಡನು. "ಎಲೈ ಮಾತಲಿಯೇ ಇದೇನು ? ಇಲ್ಲಿ ಒಂದು ಆಶ್ಚರ್ಯವು ಕಣ್ಣಿಗೆ ಬೀಳುತ್ತಲಿದೆ" ಎಂದನು. ಆಗ ಮಾತಲಿಯು ಆ ಪಟ್ಟಣದ ನಿರ್ಮಾಣಕ್ರಮವನ್ನು ತಿಳಿಸಿ, "ದೇವತೆಗಳಿಗೆ ವೈರಿಗಳಾದ ಈ ಹಿರಣ್ಯಪುರದ ರಾಕ್ಷಸರನ್ನು ನೀನು ಕೊಲ್ಲುವುದು ಯುಕ್ತವಾದುದು," ಎಂದನು. ಯಾವಾಗಲೂ ಯುದ್ಧಕ್ಕೆ ಸಿದ್ಧನಾಗಿರುವ ಸವ್ಯಸಾಚಿಯು ಮಾತಲಿಯನ್ನು ಕುರಿತು "ಹಾಗಾದರೆ ಅತ್ತಕಡೆ ರಥವನ್ನು ನಡೆಸು" ಎಂದನು. ಸ್ವಲ್ಪಕಾಲದಲ್ಲಿಯೇ ಅರ್ಜುನನಿಗೂ ರಾಕ್ಷಸನಿಗೂ ಯುದ್ಧಕ್ಕೆ ಮೊದಲಾಯಿತು. ಅಸ್ತ್ರಪ್ರತ್ಯಸ್ತ್ರಗಳ ಪ್ರಯೋಗಗಳಿಂದ ಸಹಸ್ರ ಸಂಖ್ಯಾಕವಾಗಿ ರಾಕ್ಷಸರನ್ನು ಯಮಪುರಿಗೆ ಕಳುಹಿಸಿ, ಅನೇಕ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ತೇಲಾಡುತ್ತಿದ್ದ ಪಟ್ಟಣವನ್ನು ನೆಲಕ್ಕುರುಳಿಸಿದನು. ಎಷ್ಟು ಮಂದಿ ದಾನವರನ್ನು ಅರ್ಜುನನು ಅಂತಕನ ಮನೆಗೆ ಕಳುಹಿಸಿದರೂ ರಾಕ್ಷಸರ

ಸಂಖ್ಯೆಯು ಬೇರೆ ಕಡಮೆಯಾಗಲೇ ಇಲ್ಲ. ಸಮುದ್ರತೆರೆಗಳು ಒಂದಾಗುತಲೊಂದು ಪರಂಪರೆಯಾಗಿ ಬರುವಂತೆ, ರೋಷಾವೇಶದಿಂದ ರಾಕ್ಷಸರು ಅರ್ಜುನನ ಮೇಲೆ ಕಾಣಿಸಿಕೊಂಡರು ಯುದ್ಧಕುತೂಹಲವು ಹೆಚ್ಚಿ ಅನೇಕ ಕ್ರೂರ ನಾರಾಚಗಳನ್ನು ಅವರ ಮೇಲೆ ಪ್ರಯೋಗಮಾಡಿದನು. ಆದರೂ ಅವರನ್ನು ಸಂಹಾರಮಾಡಲಾಗಲಿಲ್ಲ. ರಣಪಂಡಿತರೂ, ಅಸ್ತ್ರವಿದ್ಯಾಕುಶಲರೂ ಆದ ಆ ದೈತ್ಯರ ಅಸ್ತ್ರಗಳಿಂದ ಪೀಡಿತನಾಗಿ, ಅಧಿಕವಾಗಿ ಭಯಪಟ್ಟು, ದೇವದೇವನಾದ ಮಹಾದೇವನಿಗೆ ನಮಸ್ಕಾರಮಾಡಿ, ಪಾಶುಪತಾಸ್ತ್ರ ಪ್ರಯೋಗಮಾಡಿದನು. ಒಂದು ಮುಹೂರ್ತದೊಳಗಾಗಿ ಆ ಮಹಾಸ್ತ್ರವು ದಾನವರನೆಲ್ಲ ನಾಶಮಾಡಿಬಿಟ್ಟಿತು. ಈ ಆಶ್ಚರ್ಯವನ್ನು ನೋಡಿ ತ್ರಿಪುರಾಂತಕನಿಗೆ ನಮಸ್ಕಾರಮಾಡಿ ಮಾತಲಿಸಮೇತ ಅಮರಾವತಿಗೆ ಹೋದನು. ದೇವತೆಗಳಿಗೆ ಕಂಟಕರಾಗಿದ್ದ ನಿವಾತಕವಚರನ್ನೂ ಹಿರಣ್ಯಪುರದ ರಾಕ್ಷಸರನ್ನೂ ಸಂಹಾರಮಾಡಿ ಮರಳಿ ಬಂದ ಅರ್ಜುನನನ್ನು ಇಂದ್ರನು ಅಪ್ಪಿಕೊಂಡು 'ನೀವು ಕಳೆದುಕೊಂಡ ರಾಜ್ಯವನ್ನು ಪುನಃ ಗೆದ್ದು ಧರ್ಮರಾಯನೊಂದಿಗೆ ಸುಖವಾಗಿರುವಿರಿ' ಎಂದು ಹರಸಿದನು.

ಅಣ್ಣತಮ್ಮಂದಿರನ್ನೂ ದ್ರೌಪದಿಯನ್ನೂ ಧೌಮ್ಯರನ್ನೂ ತಮ್ಮನ್ನು ಅನುಸರಿಸಿ ಬಂದ ಇತರ ಬ್ರಾಹ್ಮಣರುಗಳನ್ನೂ ನೋಡಬೇಕೆಂಬ ತವಕವು ಅರ್ಜುನನಲ್ಲಿ ಹೆಚ್ಚಿತು. ಹೆಚ್ಚುಕಾಲ ಇಂದ್ರನ ಅರಮನೆಯಲ್ಲಿರಲಾರದೆ ಹೋದನು. ಅರ್ಜುನನ ಇಂಗಿತವನ್ನು ತಿಳಿದು ಇಂದ್ರನು, ಗಂಧಮಾದನ ಪರ್ವತದ ಶಿಖರದ ಮೇಲೆ ವಾಸಮಾಡುತ್ತಿರುವ ಧರ್ಮರಾಯನಲ್ಲಿಗೆ, ಅವನನ್ನು ಬಿಟ್ಟು ಬರುವಂತೆ ಮಾತಲಿಗೆ ಆಜ್ಞಾಪಿಸಿದನು.

---

|| ಶ್ರೀ ||

## ಮೂರನೆಯ ಅಧ್ಯಾಯ

# ಪ್ರೇಮದ ಗುಟ್ಟು

ಆರ್ಜನೆಗಾಗಿ ಇಂದ್ರಕೀಲಕ್ಕೆ ಹೋದ ಅರ್ಜುನನು, ಹಿಂದಿರುಗದೆ ಹಾಗೆಯೇ ದೇವಲೋಕಕ್ಕೆ ಹೋಗಿ ಐದು ವರ್ಷಗಳ ಕಾಲ ಅಲ್ಲಿಯೇ ನಿಂತುಬಿಟ್ಟನು. ಅಗಲಿಕೆಯ ದುಃಖವನ್ನು ತಾಳಲಾರದವರಾಗಿ ಧರ್ಮರಾಜಾದಿಗಳು ತೀರ್ಥಯಾತ್ರಾಪ್ರಸಂಗದಿಂದ ಗಂಧಮಾದನ ಪರ್ವತದ ಬಳಿಗೆ ಬಂದರು. ಪರ್ವತಾರೋಹಣ ಮಾಡುವಾಗ ಒಂದು ದಿನ ಪ್ರಾತಃಕಾಲ ಮಂದಮಾರುತವು ಘಮಘಮಿಸುವ ಪುಷ್ಪಗಳ ಪರಿಮಳವನ್ನು ಬೀರುತ್ತ ಬೀಸತೊಡಗಿತು. ಮಧುರವಾದ ಆ ವಾಸನೆಗೆ ದ್ರೌಪದಿಯು ಮೋಹಿತಳಾದಳು ಮುಂದೆ ಹಾಗೆಯೇ ಹೋಗುತ್ತಿರುವಾಗ ಅಲ್ಲಿ ಒಂದು ಕಮಲವು ಬಿದ್ದಿತ್ತು. ಅದರ ಬಣ್ಣವೂ, ಅದರ ಸೊಬಗೂ, ಅದರ ಮಧುರ ವಾಸನೆಯೂ, ಅಂತಪ್ಪ ಕಮಲಗಳನ್ನು ಹೊಂದಬೇಕೆಂಬ ಇಚ್ಛೆಯನ್ನುಂಟುಮಾಡಿದುವು ಇಚ್ಛೆಯು ಪೂರ್ಣವಾಗುವವರೆಗೂ ಮನಸ್ಸಿಗೆ ನೆಮ್ಮದಿ ಎಲ್ಲಿ ಬಂದೀತು ? ದ್ರೌಪದಿಗೆ ಏನೂಬೇಕಾಗಲಿಲ್ಲ. ಅದನ್ನು ಹೊಂದಬೇಕೆಂಬ ಯೋಚನೆಯು ಅಂದು ಅವಳ ಮನಸ್ಸನ್ನೆಲ್ಲ ಆವರಿಸಿಬಿಟ್ಟಿತು. ಸ್ವಯಂ ಇಚ್ಛಾಪೂರ್ತಿಮಾಡಿಕೊಳ್ಳಲು ಶಕ್ತಿ ಇಲ್ಲದವಳಾಗಿ ಏನು ಮಾಡುವುದಕ್ಕೂ ತೋರದೆ ಸುಮ್ಮನೆ ಕೊರಗುತ್ತಿದ್ದಳು. ಆ ದಿವಸ ಕಳೆಯಿತು. ದ್ರೌಪದಿಯ ನಗುಮೊಗವನ್ನೇ ಎಂದೆಂದೂ ನೋಡುತ್ತಿದ್ದ ಭೀಮಸೇನನು ಮಾರನೇ ದಿವಸ ಪ್ರಾತಃಕಾಲ ದ್ರೌಪ

ದಿಯ ಮುಖವು ಸೊಪ್ಪಲಾಗಿರುವುದನ್ನು ಕಂಡು 'ಎಂದಿನಂತಿರದೆ ಇಂದೇಕೇ ಇಷ್ಟು ಚಿಂತಾಕ್ರಾಂತಳಾಗಿರುವೆ!' ಎಂದನು. ಆಗ ದ್ರೌಪದಿಯು "ಎಲೈ ಪ್ರಾಣಕಾಂತನೇ, ಇಲ್ಲಿಗೆ ಅನತಿ ದೂರದಲ್ಲಿ ಎಲ್ಲೋ ಒಂದು ಕಮಲಾಕರವಿರಬೇಕು. ವಾಯುದೇವನು ತಣ್ಣಗೂ ಸು ವಾಸನಾಯುಕ್ತನಾಗಿಯೂ ಇಲ್ಲಿ ಸುಳಿದಾಡುತ್ತಿರುವನು ಆ ಹೂವು ಗಳನ್ನು ಹೊಂದಬೇಕೆಂಬ ಇಚ್ಛೆಗೆ ಮನಸೋತಿರುವೆನು ನನ್ನ ಮನಸ್ಸೆ ಲ್ಲವೂ ಆ ಪುಷ್ಪಗಳನ್ನು ಹೊಂದಬೇಕೆಂಬುದರಲ್ಲಿಯೇ ಲೀನವಾಗಿ ಹೋಗಿದೆ. ಅದಕ್ಕಾಗಿ ಕೊರಗುತ್ತಿರುವೆನು. ಸ್ವಯಂ ಇಚ್ಛಾಪೂರ್ತಿಮಾ ಡಿಕೊಳ್ಳಲು ಶಕ್ತಿಯಿಲ್ಲದವರ ಬಾಳೆಲ್ಲ ಇಷ್ಟೆ" ಎಂದಳು.

ಶರೀರಕ್ಕೆ ತಕ್ಕಷ್ಟು ಶೌರ್ಯವೂ ಹೃದಯಕ್ಕೆ ತಕ್ಕಷ್ಟು ಪ್ರೇಮವೂ ಉಳ್ಳ ಭೀಮಸೇನನು ದ್ರೌಪದಿಯನ್ನು ಕುರಿತು "ಇದಕ್ಕೇಕಿಷ್ಟುಚಿಂತೆ? ನನ್ನನ್ನು ತಿಳಿದೂ ತಿಳಿದೂ ಸುಮ್ಮನೆ ರಾತ್ರಿಯೆಲ್ಲ ಕೊರಗಿದೆಯಲ್ಲ! ಇಂದು ಸಂಜೆಯೊಳಗಾಗಿ ಸೌಗಂಧಿಕಪದ್ಮಗಳನ್ನು ತಂದುಕೊಟ್ಟು ನಿನ್ನ ಮನಸ್ಸಂತೋಷಪಡಿಸುವೆನು" ಎಂದನು ದ್ರೌಪದಿಗೆ ಪ್ರಿಯಮಾಡಲು ಆಯಾಸವನ್ನಾಗಲಿ, ಅಪಾಯುವನ್ನಾಗಲಿ, ಅರಿಯದ ಭೀಮಸೇನನು ಖಡ್ಗ ಗದಾಧಾರಿಯಾಗಿ, ಗಾಳಿ ಯಾವ ದಿಕ್ಕಿನಿಂದ ಬೀಸಿಕೊಂಡು ಬರು ತ್ತಿದ್ದಿತೋ ಆ ದಿಕ್ಕನ್ನು ಹಿಡಿದು ಹೊರಟನು ಹೋಗುತ್ತ ದಾರಿಯಲ್ಲಿ ಪರ್ವತದ ಅರೆ ತಪ್ಪಲಿನಲ್ಲಿ ರಮ್ಯವಾಗಿಯೂ, ಬಹುಯೋಜನವಿಸ್ತಾರ ವಾಗಿಯೂ ಉಳ್ಳ ಒಂದು ಕದಳೀಖಂಡವನ್ನು ನೋಡಿ ವೇಗದಿಂದ ಅಲ್ಲಿಗೆ ಹೋಗಿ ಮದಿಸಿದ ಆನೆಯಂತೆ ಅಲ್ಲಿದ್ದ ಅದೇ ಕದಳೀಸ್ತಂಭಗ ಳನ್ನೂ, ನಾನಾವಿಧವಾದ ಇತರ ವೃಕ್ಷಗಳನ್ನೂ ಕಿತ್ತುಹಾಕಿ ಸಿಂಹ ದಂತೆ ಗರ್ಜನೆ ಮಾಡಿದನು. ಬಳಿಕ ಸರೋವರದಲ್ಲಿಳಿದು ಸ್ವಲ್ಪಹೊತ್ತು ವಿಹಾರ ಮಾಡಿ ಮೇಲಕ್ಕೆದ್ದು ಅತಿವೇಗದಿಂದ ಪರ್ವತದ ಮೇಲುಭಾಗದ ಲ್ಲಿರುವ ಅನೇಕ ವೃಕ್ಷಗಳಿಂದ ರಮ್ಯವಾದ ಒಂದು ವನವನ್ನು ಹೊಕ್ಕು

ತನ್ನ ಬಳಿಯಲ್ಲಿದ್ದ ಶಂಖವನ್ನು ಗಟ್ಟಿಯಾಗಿ ಊದಿದನು. ಈ ನಾದವನ್ನು ಕೇಳಿದೊಡನೆಯೇ ಮಾರುತಿಗೆ ಭ್ರಾತೃಪ್ರೇಮವು ಉಕ್ಕಿತು. ತಮ್ಮನನ್ನು ದೇವತೆಗಳ ಶಾಪದಿಂದ ಕಾಪಾಡಿ ಒಂದು ಬಗೆ ನವಚೈತನ್ಯವನ್ನು ಕೊಟ್ಟು ದ್ರೌಪದಿಯ ಮನೋಭೀಷ್ಟವನ್ನು ಸಲ್ಲಿಸಲು ಅವನನ್ನು ತಕ್ಕವನನ್ನಾಗಿ ಮಾಡಬೇಕೆಂಬ ಉದ್ದೇಶದಿಂದ, ಅವನು ಮುಂದೆ ಹೋಗಬೇಕಾಗಿದ್ದ ಕಾಲುದಾರಿಗೆ ಅಡ್ಡವಾಗಿ ಕುಳಿತುಕೊಂಡು ತನ್ನ ಬಾಲದಿಂದ ಒಂದಾವರ್ತಿ ನೆಲವನ್ನು ಅಪ್ಪಳಿಸಿದನು. ಈ ಧ್ವನಿಯನ್ನು ಕೇಳಿ ಭೀಮನು ರೋಮಾಂಚಿತನಾಗಿ ಧ್ವನಿ ಬಂದ ದಿಕ್ಕಿನ ಕಡೆ ನೋಡಿದನು. ವಾಯುಪುತ್ರನಾದ ಆಂಜನೇಯನು ದಾರಿಗಡ್ಡಲಾಗಿ ಕುಳಿತಿರುವುದನ್ನು ಕಂಡು, ವೇಗದಿಂದ ಅವನ ಸಮೀಪಕ್ಕೆ ಹೋಗಿ ಸಿಡಿಲಿನ ಧ್ವನಿಯಂತೆ ಗರ್ಜಿಸಿದನು. ಆಂಜನೇಯನು ಸ್ವಲ್ಪ ಕಣ್ತೆರೆದು ಭೀಮನನ್ನು ನೋಡಿ "ಅಯ್ಯಾ, ನೀನಾರು ? ವೃದ್ಧನಾದ ನನಗೆ ಆಯಾಸ ಉಂಟಾಗುವ ಹಾಗೆ ಅರಚಿಕೊಂಡು ನನ್ನನ್ನೇಕೆಬ್ಬಿಸಿದೆ ? ನಿನ್ನಂಥವನು ಸಕಲಪ್ರಾಣಿಗಳಲ್ಲಿಯೂ ದಯಾಪರನಾಗಿರಬೇಕು. ನಿನ್ನನ್ನು ನೋಡಿದರೆ ಧರ್ಮಜ್ಞನಾಗಿ ತೋರುವುದಿಲ್ಲ. ದೊಡ್ಡವರ ಶುಶ್ರೂಷೆ ಮಾಡಿದವನಂತೆ ಕಾಣುವುದಿಲ್ಲ. ಬಾಲಭಾವದಿಂದ ಅಲ್ಪಬುದ್ಧಿಯಾಗಿ ಈ ಪರ್ವತದಲ್ಲಿದ್ದ ಮೃಗಗಳನ್ನು ಸುಮ್ಮನೆ ಹೊಡೆದಟ್ಟಿಬಿಟ್ಟೆಯಲ್ಲ ! ನೀನು ಯಾರು ? ಮನುಷ್ಯಸಂಚಾರವಿಲ್ಲದ ಈ ವನಕ್ಕೆ ಏಕೆ ಬಂದೆ ? ಇಲ್ಲಿಂದ ಮುಂದೆ ಎಲ್ಲಿ ಹೋಗುವಿ ? ಮುಂದಕ್ಕೆ ಹೋಗುವ ಪ್ರದೇಶವು ಅಗಮ್ಯವಾದುದು. ಸಿದ್ಧರು ಹೊರತು ಇತರರು ಹೋಗಲಾರರು. ಇದು ದೇವಲೋಕದ ಮಾರ್ಗವು. ಮನುಷ್ಯರ ಮಾರ್ಗವಲ್ಲ. ನಿನ್ನಲ್ಲಿ ದಯೆಯಿಟ್ಟು ಇದ್ದ ಸಂಗತಿ ತಿಳಿಸಿರುವೆನು. ಮುಂದೆ ಖಂಡಿತ ಹೋಗಬೇಡ. ನನ್ನ ಮಾತು ಹಿತವೆಂದು ತಿಳಿ. ಇಲ್ಲಿರ ತಕ್ಕ ಕಂದ ಮೂಲಗಳನ್ನು ತಿಂದು ತೃಪ್ತನಾಗಿ ಹಿಂದಕ್ಕೆ ಹೊರಟುಹೋಗು. ಮುಂದೆ ಹೋಗಿ ಹಾನಿ ಹೊಂದಬೇಡ" ಎಂದು ಹೇಳಿದನು.

ಅತುಳ ಪರಾಕ್ರಮಿಯಾದ, ಕ್ಷತ್ರಿಯ ಕುಲೋತ್ಪನ್ನನಾದ, ರಾಕ್ಷಸ ಸಂಹಾರಕನಾದ ಭೀಮಸೇನನಿಗೆ ಮಾರುತಿಯ ಮಾತು ಪಥ್ಯವಾದೀತೇ ? ಆಗ ಭೀಮನು "ಎಲೈ ಪೂಜ್ಯನೇ, ನೀನಾರು ? ಹಾದಿಗೇ ಕಡ್ಡಲಾಗಿ ಕುಳಿತಿರುವೆ ? ನಾನು ಹೋಗುವುದಕ್ಕೆ ದಾರಿ ಬಿಡು. ನಾನು ಕುಂತೀಪುತ್ರನಾದ ಭೀಮಸೇನನು" ಎಂದನು ಆಗ ಹನುಮಂತನು "ಅಯ್ಯಾ, ನಾನು ಮುದುಕ; ಏಳಲಾರೆ : ನನ್ನನ್ನು ದಾಟಿಕೊಂಡು ಹೋಗು" ಎಂದನು. ಆಗ ಭೀಮನು 'ನಿನ್ನನ್ನು ಹೇಗೆ ದಾಟಿಕೊಂಡು ಹೋಗಲಿ ! ಇದರಿಂದ ಪರಮಾತ್ಮನಿಗೆ ಅವಮಾನಪಡಿಸಿದಂತೆ ಆಗುತ್ತದೆ. ಬೇಗ ದಾರಿ ಬಿಡು. ತಡಮಾಡಿದರೆ ಅನರ್ಥವಾದೀತು" ಎಂದನು. ಆಗ ಆ ಕಪಿಶ್ರೇಷ್ಠನು, "ನಿನ್ನ ಇಷ್ಟಾನುಸಾರ ದಾರಿ ಬಿಡಲು ನಾನು ಇಲ್ಲಿಲ್ಲ. ನಿನ್ನ ದಾರಿಹಿಡಿದುಕೊಂಡು ಹಿಂದಕ್ಕೆ ಹೋಗು. ಅಪಾಯಕ್ಕೆ ಗುರಿಯಾಗಬೇಡ" ಎಂದನು. ದ್ರೌಪದಿಯ ಇಷ್ಟಾರ್ಥವನ್ನು ಪೂರ್ಣಮಾಡುವುದೇ ಧ್ಯೇಯವಾಗಿ ಉಳ್ಳ ಭೀಮಸೇನನಿಗೆ ಅಪಾಯದ ಅಂಜಿಕೆ ಎಲ್ಲಿ ಮನಸ್ಸಿಗೆ ತಟ್ಟೀತು ! ತನ್ನ ಉದ್ದೇಶ ಭಂಗ ಮಾಡಲಿಕ್ಕೆ ದಾರಿಯಲ್ಲಿ ಅಡ್ಡಲಾಗಿರುವ ಅಂಜನಾಸುತನನ್ನು ನೋಡಿ ಭೀಮನ ಆಲಿಗಳು ಗರಗರನೆ ತಿರುಗಿದುವು. ಮಾತು ಸ್ಪಷ್ಟವಾಗಿ ಹೊರಡದೆ ಹೋಯಿತು. ಒಳ್ಳೆಮಾತಿನಿಂದ ದಾರಿಬಿಟ್ಟರೆ ಸಮ ಇಲ್ಲವಾದರೆ ನಿನ್ನನ್ನು ಯಮಪುರಿಗೆ ಕಳುಹಿಸಿ ಮುಂದೆ ಹೊರಡುವೆನು" ಎಂಬೀ ಅರ್ಥಬರುವಂತೆ ನಾಲ್ಕಾರು ಮಾತುಗಳನ್ನು ಹೇಳಿ ಗದೆಯನ್ನೆತ್ತಿದನು

ಆಗ ಅಂಜನಾಸುತನು ನಸುನಗುತ್ತ, "ಎಲೈ ಕುಂತೀಪುತ್ರನೇ, ಅಷ್ಟು ಸಿಟ್ಟಾಗಬೇಡ. ನಿನಗೆ ಹೋಗುವುದು ಅಗತ್ಯವೆಂದು ಕಂಡುಬಂದಲ್ಲಿ ನನ್ನ ಬಾಲವನ್ನು ಸ್ವಲ್ಪ ಓರೆಮಾಡಿಕೊಂಡು ಮುಂದಕ್ಕೆ ಹೊರಟು ಹೋಗು" ಎಂದನು. ಭೀಮನ ಕೋಪವು ಸ್ವಲ್ಪ ಅಡಗಿತು. ಹಾಗೆಯೇ ಆಗಲೆಂದು ಬಾಲವನ್ನೆತ್ತುವುದಕ್ಕೆ ಹೋದನು. ಅದನ್ನಲ್ಲಾಡಿಸುವುದಕ್ಕೂ

ಆಗದೆ ವಿಮುಖನಾಗಿ, "ನೀನು ಸಿದ್ಧಪುರುಷನೋ, ದೇವತೆಯೋ ಗಂಧರ್ವನೋ, ಗುಹ್ಯಕನೋ, ಯಾರು? ಇದು ಗೋಪ್ಯವಲ್ಲದೆ ನಾನು ಕೇಳತಕ್ಕುದಾಗಿದ್ದರೆ ಹೇಳು. ನಾನು ನಿನ್ನ ಶಿಷ್ಯನಾಗಿ ಕೇಳುವೆನು," ಎಂದನು.

ಆಗ ಹನುಮಂತನು ತನ್ನ ಪೂರ್ವವೃತ್ತಾಂತವನ್ನೆಲ್ಲ ತಿಳುಹಿಸಲು, ಭೀಮಸೇನನು, "ಎಲೈ ಕಪೀಶ್ವರನೇ, ಈದಿವಸ ಆರ್ಯನಾದ ನಿನ್ನನ್ನು ನೋಡಿ ನಾನು ಧನ್ಯನಾದೆನು. ನನ್ನಲ್ಲಿ ನೀನು ಪರಿಪೂರ್ಣವಾಗಿ ಅನುಗ್ರಹಮಾಡಿದೆ. ನಿನ್ನ ದರ್ಶನದಿಂದ ನನಗೆ ಅಧಿಕವಾದ ತೃಪ್ತಿಯುಂಟಾಯಿತು. ಸಮುದ್ರಲಂಘನಕಾಲದಲ್ಲಿ ನೀನು ಯಾವ ರೂಪವನ್ನು ಧರಿಸಿದ್ದೆಯೋ ಆ ರೂಪವನ್ನು ನೋಡಬೇಕೆಂಬ ಕುತೂಹಲವು ಈಗ ನನಗೆ ಉಂಟಾಗಿರುವುದು. ಆ ದಿವ್ಯವಾದ ರೂಪವನ್ನು ತೋರಿಸಿ ನನ್ನ ಮನಸ್ಸಂತೋಷಪಡಿಸು" ಎಂದನು. ತಮ್ಮನ ಬಾಯಿಂದ ಹೊರಟ ಪ್ರೇಮದ ಪ್ರವಾಹವು ಅಂಜನಾಸುತನ ಹೃದಯವನ್ನು ಹೊಕ್ಕಿತು. ಆಗ ಹನುಮಂತನು, "ಆ ರೂಪವನ್ನು ನೋಡಲು ಈಗಿನವರಿಗೆ ಅಶಕ್ಯವಾದುದು. ನೀನು ನೋಡಲಾರೆ" ಎಂದನು. ಆಗ ಭೀಮನು "ನಿನ್ನ ದಯೆಯೊಂದಿದ್ದರೆ ಶಕ್ತಿಯು ತಾನಾಗಿಯೇ ಬರುವುದು, ಕುತೂಹಲವನ್ನಡಗಿಸಲಾರೆ" ಎಂದನು. ಮೀರಲಾರದೆ ಆಂಜನೇಯನು ತನ್ನ ಮಹತ್ತಾದ ರೂಪವನ್ನು ತೋರಿಸಲು ಭೀಮನು ಅದನ್ನು ನೋಡಿ ಆಶ್ಚರ್ಯಪಟ್ಟು ಅಪರಿಮಿತವಾದ ಹರ್ಷದಿಂದ ಮೆರೆದನು. ಆದರೆ ಆ ದಿವ್ಯತೇಜಸ್ಸನ್ನು ನೋಡಲಾರದೆ ಭೀಮಸೇನನ ಕಣ್ಣುಗಳೆರಡೂ ಕೊಕ್ಕರಿಸಿಹೋದುವು. ಪುನಃ ಎರಡು ಕಣ್ಣುಗಳನ್ನೂ ತೆರೆದು ಅದ್ಭುತವಾಗಿಯೂ, ಘೋರವಾಗಿಯೂ ಇರುವ ಹನುಮಂತನ ಆಕಾರವನ್ನು ನೋಡಿ ಮೈಯೆಲ್ಲ ರೋಮಾಂಚಿತವಾಗಲು, ಭಯಭ್ರಾಂತನಾಗಿ ದೈನ್ಯದಿಂದ ಕೈಮುಗಿದುಕೊಂಡು ಹನುಮಂತನನ್ನು ನೋಡಿ, "ಎಲೈ ಮಹಾನುಭಾವನೇ, ನಿನ್ನ

ಮಹತ್ತಾದ ರೂಪವನ್ನು ನೋಡಿದ್ದಾಯಿತು. ಇನ್ನು ಈ ರೂಪವನ್ನು ಪ ಸಂಹರಿಸಿಕೊಳ್ಳುವುದಕ್ಕೆ ಮನಸ್ಸು ಮಾಡು '' ಎಂದನು. ಹನುಮಂತನು ಮೊದಲಿನಂತಾದನು. ತಮ್ಮನನ್ನು ಬಾಚಿ ತಬ್ಬಿಕೊಂಡನು. ಮಾರ್ಗಾ ಯಾಸವೆಲ್ಲವೂ ಪರಿಹಾರವಾಯಿತು. ಆ ಪ್ರೇಮಮಯವಾದ ಸ್ಪರ್ಶ ದಿಂದ ಒಂದು ಬಗೆ ನವಚೈತನ್ಯವು ಅಂದು ಭೀಮನಲ್ಲಿ ಉಂಟಾಯಿತು. ಸೌಗಂಧಿಕವನದ ಮಾರ್ಗವನ್ನು ತೋರಿ, ' ನಿನ್ನ ತಮ್ಮನಾದ ಪಾರ್ಥನ ಧ್ವಜದಲ್ಲಿ ನಾನು ಯಾವಾಗಲೂ ಕಾಣಿಸಿಕೊಳ್ಳುವೆನು ' ಎಂದು ಹೇಳಿ ಅಲ್ಲೇ ಅಂತರ್ಧಾನನಾದನು.

**ಅನಿರೀಕ್ಷಿತವಾಗಿ** ಭ್ರಾತೃಸಮಾಗಮದಿಂದುಂಟಾದ ಹೊಸ ಹುರುಪಿನಿಂದ ಕೂಡಿದವನಾಗಿ ಭೀಮಸೇನನು ಮುಂದೆ ವೇಗವಾಗಿ ನಡೆ ದನು. ಕೈಲಾಸಶಿಖರದ ಸಮೀಪದಲ್ಲಿ ಕುಬೇರನ ಅರಮನೆಗೆ ಸನ್ನಿಹಿತ ವಾಗಿ, ಗಿರಿ ನದಿಗಳಿಂದ ಹುಟ್ಟಿ, ವಿಸ್ತಾರವಾದ ನೆರಳುಳ್ಳ ಅನೇಕ ವೃಕ್ಷ ಗಳಿಂದ ಕೂಡಿಕೊಂಡು ಮನೋಹರವಾದ ಅನೇಕ ಲತೆಗಳಿಂದ ಶೋಭಿ ಸುತ್ತ ಹಸುರು ಬಣ್ಣದ ಕಮಲಗಳಿಂದಲೂ, ವಿಚಿತ್ರ ವಿಚಿತ್ರವಾದ ಪಕ್ಷಿ ಗಳಿಂದಲೂ, ಪ್ರಕಾಶಮಾನವಾಗಿ ನಿರ್ಮಲವಾದ ಜಲಸಮೃದ್ಧಿಯುಳ್ಳ ದ್ದಾಗಿಯೂ, ಸರಿಯಾದ ತಟಪ್ರದೇಶವುಳ್ಳದ್ದಾಗಿಯೂ, ಲೋಕಕ್ಕೆ ಆಶ್ಚರ್ಯಕರವಾಗಿಯೂ, ರಾಕ್ಷಸರಿಂದ ರಕ್ಷಿತವಾಗಿಯೂ ಇರುವ ಒಂದು ಪುಷ್ಕರಿಣಿಯನ್ನು ಗಂಧಮಾದನಪರ್ವತದ ತಿರೆತಪ್ಪಲಿನಲ್ಲಿ ಕಂಡ ನು. ಭೀಮಸೇನನು ಅಮೃತದಂತೆ ಮಧುರವಾಗಿಯೂ, ಶೀತಳವಾ ಗಿಯೂ, ಪುಣ್ಯತಮವಾಗಿಯೂ ಇರುವ ಆ ಉದಕವನ್ನು ಪಾನ ಮಾಡಿ ಸೌಗಂಧಿಕ ಸರೋವರದ ಸೊಬಗನ್ನು ನೋಡಿ ಅಧಿಕವಾಗಿ ಸಂತೋಷಪಟ್ಟನು.

ಆಯುಧಪಾಣಿಯಾಗಿ ಅಲ್ಲಿ ಸುಳಿದಾಡುತ್ತಿದ್ದ ಭೀಮಸೇನನನ್ನು ಅಲ್ಲಿಯ ಕಾವಲುಗಾರರು ನೋಡಿ '' ನೀನು ಯಾರು ? ಏತಕ್ಕಾಗಿ

ಇಲ್ಲಿಗೆ ಬಂದಿರುವೆ ?'' ಎಂದರು. ಆಗ ಭೀಮನು "ಈ ಪುಷ್ಕರಿಣಿಯಲ್ಲಿ ಪ್ರಕಾಶಮಾನವಾಗಿ ವಿರಾಜಿಸುತ್ತಿರುವ ಮಧುರವಾದ ವಾಸನೆಯನ್ನು ಬೀರುವ ಈ ಪುಷ್ಪಗಳಿಗಾಗಿ ತವಕಪಡುತ್ತಿರುವ ನನ್ನ ಪ್ರಾಣಕಾಂತೆಯ ಇಷ್ಟಾರ್ಥವನ್ನು ಸಲ್ಲಿಸಿ ಆಕೆಗೆ ಪ್ರೀತಿಯನ್ನುಂಟುಮಾಡುವುದಕ್ಕಾಗಿ ಇಲ್ಲಿಗೆ ಬಂದಿರುವೆನು'' ಎಂದನು. ಆಗ ಅಲ್ಲಿಯ ಕಾವಲ್ಗಾರರು, "ಇದು ಕುಬೇರನ ಕ್ರೀಡಾವನವು. ಅವನ ಅಪ್ಪಣೆಯಿಲ್ಲದೆ ಯಾರೂ ಇಲ್ಲಿ ವಿಹರಿಸಲಾರರು. ಸೌಗಂಧಿಕಾಪದ್ಮಗಳನ್ನು ಅಪಹರಿಸಿಕೊಂಡು ಹೋಗಲಾರರು. ನಮ್ಮ ಸ್ವಾಮಿಯಾದ ಕುಬೇರನ ಅಪ್ಪಣೆ ಪಡೆದು. ಯಥೇಚ್ಛವಾಗಿ ವಿಹಾರಮಾಡಿಕೊಂಡು, ನಿನಗೆ ಬೇಕಾದಷ್ಟು ಪುಷ್ಪಗಳನ್ನು ತೆಗೆದುಕೊಂಡು ಹೋಗು, ಹಾಗಾಗದಿದ್ದಲ್ಲಿ ನಿನಗೆ ಕೇಡು ತಪ್ಪದು,'' ಎಂದರು ಆಗ ಭೀಮನು ಸಮೀಪದಲ್ಲಿ ಕುಬೇರನು ಕಾಣಿಸುವುದಿಲ್ಲ ಒಂದು ವೇಳೆ ಕಾಣಿಸಿದರೂ, ನಾನು ಯಾಚಿಸತಕ್ಕವನಲ್ಲ. ಈ ರಮಣೀಯವಾದ ಸರೋವರವು ಕುಬೇರನ ಅರಮನೆಯಲ್ಲಿಲ್ಲ. ಇದು ಕುಬೇರನಿಗೆ ಹೇಗೋ ಹಾಗೆ ಸಕಲ ಪ್ರಾಣಿಗಳಿಗೂ ಅನುಭವಿಸುವುದಕ್ಕೆ ಸಮಾನವಾಗಿರುವುದು. ಹೀಗಿರುವಲ್ಲಿ ಯಾರನ್ನು ಯಾರು ತಾನೆ ಯಾಚಿಸಬೇಕು ?'' ಎಂದು ಹೇಳುತ್ತ ಆ ರಾಕ್ಷಸರನ್ನು ತೃಣೀಕರಿಸಿ ಸರೋವರವನ್ನು ಹೊಕ್ಕನು. ಆಗ ಅಲ್ಲಿದ್ದ ಕಾವಲುಗಾರರೆಲ್ಲರೂ ಭೀಮನನ್ನು ಸುತ್ತುಗಟ್ಟಿಕೊಂಡು ತಮ್ಮ ಕೈಯಲ್ಲಿದ್ದ ಆಯುಧಗಳನ್ನು ಎತ್ತಿದರು. ಭೀಮಸೇನನು ಎಲ್ಲರನ್ನೂ ನಡೆಬಡೆದು ಹಿಂದಕ್ಕೆ ಓಡಿಸಿದನು. ಅವರೆಲ್ಲರೂ ಕುಬೇರನಲ್ಲಿ ಹೋಗಿ ಮೊರೆಯಿಟ್ಟರು. ಕುಬೇರನು ನಕ್ಕು "ದ್ರೌಪದಿಯ ನಿಮಿತ್ತವಾಗಿ ಭೀಮಸೇನನು ಸೌಗಂಧಿಕಪದ್ಮಗಳನ್ನು ತೆಗೆದುಕೊಂಡು ಹೋಗುವುದಕ್ಕೆ ಬಂದಿರುವನು. ಇದನ್ನು ನಾನು ಚೆನ್ನಾಗಿ ಬಲ್ಲೆ. ಆತನಿಗೆ ಬೇಕಾದಷ್ಟು ತೆಗೆದುಕೊಂಡುಹೋಗಲು ಅವಕಾಶ ಕೊಡಿ, ತಡೆಮಾಡಬೇಡಿ'' ಎಂದು ಹೇಳಿಕಳುಹಿಸಿದನು. ಎಲ್ಲರನ್ನೂ

ಹಿಡಿಸಿ ತಾನೇ ತಾನಾಗಿ ಸ್ವಲ್ಪವೂ ಅಂಜಿಕೆಯಿಲ್ಲದೆ ಸಂಚರಿಸುತ್ತಿದ್ದ ಭೀಮಸೇನನನ್ನು ಕುಬೇರನ ಬಳಿಯಿಂದ ಬಂದ ಕಾವಲುಗಾರರು ಕಂಡು "ಯಥೇಚ್ಛವಾಗಿ ವಿಹಾರಮಾಡಿಕೊಂಡು ನಿನಗೆ ಬೇಕಾದಷ್ಟು ಸೌಗಂಧಿಕಪದ್ಮಗಳನ್ನು ತೆಗೆದುಕೊಂಡುಹೋಗು. ಕುಬೇರನು ನಿನ್ನಲ್ಲಿ ಪ್ರಸನ್ನನಾಗಿರುವನು," ಎಂದರು.

ಕಮಲಗಳನ್ನು ತೆಗೆದುಕೊಂಡು ಹೊರಗೆ ಬಂದ ಭೀಮನನ್ನು ಕಂಡು ಕಮಲಬಾಂಧವನು ಅಸ್ತಾದ್ರಿಯನ್ನಿಳಿದನು. ಸಂಧ್ಯಾರಾಗವು ಪಶ್ಚಿಮದಿಗ್ಭಾಗವನ್ನೆಲ್ಲ ಬೆಳಗಿತು. ಪಕ್ಷಿಗಳು ತಮ್ಮ ತಮ್ಮ ಗೂಡುಗಳಿರುವ ವೃಕ್ಷಗಳ ಕಡೆ ಹೊರಟವು. ಅರಳಿದ ಕಮಲಗಳು ಹಾಗೆಯೇ ಮುಚ್ಚಿಕೊಂಡವು. ಮಂದಮಾರುತವು ಬೀಸತೊಡಗಿತು. ಸಂಜೆಯಾದರೂ ಬರಲಿಲ್ಲವೆಂದು ಧರ್ಮರಾಜಾದಿಗಳು ಎಲ್ಲಿ ಗಾಬರಿ ಪಡುವರೋ ಎಂದು ಭೀಮನು ಚಿಂತಾಕ್ರಾಂತನಾದನು.

ಇತ್ತ ಧರ್ಮರಾಯನಿಗೆ ತನ್ನ ದಾರಿಯಲ್ಲಿ ಉದ್ದಕ್ಕೂ ದುರ್ನಿಮಿತ್ತಗಳು ಕಾಣಿಸಿಕೊಂಡವು. ಬೇಗ ಪರ್ಣಶಾಲೆಗೆ ಬಂದು 'ಭೀಮಸೇನನೆಲ್ಲಿ' ಎಂದು ದ್ರೌಪದಿಯನ್ನು ಕೇಳಿದನು. ಪುಷ್ಪಾಪಚಯಕ್ಕಾಗಿ ಹೋಗಿರುವನು. ಬರಲು ಹೊತ್ತಾಗಬಹುದೆಂದು ಅವಳು ಹೇಳಿದಳು. ಸಂಜೆಯಾದರೂ ಭೀಮಸೇನನು ಬರಲೇ ಇಲ್ಲ. ಗಾಬರಿಯಿಂದ ಭೀಮಸೇನನನ್ನು ಹುಡುಕಲು ಹೊರಟನು. ಇವರು ಹೀಗೆ ಮಾತಾಡುತ್ತಿರುವಾಗ ಮನೋಹರವಾದ ಸೌಗಂಧಿಕಪದ್ಮಗಳ ವಾಸನೆಯು ಅಲ್ಲಿಯ ವಾತಾವರಣವನ್ನೆಲ್ಲ ಆವರಿಸಿತು. ನಕುಲನು ಇದ್ದಕ್ಕಿದ್ದ ಹಾಗೇ ಅಷ್ಟುವಾಸನೆ ಬಂದುದನ್ನು ನೋಡಿ, ಹೊರಗೆ ಬಂದು ಸಮೀಪದಲ್ಲಿದ್ದ ಬಂಡೆಯನ್ನೇರಿ ಸುತ್ತಲೂ ನೋಡಿದನು. ಅಲ್ಲಿ ಸ್ವಲ್ಪದೂರದಲ್ಲಿ ಭೀಮಸೇನನು ಬರುತ್ತಿರುವುದನ್ನು ಕಂಡು, "ಭೀಮಾ, ಭೀಮಾ" ಎಂದು ಕೂಗಿಕೊಂಡನು. ಎಲ್ಲರೂ ಹೊರಗೆ ಬಂದರು. ಭೀಮಸೇನನು "ಇಗೋ, ಬಂದೆ, ಬಂದೆ"

ಎನ್ನುತ್ತ ಪರ್ಣಶಾಲೆಯ ಬಳಿಗೆ ಬಂದೇಬಿಟ್ಟನು. ದ್ರೌಪದಿಯು ನಾಲ್ಕಾರು ಹಜ್ಜೆಗಳು ಮುಂದೆ ಹೋಗಿ, ಭೀಮನನ್ನು ನೋಡಿ ಆನಂದ ದಿಂದ ನಕ್ಕಳು. ಭೀಮನು ತನ್ನ ಪ್ರೀತಿಯ ಕಾಣಿಕೆಯನ್ನು ಒಪ್ಪಿಸಿದನು.

ದ್ರೌಪದಿಯು ತಾವು ವಾಸಮಾಡುತ್ತಿದ್ದ ಕುಟೀರದ ಮುಂಭಾಗವನ್ನು ಸಾರಿಸಿ ಗುಡಿಸಿ ರಂಗವಲ್ಲಿಗಳನ್ನಿಕ್ಕಲು ಪ್ರತಿದಿವಸ ಅರುಣೋದಯಕ್ಕೆ ಸರಿಯಾಗಿ ಎದ್ದು ಹೊರಗೆಬರುತ್ತಿದ್ದಳು. ಸುತ್ತಮುತ್ತಲೂ ವೃಕ್ಷಗಳ ಮೇಲಿದ್ದ ಪಕ್ಷಿಗಳು ಚಿಲಿಪಿಲಿಗುಟ್ಟುತ್ತಿದ್ದುವು. ಮಂದಮಾರುತವು ತಣ್ಣಗೆ ಬೀಸುತ್ತಿತ್ತು. ಉದಯಕಾಲದ ಕೆಂಪು ಪರ್ಣಶಾಲೆಯ ಮುಂದಿದ್ದ ಸರೋವರದಲ್ಲಿ ಪ್ರತಿಬಿಂಬಿಸಿ, ನೋಡಿದವರಿಗೆ ಆನಂದವನ್ನುಂಟುಮಾಡುತ್ತಿತ್ತು. ದ್ರೌಪದಿಯ ಕೆಲಸ ಮುಗಿಯುವ ವೇಳೆಗೆ ಸರಿಯಾಗಿ, ಸೂರ್ಯದೇವನು ತನ್ನ ಕಿರಣಗಳನ್ನು ಎಲ್ಲಾ ಕಡೆಗಳಲ್ಲಿಯೂ ಎರಚುತ್ತ, ಉದಯಾದ್ರಿಯನ್ನೇರುತ್ತಿದ್ದನು. ಇವುಗಳನ್ನೆಲ್ಲ ನೋಡುತ್ತಿದ್ದ ದ್ರೌಪದಿಯ ಮನಸ್ಸೆಲ್ಲವೂ ಪ್ರಕೃತಿದೇವತೆಯಲ್ಲಿ ಐಕ್ಯವಾಗುತ್ತಿತ್ತು. ಹೀಗೆಯೇ ಸಂಧ್ಯಾಕಾಲಸಮಯದಲ್ಲಿ ಪರ್ಣಶಾಲೆಯ ಹಿಂಭಾಗದಲ್ಲಿದ್ದ ಕಲ್ಲು ಬಂಡೆಯ ಮೇಲೆ ಕುಳಿತುಕೊಂಡು, ಪರ್ವತದ ಮೇಲ್ಭಾಗದಿಂದ ಬರುವ ಝರಿಗಳಿಂದುಂಟಾದ ತುಂತುರಗಳ ಮೇಲೆ, ಸೂರ್ಯನ ಕಿರಣಗಳು ಬಿದ್ದು, ಆ ಸುತ್ತುಮುತ್ತಲಿನ ಪ್ರದೇಶವೆಲ್ಲವೂ ನಾನಾಬಣ್ಣಗಳಿಂದ ಶೋಭಿಸುವುದನ್ನೂ, ನೀರು ದೊಡ್ಡ ದೊಡ್ಡ ಕಮರಿಗಳ ಮೂಲಕ ಹರಿದು ಹೋಗುತ್ತಿರುವುದನ್ನೂ ನೋಡುತ್ತಿದ್ದಳು.

ಆ ಝರಿಗಳೆಲ್ಲವೂ ಮೈದಾನವನ್ನು ಮುಟ್ಟಿ ದೊಡ್ಡ ದೊಡ್ಡ ನದಿಗಳಾಗಿ ಡೊಂಕು ಡೊಂಕಾಗಿ ಹರಿಯುವುದನ್ನೂ, ಕಮರಿಗಳನ್ನೂ ದೂರದಲ್ಲಿ ಕಾಣಬಹುದಾದ ಪಟ್ಟಣಗಳನ್ನೂ, ಹಳ್ಳಿಗಳನ್ನೂ, ಡೊಂಕು ಡೊಂಕಾದ ಹೆದ್ದಾರಿಗಳನ್ನೂ, ಕಾಲುದಾರಿಗಳನ್ನೂ, ಚೌಕಚೌಕವಾಗಿ ಪೈರುಪಚ್ಚೆಗಳಿಂದ ಪ್ರಕಾಶಿಸುವ ಹೊಲಗದ್ದೆ ಮುಂತಾದುವುಗಳನ್ನೂ,

ಸಂಧ್ಯಾಕಾಲಸಮಯದಲ್ಲಿ ಸೂರ್ಯನು ಅಸ್ತಾಚಲವನ್ನು ಬಿಟ್ಟು ಕೆಳಕ್ಕಿಳಿಯುವುದನ್ನೂ, ಗೈರಿಕಾದಿ ಧಾತುಗಳಿಂದಲೂ, ದೊಡ್ಡ ದೊಡ್ಡ ವೃಕ್ಷಗಳಿಂದಲೂ, ಕೂಡಿರುವ ಚಿಕ್ಕದಾಗಿರುವ ಬೆಟ್ಟಗುಡ್ಡಗಳನ್ನೂ ನೋಡಿ ಆನಂದಿಸಬೇಕೆಂಬ ಇಚ್ಛೆಯು ದ್ರೌಪದಿಗೆ ಉಂಟಾಯಿತು.

ಮನೋರಥ ಸಿದ್ಧಿಯುಂಟಾಗುವುದೆಂತು ? ಇಂದ್ರಿಯ ಭೋಗಾಪೇಕ್ಷೆಯಿಲ್ಲದ ಧರ್ಮಜನಲ್ಲಿ ಹೇಳಿಕೊಂಡರೆ ಇಷ್ಟಾರ್ಥ ಸಿದ್ಧಿಯಾಗಲಾರದು. ನಕುಲ ಸಹದೇವರು ಇನ್ನೂ ಬಾಲಕರು. ಅರ್ಜುನನು ಸಮೀಪದಲ್ಲಿಲ್ಲ. ಇದ್ದರೂ ಧರ್ಮಜನ ಅಪ್ಪಣೆ ಪಡೆದ ವಿನಾ ಒಂದು ಹಜ್ಜೆಯನ್ನು ಕೂಡ ಮುಂದಿಡುವ ವ್ಯಕ್ತಿಯಲ್ಲ. ಆದರೆ ಭೀಮಸೇನನು ಹಾಗಲ್ಲ. ಧರ್ಮರಾಯನ ಮಾತನ್ನಾದರೂ ಉಲ್ಲಂಘಿಸಿಯಾನು. ದ್ರೌಪದಿಯ ಮಾತನ್ನು ಮಾತ್ರ ಮೀರಲಾರ. ಒಂದು ದಿನ ವಿಜನವಾದ ಒಂದು ಪ್ರದೇಶದಲ್ಲಿ ಭೀಮಸೇನನು ವಿಶ್ರಾಂತಿಸುಖವನ್ನನುಭವಿಸುತ್ತಿದ್ದನು ಮಂದಹಾಸಯುಕ್ತಳಾಗಿ ದ್ರೌಪದಿಯು ಭೀಮನ ಸಮೀಪವನ್ನೈದಿ "ಎಲೈ ಪ್ರಿಯನೆ, ನಿನ್ನ ಬಾಹುಪರಾಕ್ರಮಕ್ಕೆ ಆಳವೇ ಇಲ್ಲ. ಈ ಪರ್ವತದ ಮೇಲ್ಭಾಗದಲ್ಲಿರುವ ರಾಕ್ಷಸರನ್ನೆಲ್ಲ ಓಡಿಸಿಬಿಟ್ಟರೆ ನಾವು ಈ ಬ್ರಾಹ್ಮಣರೊಡನೆ ಎಲ್ಲೆಲ್ಲೂ, ಎಲ್ಲಾ ಕಾಲಗಳಲ್ಲಿಯೂ ನಿರ್ಭಯವಾಗಿ ಸಂಚರಿಸಬಹುದು. ಮತ್ತು ಪರ್ವತಶಿಖರವನ್ನೇರಿ ದಿಗಂತ ವಿಶ್ರಾಂತವಾದ ಪ್ರಕೃತಿಸೌಂದರ್ಯವನ್ನು ನೋಡಿ ನಲಿಯಬಹುದು. ನಾವು ನಿರ್ಭಯವಾಗಿ ನಿರಾತಂಕವಾಗಿ ಪ್ರಕೃತಿಸೌಂದರ್ಯದ ಸೊಬಗನ್ನು ಆಸ್ವಾದಿಸುತ್ತ, ಇನ್ನೂ ಕೆಲವು ಕಾಲ ಇಲ್ಲೇ ಇರಬೇಕಾದರೆ, ಇಲ್ಲಿರುವ ರಾಕ್ಷಸರನ್ನು ಓಡಿಸುವ ಸಾಹಸಕಾರ್ಯವನ್ನು ನೀನು ಕೈಕೊಳ್ಳಬೇಕು. ನಿನ್ನಿಂದಲ್ಲದೆ ಮತ್ತೊಬ್ಬರಿಂದ ಇದು ಸಾಗದು" ಎಂದಳು.

ತಾನೇ ದ್ರೌಪದಿಯಂತಾಗಿ, ಪ್ರಕೃತಿಸೌಂದರ್ಯದ ಚಿತ್ರವನ್ನು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಂಡನು. ನೋಡಿ ನೋಡಿ, ಹಿಗ್ಗಿ ಹಿಗ್ಗಿ,

ನಲಿಯಬೇಕೆಂಬ ಆಸೆಯು ಅವನಲ್ಲೂ ಉತ್ಪನ್ನವಾಯಿತು. ಭೀಮಸೇನನು ಆಯಾಸವನ್ನು ಮರೆತನು. ದ್ರೌಪದಿಯ ಮನೋರಥವೇ ತನ್ನ ಮನೋರಥವೆಂದೂ, ಅವಳ ಇಷ್ಟಾರ್ಥಸಿದ್ಧಿಯೇ ತನ್ನ ಇಷ್ಟಾರ್ಥಸಿದ್ಧಿಯೆಂದೂ ಅಂದು ಅವನಿಗೆ ಅನ್ನಿಸಿತು. ಪರ್ವತಾರೋಹಣಕ್ಕೆ ಸಿದ್ಧನಾದನು. ದ್ರೌಪದಿಯು ನಗುತ್ತ ಭೀಮಸೇನನು ಮೇಲೆ ಹತ್ತುವುದನ್ನೇ ನೋಡುತ್ತ ನೋಡುತ್ತ ತಮ್ಮ ಪರ್ಣಶಾಲೆಗೆ ಹೋದಳು. ಅವನು ಶಿಖರವನ್ನೇರಿ ನಿಂತನು. ತಂಗಾಳಿಯು ಬೀಸಿ ಸ್ವಲ್ಪ ಸಂತೋಷವನ್ನುಂಟುಮಾಡಿತು. ದ್ರೌಪದಿಗಾಗಿ ಮಾರ್ಗಾಯಾಸವನ್ನೂ, ಭಯವನ್ನೂ ನಿರುತ್ಸಾಹವನ್ನೂ ಅರಿಯದ ಭೀಮಸೇನನು ಕುಬೇರನ ವಾಸಸ್ಥಾನವನ್ನು ನೋಡಿದಾಗ ತಮ್ಮ ಪೂರ್ವದ ಸ್ಥಿತಿಯು ಸ್ಮರಣೆಗೆ ಬಂತು. ಎಲ್ಲರಿಗೂ ಸಂತೋಷವನ್ನುಂಟುಮಾಡುವ ಮಂದಮಾರುತವು ಸುಗಂಧಭರಿತವಾಗಿ ಸುಖವಾಗಿ ಬೀಸತೊಡಗಿತು.

ಆಯುಧಪಾಣಿಯಾದ ಭೀಮಸೇನನನ್ನು ನೋಡಿ ಅಲ್ಲಿದ್ದ ಕಾವಲುಗಾರರು 'ಸ್ಥಳವನ್ನು ಬಿಟ್ಟು ದೂರ ಸಾಗು' ಎಂದು ಬಹುವಾಗಿ ಅಬ್ಬರಿಸಿ ಗದರಿಸಿದರು ಭೀಮಸೇನನು ಘೊಳ್ಳೆಂದು ನಕ್ಕು ಕುಬೇರನ ಅರಮನೆಯನ್ನು ಪ್ರವೇಶಿಸಲು ಯತ್ನಿಸಿದನು. ಅಲ್ಲಿದ್ದ ಕಾವಲುಗಾರರೆಲ್ಲರೂ ಅವನ ಮೇಲೆ ಒಟ್ಟಿಗೆ ಬಿದ್ದರು. ಲೆಕ್ಕವಿಲ್ಲದೆ ಎಲ್ಲರನ್ನೂ ತುಂಡು ತುಂಡಾಗಿ ಕತ್ತರಿಸಿ ಮಹತ್ತಾದ ತೇಜಸ್ಸಿನಿಂದ ಮೆರೆಯುತ್ತಿದ್ದನು. ಕುಬೇರನ ಕಡೆಯವನಾದ ಮಣಿಮಂತನು ಅವನಿಗಿದಿರಾಗಿ ಬಂದನು. ಭೀಮಸೇನನು ತನ್ನ ಗದೆಯನ್ನು ಗಿರಗಿರನೆ ತಿರುಗಿಸಿ ಆ ರಾಕ್ಷಸನ ಮೇಲೆ ಪ್ರಯೋಗಿಸಿದನು. ಆ ಪೆಟ್ಟನ್ನು ತಾಳಲಾರದೆ ಮಣಿಮಂತನು ಕೆಳಕ್ಕೆ ಧೊಪ್ಪನೆ ಬಿದ್ದು ಪ್ರಾಣಬಿಟ್ಟನು. ಉಳಿದ ರಾಕ್ಷಸರು ಘೋರವಾಗಿ ಕೂಗಿಕೊಂಡು ಪೂರ್ವಾಭಿಮುಖವಾಗಿ ಓಡಿದರು. ಗಂಧಮಾದನ ಪರ್ವತದ ಮೇಲ್ಭಾಗದಲ್ಲಿ ನಡೆದ ವಿಷಯಗಳೆಲ್ಲವೂ

ಕುಬೇರನಿಗೆ ವರದಿಯಾದುದು. ಇತ್ತ ಭೀಮಸೇನನು ಎಲ್ಲರನ್ನೂ ಕೊಂದು ಖಡ್ಗ ಧನುರ್ಧಾರಿಯಾಗಿ ದೇವೇಂದ್ರನಂತೆ ಕುಬೇರನ ಅರಮನೆಯ ಮುಂದೆ ಪ್ರಕಾಶಿಸುತ್ತಿದ್ದನು.

ಕುಬೇರನು ನಡೆದ ಸಂಗತಿಗಳನ್ನೆಲ್ಲ ಕೇಳಿ ಎರಡನೆಯ ಸಲ ಮಾಡಿದ ಅಪರಾಧಕ್ಕಾಗಿ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ತನ್ನ ಪರಿವಾರ ಸಮೇತ ಪುಷ್ಪಕವಿಮಾನದಲ್ಲಿ ಅಲ್ಲಿಗೆ ಬಂದನು. ತಾನು ಮಾಡಿದ ಕೆಲಸಕ್ಕೆ ಸ್ವಲ್ಪವೂ ಪಶ್ಚಾತ್ತಾಪ ಪಡದೆ ಯುದ್ಧಸನ್ನದ್ಧನಾಗಿಯೇ ನಿಂತಿದ್ದ ಭೀಮಸೇನನನ್ನು ಕಂಡನು ಕುಬೇರನು ವಿಮಾನದಿಂದಿಳಿದು ಭೀಮನನ್ನು ಕುರಿತು "ನನ್ನ ಅಪ್ಪಣೆಯಿಲ್ಲದೆ, ಜುಲುಮೆಯಿಂದ ನನ್ನರಮನೆಯನ್ನು ಪ್ರವೇಶ ಮಾಡಲು ನಿರ್ನಿಮಿತ್ತವಾಗಿ ಏನೂ ಅಪರಾಧ ಮಾಡದ ನನ್ನ ಕಡೆಯ ಕಾವಲುಗಾರರನ್ನು ನೀನು ಕೊಲ್ಲಬಹುದೆ? ಇದಕ್ಕೆ ತಕ್ಕ ಶಾಸ್ತಿಯನ್ನು ಅನುಭವಿಸಿಯೇ ತೀರಬೇಕು" ಎಂದನು. ಆಗ ಭೀಮನು ಸ್ವಲ್ಪವೂ ಅಳುಕದೆ ಕುಬೇರನನ್ನು ಕುರಿತು "ಇಂದು ನಾನಿಲ್ಲಿ ಬಂದಿರುವುದು ನನಗಾಗಿ ಅಲ್ಲ. ನನ್ನ ಪ್ರಾಣದಂತಿರುವ ದ್ರೌಪದಿಯ ಇಷ್ಟಾರ್ಥಸಿದ್ಧಿಗಾಗಿ. ಯಮನ ಕೋರದಾಡೆಗಳಿಗೆ ಸಿಕ್ಕಿ ಪ್ರಾಣವನ್ನಾದರೂ ಬಿಟ್ಟೇನು; ದ್ರೌಪದಿಯ ಮನಸ್ಸನ್ನು ನೋಯಿಸಲಾರೆ. ಹೆಚ್ಚು ಮಾತೇಕೆ? ಈ ಶಿಖರದ ಮೇಲೆ ವಾಸಮಾಡಲು ದ್ರೌಪದಿಯು ಎಳಸಿರುವಳು. ಇಲ್ಲಿ ಅವಳಿಗಾಗಿ ವಸತಿಕಲ್ಪನೆಯಾದ ಹೊರತು ಹಿಂದಿರುಗುವವನಲ್ಲ. ಇದು ಖಂಡಿತ. ಸುಮ್ಮನೆ ನನ್ನೊಡನೆ ಸೆಣಸಬೇಡ, ಯುದ್ಧಕ್ಕೆ ಸಿದ್ಧನಾಗಿದ್ದೇನೆ" ಎಂದನು.

ಇತ್ತ ಧರ್ಮಜನು. ಭೀಮನು ಪರ್ವತದ ಮೇಲ್ಭಾಗಕ್ಕೆ ಹೋಗಿರುವುದನ್ನು ದ್ರೌಪದಿಯಿಂದ ತಿಳಿದು, ಕೂಡಲೆ ನಕುಲ ಸಹದೇವರೊಡನೆ ತಾನೂ ಹೊರಟು ಅಲ್ಲಿಗೆ ಬಂದನು. ಪರ್ವತಾಕಾರದ ರಾಕ್ಷಸರನ್ನೆಲ್ಲ ಕೊಂದು ಕಾಲರುದ್ರನಂತೆ ಗದಾಪಾಣಿಯಾಗಿ ನಿಂತಿದ್ದ ಭೀಮಸೇನ

ನನ್ನು ಕಂಡು ಬಾಚಿ ತಬ್ಬಿಕೊಂಡು, " ಇಂತಹ ಪಾಪಕರವಾದ ಕಾರ್ಯ ವನ್ನು ಮಾಡಕೂಡದು. ನಿರ್ನಿಮಿತ್ತವಾಗಿ ಈ ರಾಕ್ಷಸರನ್ನೆಲ್ಲ ಸಂಹಾರ ಮಾಡಿದೆ. ದೇವತೆಗಳಿಗೆ ಅಸಮ್ಮತವಾದ ಈ ಕಾರ್ಯಗಳನ್ನು ಮಾಡಿರುವೆ. ಎಲೈ ಭೀಮಸೇನನೇ, ನಿನಗೆ ನನ್ನಲ್ಲಿ ಪ್ರೀತಿಯಿದ್ದರೆ ಇನ್ನು ಇಂತಹ ಕಾರ್ಯಗಳಲ್ಲಿ ಪ್ರವೇಶಿಸಬೇಡ " ಎಂದು ಹೇಳಿ ಕುಬೇರನಿಗೆ ನಮಸ್ಕಾರ ಮಾಡಿ, ಭೀಮಸೇನನು ಮಾಡಿದ ಕೆಲಸಗಳನ್ನೇ ಚಿಂತಿಸುತ್ತ ಹಾಗೆಯೇ ನಿಂತಿದ್ದನು.

ಧರ್ಮರಾಯನ ಈ ಮಾತುಗಳನ್ನು ಕೇಳಿದ ಕೂಡಲೆ ಕುಬೇರನ ಕೋಪವು ದೂರವಾಯಿತು ಹಸನ್ಮುಖಿಯಾಗಿ " ಎಲೈ ಧರ್ಮಜನೇ, ನಿನ್ನ ತಮ್ಮನು ನಮಗಪರಾಧ ಮಾಡಿದವನಲ್ಲ. ಈ ಅರಮನೆಯು ನಿಮ್ಮದಾಗಿರುವುದು. ದ್ರೌಪದಿಯು ಎಷ್ಟುಕಾಲ ಇಲ್ಲಿರಬೇಕೆಂದು ಬಯಸುವಳೋ ಅಷ್ಟು ಕಾಲ ನೀವಿಲ್ಲಿರಬಹುದು" ಎಂದು ಹೇಳಿ ವಿಮಾನಾರೂಢನಾಗಿ ತನ್ನ ಸ್ಥಾನಕ್ಕೆ ಹೊರಟುಹೋದನು. ಇತ್ತ ಧರ್ಮರಾಯಾದಿಗಳು ಕೆಳಕ್ಕಿಳಿದರು ಮಾರನೇ ದಿವಸ ಭೀಮಸೇನನು ದ್ರೌಪದಿಯನ್ನೂ, ಘಟೋತ್ಕಚನು ಧರ್ಮಜ, ನಕುಲ, ಸಹದೇವ, ಧೌಮ್ಯರನ್ನೂ ಇತರ ರಾಕ್ಷಸರುಗಳು ಉಳಿದ ಬ್ರಾಹ್ಮಣರುಗಳನ್ನೂ ಪರ್ವತದ ಮೇಲ್ಭಾಗದಲ್ಲಿ ತಂದಿಳುಹಿದರು.



|| ಶ್ರೀ ||

## ನಾಲ್ಕನೆಯ ಅಧ್ಯಾಯ

# ಕ್ಷಮೆ

ಪಾಂಡವರು ಪರಾಜಿತರಾಗಿ ಕಾಡಿಗೆ ಹೋದರೂ ಕೌರವನ ಕಿಚ್ಚು ತಪ್ಪಲಿಲ್ಲ. ಧರ್ಮಜ್ಞನೂ, ನೀತಿಜ್ಞನೂ, ಆದ ವಿದುರನು ಧರ್ಮಪಕ್ಷಪಾತಿಗಳಾದ ಪಾಂಡವರ ಕಡೆಗೇ ಮಾತಾಡುತ್ತಿದ್ದನು. ದೊರೆಯ ಮನಸ್ಸು ಪಾಂಡವರ ಕಡೆ ತಿರುಗುವಂತೆ ಎಲ್ಲಿ ಮಾಡಿಬಿಡುವನೋ ಎಂಬ ದಿಗಿಲು ದುರ್ಯೋಧನಾದಿಗಳನ್ನು ಬಹಳವಾಗಿ ಪೀಡಿಸುತ್ತಿತ್ತು. ಏನಾದರೂ ಮಾಡಿ ಪಾಂಡವರ ಹುಟ್ಟೇ ಇಲ್ಲದಂತೆ ಮಾಡಿಬಿಡಬೇಕೆಂದು ಯೋಚಿಸಿದನು. ಅದಕ್ಕಾಗಿ ಕಾಡಿಗೆ ಹೋಗುವ ಯತ್ನವು ಮಾಡಲ್ಪಟ್ಟಿತು. ಆದರೆ ದೈವಗತಿಯನ್ನು ಮೀರುವವರಾರು ? ವೇದವ್ಯಾಸರು ಅವರ ದುರಾಲೋಚನೆಯನ್ನು ಮುಂದೆ ಹಾಯಗೊಡಲಿಲ್ಲ.

ಕೌರವೇಶ್ವರನಿಗೆ ನೆಮ್ಮದಿಯೇ ಇಲ್ಲದಂತಾಯಿತು. ಯಾವಾಗಲೂ ಪಾಂಡವರ ಯೋಚನೆ. ಏನಾದರೂ ಮಾಡಿ ಅವರನ್ನು ಹುಟ್ಟಲೇ ಇಲ್ಲವೆನ್ನಿಸಬೇಕು ; ತಪ್ಪಿದರೆ ಏನಾದರೂ ಕಿರುಕುಳಗಳನ್ನು ಕೊಡಬೇಕು; ಇಲ್ಲವಾದರೆ ಅವರ ಮನಸ್ಸನ್ನಾದರೂ ನೋಯಿಸಬೇಕು. ಅಂತು ಏನಾದರೂ ಮಾಡಿ ತನ್ನ ಮನಸ್ಸನ್ನು ತಣಿಸಿ ಸಂತೋಷಿಸಬೇಕು. ಇಂಥಾ ವ್ಯಾಪಾರಗಳೇ ಸ್ವಾರ್ಥಪರರ ಮನೋವೃತ್ತಿಯ ಮರ್ಮ; ಮಾತ್ಸರ್ಯದ ಕುರುಹು; ಅಸಹನೆಯ ಅಪರಮಿತ ಅವಧಿ; ಅವಿವೇಕದ ಹೆದ್ದಾರಿ.

ಹೀಗೆ ಕೆಲವು ಕಾಲ ಕಳೆಯಿತು. ಒಂದು ದಿನ ಒಬ್ಬ ಬ್ರಾಹ್ಮಣನು ಪಾಂಡವರಿದ್ದೆಡೆಯಿಂದ ಧೃತರಾಷ್ಟ್ರನಲ್ಲಿಗೆ ಬಂದನು. ಆಗ ಪಾಂಡವರು

ದ್ವೈತವನದಲ್ಲಿದ್ದರು. ಧೃತರಾಷ್ಟ್ರನು ಅವನನ್ನು ಬಹಳ ಅಕ್ಕರೆಯಿಂದ ಬರಮಾಡಿಕೊಂಡು ಪಾಂಡವರ ವೃತ್ತಾಂತವನ್ನು ಕೇಳಲೆಳಸಿದವನಾಗಿ ಪ್ರಶ್ನೆಮಾಡಿದನು. ಆಗ ಆ ಬ್ರಾಹ್ಮಣನು "ಎಲೈ ರಾಜನೇ, ಪಾಂಡವರು ವನವಾಸದಲ್ಲಿ ಬಿಸಿಲು, ಗಾಳಿ, ಮಳೆ, ಚಳಿ, ಮೊದಲಾದವುಗಳಿಂದ ಪೀಡಿತರಾಗಿ ದುಃಖಪಡುತ್ತ ಕೃಶರಾಗಿರುವರು. ವೀರಪತ್ನಿಯಾದ ದ್ರೌಪದಿಯು ವನದಲ್ಲಿ ಕ್ಲೇಶಪಡುತ್ತ ಅನಾಥಳಂತೆ ಇರುವಳು" ಎಂದನು. ಆಗ ದೊರೆಯು ಸಂತಾಪಪಡುತ್ತ, ಕೃಪಾಯುಕ್ತನಾಗಿ ಪಾಂಡವರ ದುರ್ದಶೆಗೆ ತಾನೇ ಕಾರಣನೆಂದು ಹಂಬಲಿಸುತ್ತ, ಅವರ ಗುಣಗಳನ್ನು ವರ್ಣಿಸುತ್ತ, ಬಹುವಾಗಿ ಮರುಗಿದನು. "ಸಶರೀರನಾಗಿ ಸ್ವರ್ಗದಿಂದ ಮರಳಿ ಬಂದ ಅರ್ಜುನನ ಮುಂದೆ ನಿಲ್ಲುವವರಾರು ? ಭೀಮಾರ್ಜುನರು ಕಾಲಾಂತಕರಂತೆ ಯುದ್ಧದಲ್ಲಿ ತನ್ನ ಮಕ್ಕಳು ಮೊಮ್ಮಕ್ಕಳನ್ನು ನಿಶ್ಶೇಷವಾಗಿ ನಾಶಮಾಡುವುದರಲ್ಲಿ ಸಂಶಯವೇನೂ ಕಾಣುವುದಿಲ್ಲ" ಎಂದು ಚಿಂತಿಸುತ್ತ ಬಹುವಾಗಿ ಭೀತಿಗೊಂಡನು.

ಧೃತರಾಷ್ಟ್ರನು ಸಂತಾಪಪಟ್ಟುದನ್ನೂ, ಭೀತಿಪಟ್ಟುದನ್ನೂ ಕಣ್ಣಾರೆ ಕಂಡ ಶಕುನಿಯು ಈ ಸಂಗತಿಯನ್ನು ಕರ್ಣದುರ್ಯೋಧನರಿಗೆ ಏಕಾಂತದಲ್ಲಿ ತಿಳುಹಿಸಿದನು. ಮಂದಬುದ್ಧಿಯಾದ ದುರ್ಯೋಧನನು ಅದನ್ನು ಕೇಳಿ ಸ್ವಲ್ಪವೂ ಚಿಂತಿಸದೆ ಹೋದನು. ಆಗ ಕರ್ಣನು, "ರಾಜಪದವಿಯಲ್ಲಿರುವ ನೀನು ಸಕಲೈಶ್ವರ್ಯಗಳಿಂದ ಕೂಡಿ, ಸೂರ್ಯನಂತೆ ಮೆರೆಯುತ್ತ ರಾಜ್ಯಭ್ರಷ್ಟರಾಗಿ ಐಶ್ವರ್ಯವನ್ನು ಕಳೆದುಕೊಂಡು ವನವಾಸ ಮಾಡುತ್ತಿರುವ ಪಾಂಡವರನ್ನು ನೋಡುವುದಕ್ಕೆ ಪ್ರಯಾಣ ಮಾಡು. ನಿನ್ನ ಐಶ್ವರ್ಯವನ್ನು ನೋಡಿ ನಿನ್ನ ಶತ್ರುಗಳಾದ ಅವರು ದುಃಖಪಡುವರು. ಹಾಗಾದರೆ ನಿನ್ನ ಐಶ್ವರ್ಯವು ಸಫಲವಾಗುವುದು. ಸಮಸ್ಥಿತಿ ಪಡೆದವನು ದುರ್ಗತಿಯನ್ನು ಹೊಂದಿದ ಶತ್ರುಗಳನ್ನು ನೋಡಿದರೆ ಪರ್ವತದ ಮೇಲಿರತಕ್ಕವನು ಭೂಮಿಯ ಮೇಲಿರತಕ್ಕವನನ್ನು ನೋಡಿದ

ಹಾಗಾಗುವುದು. ಎಲೈ ರಾಯನೇ, ಇದಕ್ಕಿಂತಲೂ ಉತ್ತಮವಾದ ಸುಖವುಂಟೇ ? ನಿನ್ನ ರಾಣೀವಾಸದವರು ದಿವ್ಯವಾದ ವಸ್ತ್ರಾಭರಣಗಳಿಂದಲಂಕೃತರಾಗಿ ನಾರುಶೀರೆಯನ್ನುಟ್ಟುಕೊಂಡಿರುವ ದ್ರೌಪದಿಯನ್ನು ನೋಡಲಿ. ಅದರಿಂದ ಆಕೆಯು ತನ್ನ ಬಡತನದ ಬಾಳನ್ನು ನಿಂದಿಸಿಕೊಂಡು ಬದುಕುವುದರಲ್ಲಿ ಜಿಹಾಸೆಯನ್ನು ಹೊಂದಲಿ. ಅಧಿಕವಾಗಿ ದುಃಖಪಡಲಿ'' ಎಂಬ ಅಭಿಪ್ರಾಯವನ್ನು ಕೌರವನ ಮನಸ್ಸಿನಲ್ಲಿಟ್ಟನು.

ಕೌರವನಿಗೆ ಬೇಕಾದುದೂ ಅದೇ ಆಗಿತ್ತು. ಘೋಷಯಾತ್ರಾನೆಪದಿಂದ ದ್ವೈತವನಕ್ಕೆ ಹೋಗಲು ದೊರೆಯ ಅನುಮತಿಯನ್ನು ಪಡೆದನು. ಕರ್ಣ, ಶಕುನಿ, ದುಃಶ್ಯಾಸನರೊಡನೆ ಹೊರಟು ಪಾಂಡವರಿದ್ದೆಡೆಗೆ ಅನತಿದೂರದಲ್ಲಿ ತನ್ನ ಬಿಡಾರ ಬಿಟ್ಟನು. ಇವರು ಇಳಿದ ಸ್ಥಳಕ್ಕೆ ಸಮೀಪದಲ್ಲಿ ಕುಬೇರನಿಗೆ ಸೇರಿದ್ದ ಒಂದು ಪುಷ್ಕರಿಣಿಯಿತ್ತು. ಜಲಕ್ರೀಡೆಯಾಡಲು ಕೌರವನ ಕಡೆಯವರು ಅಲ್ಲಿಗೆ ಹೋದರು. ಅಲ್ಲಿ ಕಾವಲುಗಾರರಾಗಿದ್ದ ಕುಬೇರನ ಕಡೆಯವರಾದ ಚಿತ್ರಸೇನನೇ ಮೊದಲಾದ ಗಂಧರ್ವರಿಗೂ, ದುರ್ಯೋಧನನ ಕಡೆಯವರಿಗೂ, ತಿಕ್ಕಾಟಕ್ಕೆ ಪ್ರಾರಂಭವಾಯಿತು. ಈ ವರ್ತಮಾನವು ಕರ್ಣನೊಡನಿದ್ದ ದುರ್ಯೋಧನನಿಗೆ ವರದಿಯಾಯಿತು. ಕೂಡಲೆ ಧನುರ್ಧಾರಿಗಳಾಗಿ ಇಬ್ಬರೂ ಹೊರಟರು. ಚಿತ್ರಸೇನನ ಧನುಸ್ಸಿನಿಂದ ಹೊರಟ ಬಾಣಗಳ ಪೆಟ್ಟನ್ನು ಸಹಿಸಲಾರದೆ ಕರ್ಣನು ಹಿಮ್ಮೆಟ್ಟಿದನು. ಚಿತ್ರಸೇನನು ದುರ್ಯೋಧನನನ್ನು ಹಿಡಿದು ಹಿಂಗಟ್ಟುಮುರ ಕಟ್ಟಿ ತನ್ನ ವಿಮಾನದಲ್ಲಿ ಹಾಕಿಕೊಂಡು ಆಕಾಶಮಾರ್ಗದಲ್ಲಿ ಉತ್ತರಾಭಿಮುಖನಾಗಿ ಹೊರಟನು.

ಈ ವರ್ತಮಾನವನ್ನು ಕೇಳಿ ಭಾನುಮತಿಯು ಕರ್ಣನಲ್ಲಿಗೆ ಬಂದು ಕೌರವೇಶ್ವರನನ್ನು ಬಿಡಿಸಿಕೊಂಡು ಬರಬೇಕೆಂದು ಬಹುವಾಗಿ ಬೇಡಿಕೊಂಡಳು. ಕರ್ಣನು ಧನುರ್ಧಾರಿಯಾಗಿ ಪುನಃ ಅವನ ಬೆನ್ನಟ್ಟಿದನು. ಆಕಾಶದಲ್ಲಿ ಹೋಗುತ್ತಿದ್ದ ಚಿತ್ರಸೇನನೆಲ್ಲಿ ! ಭೂಮಿಯ ಮೇಲೆ

ಹೋಗುತ್ತಿದ್ದ ಕರ್ಣನೆಲ್ಲಿ ! ದೊರೆಯನ್ನು ಬಿಡಿಸಿಕೊಳ್ಳಲಾರದೆ ಅಸಹಾಯನಾಗಿ ಖಿನ್ನಮನಸ್ಕನಾಗಿ ಸುಮ್ಮನಾದನು. ತಡಮಾಡಿದರೆ ಪ್ರಯೋಜನವಿಲ್ಲವೆಂದು ಅರಿತು ಭಾನುಮತಿಯು ಕೂಡಲೆ ಅಲ್ಲೇ ಸಮೀಪದಲ್ಲಿದ್ದ ಧರ್ಮರಾಯನ ಬಳಿಗೆ ಹೋಗಿ, ಅವನ ಪಾದಾಕ್ರಾಂತಳಾಗಿ ಕಂಬನಿಗಳನ್ನು ಸುರಿಸುತ್ತ ಗಂಧರ್ವರ ದೆಸೆಯಿಂದ ಪತಿಯನ್ನು ಬಿಡಿಸಿ ಕಾಪಾಡಬೇಕೆಂದು ಬೇಡಿಕೊಂಡಳು.

ಧರ್ಮರಾಯನು ಶಮದಮಾದಿ ಗುಣಗಳ ಅಪರಾವತಾರ; ಹಿಂಸೆಗೆ ಅಹಿಂಸೆಯೇ ಇವನ ಉತ್ತರ; ಬೈದರೆ ಬೈಸಿಕೊಂಡಾನು; ಬೈಯಲಾರ; ಹೊಡೆದರೆ ಹೊಡಿಸಿಕೊಂಡಾನು; ಬದಲು ಹೊಡೆಯಲಾರ; ಬೈದರಲ್ಲ, ಹೊಡೆದರಲ್ಲ ಎಂಬ ಕೋಪಕ್ಕೆ ಅವನಲ್ಲಿ ಸ್ಥಳವೇ ಇಲ್ಲ. ಬೈದವರನ್ನೂ, ಹೊಡೆದವರನ್ನೂ, ಹಿಂಸೆ ಕೊಟ್ಟವರನ್ನೂ ಪ್ರೀತಿ ಮಾಡುವುದನ್ನು ಮಾತ್ರ ಬಲ್ಲ. ಸತ್ಯಾಗ್ರಹಿಗಳಲ್ಲಿ ಅಗ್ರಗಣ್ಯನಾದ ಇಂತಹ ಧರ್ಮರಾಯನ ಹೃದಯದಲ್ಲಿ ಮಾತ್ಸರ್ಯಕ್ಕೆ ತಾವೆಲ್ಲುಂಟು? ಕೌರವನು ಮಾಡಿದ ಅಪರಾಧಗಳೆಲ್ಲವೂ ಎಲ್ಲೋ ಮಾಯವಾಗಿ ಹೋದವು. ಭ್ರಾತೃಪ್ರೇಮವು ಉಕ್ಕಿತು. ಭಾನುಮತಿಯ ದೀನತ್ವವು ಅವನೆದೆಯನ್ನು ಕರಗಿಸಿಬಿಟ್ಟಿತು. ತಮ್ಮಂದಿರನ್ನು ನೋಡಿ "ಈಗ ನಿಮ್ಮ ಸಹೋದರನಾದ ಕೌರವನಲ್ಲಿ ನಿಮ್ಮ ಸಹಕಾರವನ್ನು ತೋರಿಸಿ" ಎಂದನು. ಆಗ ಭೀಮಸೇನನು ಆಶ್ಚರ್ಯಯುಕ್ತನಾಗಿ, "ಶತ್ರುವಿನಲ್ಲಿ ಸಹಕಾರವೆಲ್ಲಿ? ನಾವು ಮಾಡಬೇಕಾದ ಕಾರ್ಯವನ್ನು ಗಂಧರ್ವರೇ ಮಾಡಿರುವರು. ಇದು ನಮಗೆ ಸಂತೋಷಪ್ರದವಾದ ಸಂಗತಿ" ಎಂದನು. ಆಗ ಧರ್ಮಜನು "ನಮ್ಮಿಬ್ಬರಲ್ಲಿ ಜಗಳವಾದಾಗ ನಾವೈದು ಮಂದಿ ಒಂದು; ಅವರು ನೂರುಮಂದಿ ಒಂದು. ಹೊರಗಿನವರೊಡನೆ ಜಗಳ ಸಂಭವಿಸಿದಾಗ ನಾವು ನೂರೈದು ಮಂದಿ ಒಂದು" ಎಂದನು. ಅರ್ಜುನ, ನಕುಲ, ಸಹದೇವ, ದ್ರೌಪದಿ ಈ ನಾಲ್ವರೂ ಭೀಮನ ಸಹಾಯವಾಗಿಯೇ

ಮಾತನಾಡಿದರು. ಮುಂದೆ ಧರ್ಮರಾಜನು ಮಾಡುವುದೇನು ? ' ಕೌರವೇಶ್ವರನನ್ನು ಬಿಡಿಸಿಕೊಂಡು ಬಂದ ಹೊರತು ಆರೋಗಣೆ ಮಾಡೆನು ' ಎಂಬ ತನ್ನ ಸತ್ಯಾಗ್ರಹಾಸ್ತ್ರವನ್ನು, ತನ್ನನ್ನು ಪ್ರೀತಿಸುವ ತನ್ನ ಸಹೋದರರ ಮೇಲೆ ಪ್ರಯೋಗಿಸಿದನು. ಅದರ ವೇಗವನ್ನು ತಡೆಯಲಾರದೆ ಅರ್ಜುನನು ಗಾಂಡೀವಧನುರ್ಧಾರಿಯಾಗಿ ಚಿತ್ರಸೇನನನ್ನು ಬೆನ್ನಟ್ಟಿದನು. ಭೀಮನೂ ಗದಾಧಾರಿಯಾಗಿ ಅರ್ಜುನನನ್ನು ಹಿಂಬಾಲಿಸಿದನು ನಕುಲ ಸಹದೇವರೂ ಹೊರಟರು. ದ್ರೌಪದಿಯು ಅಲ್ಲೇ ಸೊರಗಿಬಿದ್ದಳು. ಹಿಂದುಗಡೆಯಿಂದ ಬರುತ್ತಿದ್ದ ಬಾಣಗಳ ಪೆಟ್ಟನ್ನು ತಾಳಲಾರದೆ ಚಿತ್ರಸೇನನು ಹಿಂದಿರುಗಿ ಅರ್ಜುನನನ್ನು ಕಂಡು, " ನಿಮ್ಮಪ್ಪನ ಅಪ್ಪಣೆಯಂತೆ ಈತನನ್ನು ತೆಗೆದುಕೊಂಡು ಹೋಗುತ್ತಿರುವೆನು. ನನ್ನನ್ನೇಕೆ ವೃಥಾ ನಿನ್ನ ಬಾಣಘಾತಗಳಿಂದ ನೋಯಿಸುವೆ " ಎಂದನು ಆಗ ಅರ್ಜುನನು "ನಮ್ಮಣ್ಣನ ಅಪ್ಪಣೆಯಂತೆ ಆತನನ್ನು ನೀನು ತೆಗೆದುಕೊಂಡು ಹೋಗಲು ಬಿಡಲಾರೆ. ನಿಲ್ಲು ನಿಲ್ಲು " ಎಂದು ಗರ್ಜಿಸಿದನು. ಅರ್ಜುನನ ಶರಘಾತಗಳ ಪೆಟ್ಟನ್ನು ತಾಳಲಾರದವನಾಗಿ ಅವನ ಕೈವಶವಾದನು. ವಿಮಾನದಲ್ಲಿ ಮೂಟೆಯಂತೆ ಬಿದ್ದಿದ್ದ ಕೌರವೇಶ್ವರನ ಸಹಿತ ಚಿತ್ರಸೇನನನ್ನು ಧರ್ಮರಾಜನಲ್ಲಿಗೆ ಕರೆದುಕೊಂಡು ಬಂದನು. ಚಿತ್ರಸೇನನು ಧರ್ಮಜನಿಗೆ ಅಡ್ಡಬಿದ್ದು ಕೌರವನನ್ನು ಅವನ ಪಾದಗಳ ಮೇಲೆ ಕೆಡವಿ ಅವನ ಅಪ್ಪಣೆಯನ್ನು ಪಡೆದು ಹೊರಟು ಹೋದನು. " ಕೌರವೇಶ್ವರನು ಬಹು ನೊಂದಿದ್ದಾನೆ. ಬಂಧನದಿಂದ ಬೇಗ ಬಿಡಿಸಿ " ಎಂದು ಭೀಮಾದಿಗಳಿಗೆ ಆಜ್ಞೆ ಮಾಡಿದನು. ಯಾರೂ ಗಂಧರ್ವರ ಗಂಟನ್ನು ಬಿಚ್ಚಲಾರದೆ ಹೋದರು. ಕೊನೆಗೆ ಭಾನುಮತಿಗೆ ಹೇಳಿದನು. ಅವಳಿಂದಲೂ ಸಾಧ್ಯವಾಗಲಿಲ್ಲ. ಗಂಧರ್ವರ ಗಂಟನ್ನು ಬಿಚ್ಚುವ ಗುಟ್ಟು ಪತಿವ್ರತಾಸ್ತ್ರೀಯರಿಗಲ್ಲದೆ ಇತರರಿಗೆ ಗೊತ್ತಿಲ್ಲವೆಂದು ತಿಳಿದ ಧರ್ಮಜನು ಬಂಧನವನ್ನು ಬಿಡಿಸುವಂತೆ ದ್ರೌಪದಿಗೆ ಕಟ್ಟುಮಾಡಿದನು, ಕೂಡಲೆ ದ್ರೌಪದಿಯು

ಗಂಧರ್ವರ ಗಂಟುಗಳನ್ನು ಬಿಚ್ಚಿದಳು. ದ್ರೌಪದಿಯಿಂದ ಬಿಡುಗಡೆ ಹೊಂದಿದ ಸುಯೋಧನನು ನಾಚಿಕೆಯಿಂದ ಮುರಿದವನಾಗಿ ತಲೆವಾಗಿ, ಧರ್ಮಜನ ಇದಿರಿನಲ್ಲಿ ನಿಲ್ಲಲಾರದೆ, ದುಗುಡದಿಂದ ಹೊರಟುಹೋದನು. ಪ್ರಾಯೋಪವೇಶವನ್ನಾದರೂ ಮಾಡಿ ತನ್ನ ಜನ್ಮವನ್ನು ಕೊನೆಗಾಣಿಸು ವುದುತ್ತಮವೆಂದು ಅಂದು ಅವನಿಗೆ ತೋರಿತು. ಹಸ್ತಿನಾಪುರಿಗೆ ಹಿಂದಿ ರುಗದೆ ಅಲ್ಲೇ ದ್ವೈತವನದಲ್ಲಿ ಒಂದೆಡೆ ದರ್ಭಾಸನದ ಮೇಲೆ ಪವಡಿಸಿ ದನು. ಭಾನುಮತಿಯು ಧರ್ಮಜನಿಗೆ ನಮಸ್ಕಾರ ಮಾಡಿ ದ್ರೌಪದಿ ಯನ್ನು ಆಲಿಂಗನ ಮಾಡಿಕೊಂಡು ಅವಳ ಅಪ್ಪಣೆಯನ್ನು ಪಡೆದು ಪತಿ ಯನ್ನು ಹಿಂಬಾಲಿಸಿದಳು.

ಕೌರವೇಶ್ವರಾ! ಕರ್ಣನ ಮಾತನ್ನು ಕೇಳಿ ನಿನ್ನ ಐಶ್ವರ್ಯಮದ ವನ್ನೂ, ರಾಜ್ಯಮದವನ್ನೂ, ತೋರಿಸಿ, ಪಾಂಡವರನ್ನು ನೋಯಿಸಬೇ ಕೆಂದು ದ್ವೈತವನಕ್ಕೆ ಬಂದೆ. ಚಿತ್ರಸೇನನ ಬಂದಿಯಾಗಿ ಧರ್ಮಜನಿಂದ ಬಿಡುಗಡೆಹೊಂದಿದೆ. ನಿನ್ನಲ್ಲಿ ನೀನೆ ತಿರಸ್ಕೃತನಾಗಿ ಪ್ರಾಯೋಪವೇಶ ಮಾಡಲೆಳಸಿದೆ. ತನ್ನಷ್ಟಕ್ಕೆ ತಾನು ಎಲ್ಲೋ ಕಾಡಿನಲ್ಲಿದ್ದ ಧರ್ಮಜನು ಭೂಮಿತೂಕದ ಮನುಷ್ಯನೆಂಬುದನ್ನು ಎಲ್ಲರಿಗೂ ತೋರಿಸಿಕೊಟ್ಟೆ. ಕೈ ಯಲ್ಲಿ ಸಿಕ್ಕಿದ ಶತ್ರುವನ್ನು ಮನ್ನಿಸಿದ ಮಹಾಗುಣಿ ಎಂಬುದನ್ನು ಪ್ರಪಂ ಚದಲೆಲ್ಲ ಪ್ರಚುರಪಡಿಸಿದೆ. ಶತ್ರುಗಳನ್ನೂ ಪ್ರೀತಿಸಿ ಎಲ್ಲರ ಹೃದ ಯ ಕಲ್ಮಷವನ್ನು ತೊಡೆಯುವ 'ವಿಶ್ವಪ್ರೇಮಿ' ಎಂಬ ಧರ್ಮಜನ ತಿರುಳನ್ನು ಕ್ಷಣಕಾಲ ನೀನೇ ಅನುಭವಿಸಿದೆ ಇದೇ ಕ್ಷಮೆಯ ಗುಟ್ಟು. ಇದೇ ಕ್ಷಮೆಯ ಪ್ರಾದುರ್ಭಾವ!

ದ್ವೈತವನವನ್ನು ಬಿಟ್ಟು ಪುನಃ ಪಾಂಡವರು ಕಾಮ್ಯಕವನಕ್ಕೆ ಹೋ ದರು. ಕೆಲವು ಕಾಲಾನಂತರ, ಒಂದು ದಿನ ಪಾಂಡವರು ಬ್ರಾಹ್ಮಣರ ನಿಮಿತ್ತವಾಗಿ, ಆಹಾರಪದಾರ್ಥವನ್ನು ತರಬೇಕೆಂದು, ತೃಣಬಿಂದುಗಳ ಆಶ್ರಮದಲ್ಲಿ ದ್ರೌಪದಿಯನ್ನು ಬಿಟ್ಟು, ಧೌಮ್ಯರ ಆಜ್ಞೆಯನ್ನು ಪಡೆದು,

ದಿಕ್ಕುದಿಕ್ಕಿಗೆ ಬೇಟೆಯಾಡಲು ಹೊರಟುಹೋದರು. ಆ ವೇಳೆಯಲ್ಲಿ ಸಿಂಧುದೇಶಕ್ಕೆ ಅಧಿಪತಿಯಾಗಿಯೂ, ವೃದ್ಧಕ್ಷತ್ರನಿಗೆ ಮಗನಾಗಿಯೂ, ಇರುವ ಜಯದ್ರಥನು ವಿವಾಹಾರ್ಥವಾಗಿ, ಅನೇಕ ರಾಜಯೋಗ್ಯವಾದ ವಸ್ತುಗಳನ್ನು ತೆಗೆದುಕೊಂಡು, ಅನೇಕ ಮಂದಿ ಸಾಮಂತರಾಜರೊಡ ಗೂಡಿ ಸಾಲ್ವದೇಶಕ್ಕೆ ಹೊರಟು, ಕಾಮ್ಯಕವನಕ್ಕೆ ಬಂದನು. ಆಗ ದ್ರೌಪ ದಿಯು ತನ್ನ ಬಲಗೈಯನ್ನು ಪರ್ಣಶಾಲೆಯ ಬಾಗಿಲ ಬಳಿ ಇದ್ದ ವೃಕ್ಷದ ತಾಳುವಿನ ಮೇಲೂ ತನ್ನ ಎಡಗೈಯನ್ನು ತನ್ನ ಸೊಂಟದ ಮೇಲೂ ಇಟ್ಟುಕೊಂಡು ಪತಿಗಳ ಆಗಮನವನ್ನೇ ಚಿಂತಿಸುತ್ತ ಚಲಿಸದೆ ನಿಂತಿದ್ದ ಳು. ಈ ಪರಿ ಬಾಗಿಲಬಳಿ ನಿಂತಿದ್ದ ದ್ರೌಪದಿಯನ್ನು ಜಯದ್ರಥನು ಕಂಡು ' ಈಕೆ ಯಾರು ! ಅಪ್ಸರಸ್ತ್ರೀಯೋ ! ದೇವತೆಗಳ ಮಾಯೆಯೋ ! ವಿಶ್ವಕರ್ಮನಿರ್ಮಿತ ಪುತ್ಥಳಿಯೋ ! ಬ್ರಹ್ಮನ ಮಾನಸ ಪುತ್ರಿಯೋ !'' ಎಂದು ಆಶ್ಚರ್ಯಪಡುತ್ತ ದುಷ್ಟಮನಸ್ಕನಾಗಿ ಕೋಟಿಕಾಸ್ಯನನ್ನು ಕರೆದು ರತಿದೇವಿಯಂತಿರುವ ಆ ತರುಣಿಯ ಪೂರ್ವೋತ್ತರಗಳನ್ನು ತಿಳಿ ದುಕೊಂಡು ಬರುವಂತೆ ಹೇಳಿ ಕಳುಹಿಸಿದನು.

ಕೋಟಿಕಾಸ್ಯನು ದ್ರೌಪದಿಯ ಸಮೀಪವನ್ನೈದಿ, ಪತಿವ್ರತಾಶಿ ರೋಮಣಿಗಳ ಮುಖದ ಸುತ್ತಲೂ ಹೊರಡುವ ಆ ದಿವ್ಯ ತೇಜಸ್ಸನ್ನು ಕಂಡು ದೈನ್ಯಭಾವದಿಂದ ನಮಸ್ಕಾರಮಾಡಿ, ''ಎಲೌ ತಾಯೆ, ನೀನಾ ರು ? ಇಲ್ಲೇಕಿದ್ದೀಯೆ? ಸಿಂಧುದೇಶಾಧಿಪನಾದ ಜಯದ್ರಥನು ಇಗೋ, ಇಲ್ಲೇ ಸಮೀಪದಲ್ಲಿ ಬಿಡಾರ ಬಿಟ್ಟಿರುವನು. ನೀನೊಬ್ಬಳೆ ಇರುವು ದನ್ನು ಕಂಡು ಕನಿಕರದಿಂದ ವಿಚಾರಿಸಿಕೊಂಡು ಬರುವಂತೆ ನನ್ನನ್ನು ಇಲ್ಲಿಗೆ ಕಳುಹಿಸಿರುವನು '' ಎಂದನು. ಆಗ ದ್ರೌಪದಿಯು ಜಯದ್ರಥನ ದುಷ್ಟಮನಸ್ಸನ್ನು ತಿಳಿದವಳಾಗಿ, ತನ್ನ ಪತಿಗಳು ಬರುವವರೆಗೂ ಕಾಲ ಹರಣಮಾಡಬೇಕೆಂಬ ಯೋಚನೆಯಿಂದ ಏನೂ ತಿಳಿಯದವಳ ಹಾಗೆ ಕೋ ಟಿಕಾಸ್ಯನೊಡನೆ ಸರಳವಾಗಿ ಮಾತನಾಡಲಾರಂಭಿಸಿ, ತನ್ನ ಪೂರ್ವೋತ್ತರ

ಗಳನ್ನೆಲ್ಲ ತಿಳುಹಿಸಿದಳು; ಮತ್ತು ತನ್ನ ಪತಿಗಳು ಬೇಟೆಯಿಂದ ಹಿಂದಿರುಗಿ ಬರುವ ಕಾಲವು ಸನ್ನಿಹಿತವಾಯಿತೆಂದೂ, ಅವರುಗಳೆಲ್ಲರೂ ಅಲ್ಲೇ ಇದ್ದು ಆತಿಥ್ಯಸ್ವೀಕಾರ ಮಾಡಿಕೊಂಡು ಹೋಗಬೇಕೆಂತಲೂ, ಹೇಳಿದಳು.

ಕೋಟಿಕಾಸ್ಯನು, ಪುನಃ ದ್ರೌಪದಿಗೆ ನಮಸ್ಕಾರ ಮಾಡಿ, ಜಯದ್ರಥನಲ್ಲಿಗೆ ಬಂದು, ತನಗೂ ದ್ರೌಪದಿಗೂ ನಡೆದ ಮಾತು ಕಥೆಗಳನ್ನೆಲ್ಲ ವಿಸ್ತಾರವಾಗಿ ತಿಳುಹಿದನು. ಜಯದ್ರಥನು ತಾನೇ ದ್ರೌಪದಿಯಿದ್ದ ಪರ್ಣಶಾಲೆಯ ಬಳಿಗೆ ಹೋದನು. ದ್ರೌಪದಿಯು ಸಿಂಧುದೇಶಾಧಿಪತಿಗೆ ದರ್ಭಾಸನವನ್ನು ಕೊಟ್ಟು ಕುಳ್ಳಿರಿಸಿ ಮೊದಲಿನಂತೆ ಸರಳವಾಗಿಯೇ ಜಯದ್ರಥನೊಡನೆ ಮಾತನಾಡತೊಡಗಿದಳು. ಆದರೆ ಮನ್ಮಥಬಾಣಗಳಿಂದ ಪೀಡಿತನಾದ ಜಯದ್ರಥನು ತನ್ನ ಇಷ್ಟವನ್ನು ಸೂಚಿಸಲು, ದ್ರೌಪದಿಯು ಕುಪಿತಳಾಗಿ "ಕಾಮಾಂಧನಾಗಿ ನನ್ನನ್ನು ಕೆಣಕಬೇಡ. ಪರಸ್ತ್ರೀಯರ ಮೇಲೆ ಕಣ್ಣಿಡುವುದರ ಫಲವು ಅತಿಕಟುವಾದುದು. ಇಂದ್ರಿಯಪರವಶನಾಗಿ ಸರಳಬೇಡ. ನಿನ್ನ ಮನಸ್ಸನ್ನೂ, ನಿನ್ನ ಬುದ್ಧಿಯನ್ನೂ, ನಿನ್ನ ಹತೋಟಿಯಲ್ಲಿಟ್ಟುಕೊ. ಸಹಜಾತಧರ್ಮಗಳಿಗೆ ಬೇಗನೆ ಸೋತು ವಶವಾಗುವುದು ಮೃಗತ್ವದ ಲಕ್ಷಣ; ಮನುಷ್ಯತ್ವದ ಲಕ್ಷಣವಲ್ಲ" ಎಂದು ಹೇಳಿ ಒಳಗೆ ಹೋಗಲನುವಾದಳು. ಆಗ ಸೈಂಧವನು ಅಡ್ಡಲಾಗಿ ನಿಂತುಕೊಂಡು, ಆಕೆಯನ್ನು ತನ್ನ ದೇಶಕ್ಕೆ ಹೊತ್ತುಕೊಂಡು ಹೋಗಬೇಕೆಂಬ ದುರಾಶೆಯಿಂದ "ಎಲೌ ಸುಂದರಿಯೇ, ನಿನ್ನನ್ನು ನೋಡಿ ನಾನು ಮೋಹಿತನಾಗಿರುವೆನು. ನನ್ನ ಇಂದ್ರಿಯಗಳೂ, ನನ್ನ ಮನಸ್ಸೂ, ನನ್ನ ಬುದ್ಧಿಯೂ, ನನ್ನ ಕೈ ಬಿಟ್ಟುಹೋಗಿವೆ. ನಿನ್ನನ್ನು ಹೊಂದಬೇಕೆಂಬ ಆಸೆಯು ಎಲ್ಲೆ ಮೀರಿಹೋಗಿದೆ. ಐಶ್ವರ್ಯಹೀನರಾಗಿ ರಾಜ್ಯವನ್ನು ಕಳೆದುಕೊಂಡು ದೀನರಾಗಿ ಬುದ್ಧಿಯಿಲ್ಲದೆ ವನವಾಸ ಮಾಡತಕ್ಕ ಪಾಂಡವರನ್ನು ನಂಬಿಕೊಂಡಿರಬೇಡ. ಐಶ್ವರ್ಯವು ನಷ್ಟವಾದ ಮೇಲೆ ಪುರುಷನಿಗೆ ಪ್ರಜ್ಞೆಯು ನಷ್ಟವಾಗಿ ಹೋಗುವುದು.

ಐಶ್ವರ್ಯವಿಲ್ಲದವರಲ್ಲಿರಬಾರದು. ತಾನಾಗಿ ಅಪೇಕ್ಷಿಸುವವರನ್ನು ಸೇರ ಬೇಕು. ಪಾಂಡವರನ್ನು ಬಿಟ್ಟು ನನಗೆ ಹೆಂಡತಿಯಾಗಿ, ಸಿಂಧುಸೌವೀರ ರಾಜ್ಯಸುಖವನ್ನು ನನ್ನೊಡನೆ ಅನುಭವಿಸು" ಎಂದು ಹೇಳಿ ದ್ರೌಪದಿಯ ಸಮೀಪವನ್ನೈದಿದನು. "ಎಲೈ ಜಯದ್ರಥನೇ, ದೂರ ಸರಿ. ಇಂತಹ ತುಚ್ಛವಾದ ಬಾಯಲ್ಲಿ ಹೊರಡಲನುಚಿತವಾದ ಮಾತುಗಳನ್ನಾಡಲು ನಿನಗೆ ನಾಚಿಕೆಯಾಗುವುದಿಲ್ಲವೇ ? ನನ್ನ ಪತಿಗಳ ಕಿವಿಗೆ ಈ ಮಾತುಗಳು ಬಿದ್ದರೆ ನಿನ್ನ ಪರಿಣಾಮವೇನಾಗುವುದೆಂಬುದನ್ನು ನೀನು ತಿಳಿದಿರುವೆಯಾ ? ಸಹಜಾತಬುದ್ಧಿಗೆ ಸೋತು ಹುಚ್ಚನಂತೆ, ಕುಡುಕನಂತೆ ಹೀಗೆ ಪ್ರಲಾಪ ಮಾಡುತ್ತಿರುವೆಯಾದುದರಿಂದ ನಿನ್ನನ್ನು ಕ್ಷಮಿಸಿರುವೆನು. ನನ್ನ ಪತಿಗಳು ಬಂದಮೇಲೆ ಆತಿಥ್ಯವನ್ನು ಸ್ವೀಕಾರ ಮಾಡಿಕೊಂಡು ನಿನ್ನದಾರಿ ಹಿಡಿದು ಸಾಗು" ಎಂದು ಕಠಿನವಾಗಿಯೂ, ಮೃದುವಾಗಿಯೂ ಮಾತನಾಡುತ್ತ ಕಾಲಯಾಪನೆ ಮಾಡುತ್ತಿದ್ದಳು. ಆ ವೇಳೆಗೆ ಸರಿಯಾಗಿ ಸ್ನಾನಕ್ಕಾಗಿ ಹೋಗಿದ್ದ ಧೌಮ್ಯರು ಹಿಂದಿರುಗಿ ಬರುತ್ತಿದ್ದುದನ್ನು ಜಯದ್ರಥನು ಕಂಡು ಇದೇಕೋ ಸರಿಯಾಗಲಿಲ್ಲವೆಂದು ತಿಳಿದು ದ್ರೌಪದಿಯನ್ನು ಬಲಾತ್ಕಾರದಿಂದ ಎತ್ತಿಕೊಂಡು, ಅತಿ ವೇಗವಾಗಿ ನಡೆಯುವ ಕುದುರೆಗಳನ್ನು ಕಟ್ಟಿರುವ ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು ಹೊರಟು ಹೋದನು.

ಇದನ್ನು ನೋಡುತ್ತಿದ್ದ ಧೌಮ್ಯರು ಜಯದ್ರಥನ ನೀಚಕೃತ್ಯವನ್ನು ನಿಂದಿಸುತ್ತ 'ಪಾಂಡವರಿಂದ ಅವನತಿ ನಿನಗೆ ತಪ್ಪದು' ಎಂದು ನುಡಿಯುತ್ತ ಆ ಜಯದ್ರಥನ ಸೈನ್ಯದೊಡನೆ ತಾವೂ ಅವನನ್ನು ಹಿಂಬಾಲಿಸಿದರು. ಅಷ್ಟುಹೊತ್ತಿಗೆ ಸರಿಯಾಗಿ ಪಾಂಡವರು ಬೇಟೆಯಿಂದ ಹಿಂದಿರುಗಿದರು. ಧರ್ಮರಾಯನಿಗೆ ದಾರಿಯಲ್ಲಿ ದುರ್ನಿಮಿತ್ತಗಳು ಕಾಣಿಸಿಕೊಂಡವು. ಬೇಗ ಬೇಗನೆ ನಡೆಯುತ್ತ ಗಾಬರಿಯಿಂದ ಪರ್ಣಶಾಲೆಯನ್ನು ಪ್ರವೇಶಿಸಿ, ಪಾಂಚಾಲಿಯನ್ನು ಕಾಣದೆ, ಪರಿಚಾರಿಣಿಯರಿಂದ

ನಡೆದ ವಿದ್ಯಮಾನಗಳನ್ನು ತಿಳಿದು ಮೂರ್ಛಾಕ್ರಾಂತನಾಗಿ ಅಲ್ಲೇ ಕುಳಿತುಬಿಟ್ಟನು. ಭೀಮಾರ್ಜುನರು ತಡ ಮಾಡದೆ ಜಯದ್ರಥನನ್ನು ಬೆನ್ನಟ್ಟಿದರು. ಜಯದ್ರಥನ ಪದಾತಿಗಳ ಮಧ್ಯದಲ್ಲಿ 'ಭೀಮಾ' 'ಭೀಮಾ' ಎಂದು ಕೂಗುತ್ತಿದ್ದ ಧೌಮ್ಯರನ್ನು ಕಂಡು, ಅವರನ್ನು ತನ್ನ ಬಳಿಗೆ ಕರೆದು, "ನೀವು ಭಯಪಡದೆ ಸುಖವಾಗಿ ಇಲ್ಲಿರಿ. ಅತ್ಯಲ್ಪಕಾಲದಲ್ಲಿಯೇ ಪಾಂಚಾಲಿಯನ್ನು ಬಿಡಿಸಿಕೊಂಡು ಬರುವೆನು" ಎಂದು ಹೇಳಿ ಪ್ರಳಯಕಾಲದ ರುದ್ರನಂತೆ ಸೈಂಧವನ ಸೈನ್ಯದ ಮೇಲೆ ಸಿಂಹನಾದ ಮಾಡುತ್ತ ಬಿದ್ದನು. ಅರ್ಜುನನೂ ಭೀಮನನ್ನು ಹಿಂಬಾಲಿಸಿಯೇ ಬಂದನು. ಭೀಮನ ಗದಾಪ್ರಹಾರದಿಂದಲೂ, ಅರ್ಜುನನ ಗಾಂಡೀವದಿಂದ ಹೊರಟ ಕ್ರೂರನಾರಾಚಗಳಿಂದಲೂ, ಅನೇಕರು ಅಂತಕನ ಮನೆಯನ್ನು ಹೊಕ್ಕರು. ಪೆಟ್ಟಿಗೆ ಸಿಕ್ಕದವರು ದಿಕ್ಕಾಪಾಲಾಗಿ ಓಡಿ ಹೋದರು. ಭೀಮನು ತಡ ಮಾಡದೆ ವಾಯುವೇಗದಿಂದ ಜಯದ್ರಥನ ರಥವನ್ನು ಹಿಂಬಾಲಿಸಿ, ರಥದ ಮೇಲೆ ಕುಳಿತಿದ್ದ, ದ್ರೌಪದಿಯನ್ನೂ, ಸೈಂಧವನನ್ನೂ ನೋಡಿ, ದ್ರೌಪದೀಹರಣದಿಂದುಂಟಾದ ಕೋಪದಿಂದ ಜಾಜ್ವಲ್ಯಮಾನನಾಗಿ, ಗಿಡಗವು ಮಾಂಸಕ್ಕೆರಗುವಂತೆ ಸೈಂಧವನ ಮೇಲೆ ಬೀಳಲನುವಾದನು. ಹದ ಗೆಟ್ಟಿತೆಂದು ತಿಳಿದು, ಜಯದ್ರಥನು ದ್ರೌಪದಿಯನ್ನು ಕೆಳಕ್ಕಿಳಿಸಿ ಅಶ್ವಗಳನ್ನು ಚುರುಕುಮಾಡಿದನು; ಆ ವೇಳೆಗೆ ಸರಿಯಾಗಿ ಅರ್ಜುನನು ಅಲ್ಲಿಗೆ ಬರಲು ದ್ರೌಪದಿಯನ್ನವನಿಗೊಪ್ಪಿಸಿ "ಎಲೋ ನೀಚ, ಜಯದ್ರಥ, ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ; ನಿಲ್ಲು! ನಿಲ್ಲು!" ಎಂದು ಕೂಗುತ್ತ ಅವನ ರಥದ ಸಮೀಪವನ್ನೈದಿದನು. ಸಿಂಧುದೇಶಾಧಿಪತಿಯು ರಥವನ್ನು ಬಿಟ್ಟು ಧುಮ್ಮಿಕಿ ಓಡಲಾರಂಭಿಸಿದನು. ಭೀಮನು ನೂರು ಹಜ್ಜೆಗಳಲ್ಲಿ ಅವನನ್ನು ಹಿಡಿದು ಕೆಳಕ್ಕೊಂದಾವರ್ತಿ ಕುಕ್ಕಿ ಕತ್ತನ್ನು ಹಿಸಿಕಿ ಕೊಲ್ಲುವುದರಲ್ಲಿದ್ದನು. ದ್ರೌಪದಿಯನ್ನು ಹಿಂದೆಯೇ ಅನುಸರಿಸಿ ಬರುತ್ತಿದ್ದ ಧೌಮ್ಯರ ವಶಮಾಡಿ

ಅರ್ಜುನನೂ ಅಷ್ಟುಹೊತ್ತಿಗೆ ಅಲ್ಲಿಗೆ ಹೋದನು. "ದುಡುಕಬೇಡ! ದುಡುಕಬೇಡ! ತಾಳು! ತಾಳು!" ಎಂದು ಕೂಗಿಕೊಂಡನು. ಕೊನೆಗೆ ಇಬ್ಬರೂ ಸೇರಿ ಸಿಂಧುದೇಶಾಧಿಪತಿಯನ್ನು ಹೆಡೆಮುರಿ ಕಟ್ಟಿ ಅವನ ರಥದ ಮೇಲೆಯೇ ಹಾಕಿಕೊಂಡು ಸತ್ಯದಿಂದ ಅಸತ್ಯವನ್ನೂ, ಧರ್ಮದಿಂದ ಅಧರ್ಮವನ್ನೂ, ಅಹಿಂಸೆಯಿಂದ ಹಿಂಸೆಯನ್ನೂ, ಸೌಮ್ಯದಿಂದ ದೌಷ್ಟ್ಯವನ್ನೂ, ಆತ್ಮಸಮರ್ಪಣೆಯಿಂದ ಇತರರ ಸಂಕುಚಿತಬುದ್ಧಿಯನ್ನೂ ಗೆಲ್ಲುವ ಅಜಾತಶತ್ರುವಿನ ಮುಂದೆ, ಮೂಟೆಯನ್ನಿಳುಹುವಂತೆ ಸೈಂಧವನನ್ನು ರಥದಿಂದಿಳುಹಿದರು.

ಸೈಂಧವನ ಸ್ಥಿತಿಯನ್ನು ನೋಡಿ, ಎದೆಕರಗಿ, ಪಶ್ಚಾತ್ತಾಪಯುಕ್ತನಾಗಿ, ಕಾಮಾತುರನಾಗಿ ಮಾಡಿದ ಅವನ ನೀಚಕೃತ್ಯವನ್ನು ನಿಂದಿಸಿ, 'ಅವನನ್ನು ಯಥೇಚ್ಛವಾಗಿ ಹೋಗಲು ಬಿಡಿ' ಎಂದು ತನ್ನ ತಮ್ಮಂದಿರಿಗೆ ಆಜ್ಞಾಪಿಸಿದನು. ಬಂಧನ ಮುಕ್ತನಾದ ಸಿಂಧುದೇಶಾಧಿಪತಿಯು, ಲಜ್ಜೆಯಿಂದ ತಲೆಬಾಗಿ ಅಲ್ಲಿ ನಿಲ್ಲಲಾರದೆ, ದುಗುಡದಿಂದ ಹೊರಟು ಹೋದನು. ಹೀಗೆ ದ್ರೌಪದಿಗೆ ಮಾಡಿದ ಅಪರಾಧಕ್ಕಾಗಿ ಅವಮಾನಿತನಾಗಿ ತನ್ನ ದೇಶಕ್ಕೆ ಹಿಂದಿರುಗದೆ ಪಾಂಡವರ ನಾಶವನ್ನೆಳಸಿ ನಟರಾಜನನ್ನು ಕುರಿತು ತಪಸ್ಸು ಮಾಡಲು ವನಪ್ರವೇಶಮಾಡಿದನು.

ಜಯದ್ರಥಾ! ವಿವಾಹಾರ್ಥವಾಗಿ ಎಲ್ಲೋ ಹೋಗುತ್ತಿದ್ದವನು ಕಾಮ್ಯಕವನಕ್ಕೆ ಹೋದೆ ದ್ರೌಪದಿಯನ್ನು ಕಂಡು ಕಾಮುಕನಾದೆ, ದ್ರೌಪದಿಯನ್ನು ಎತ್ತಿಕೊಂಡು ಹೊರಟೆ. ಭೀಮನ ಕೈಗೆ ಸಿಕ್ಕಿ ನರಳಿದೆ. ಧರ್ಮಜನಿಂದ ಪ್ರಾಣವನ್ನುಳಿಸಿಕೊಂಡೆ. ಪಾಂಡವರ ನಾಶವನ್ನೆಳಸಿ ನಟರಾಜನ ಒಲುಮೆಯನ್ನು ಪಡೆಯಲು ಹೊರಟೆ. ಇದೇ ಧರ್ಮಜನ ಕ್ಷಮೆಗೆ ನಿನ್ನ ಕಾಣಿಕೆ!

ಆದರೆ ಮಹಾದೇವನು ಮಹಾತ್ಮರ ಕಡೆ ಇರುವನೆಂಬುದನ್ನು ನೀನರಿಯೆ. ಬೆಲ್ಲದ ರುಚಿಯನ್ನು ಸವಿದವನೇ ಬಲ್ಲ. ವೃಥಾಕ್ಲೇಶಪಡುವೆ. ಸಾರಾಸಾರ ತಿಳಿಯದವರ ಪಾಡೆಲ್ಲ ಇಷ್ಟೆ!

|| ಶ್ರೀ ||

## ಐದನೆಯ ಅಧ್ಯಾಯ

# ಸತ್ತ್ವಪರೀಕ್ಷೆ

---

ಮಹಾತ್ಮರಾದ ಪಾಂಡವರು ವಿಚಿತ್ರವಾದ ಕಥೆಗಳನ್ನು ಕೇಳುತ್ತ, ಋಷಿಗಳೊಡನೆ ವಿನೋದವಾಗಿದ್ದುಕೊಂಡು, ಸೂರ್ಯನಿಂದ ಪಡೆದ ಅಕ್ಷಯ ಪಾತ್ರೆಯಲ್ಲಿ ದ್ರೌಪದಿಯು ಭೋಜನಮಾಡುವ ಪರ್ಯಂತ ಅಭಿವೃದ್ಧಿಯಾಗತಕ್ಕ ಷಡ್ರಸೋಪೇತವಾದ ಅನ್ನದಿಂದಲೂ, ಭಕ್ಷ್ಯಭೋಜ್ಯಾದಿಗಳಿಂದಲೂ, ಅನ್ನಾರ್ಥಿಗಳಾಗಿ ಬಂದ ಸಮಸ್ತ ಅತಿಥಿಗಳನ್ನು ತೃಪ್ತಿಪಡಿಸುತ್ತ, ಕಾಮ್ಯಕವನದಲ್ಲಿ ವಾಸಮಾಡುತ್ತಿದ್ದರು. ದುರಾತ್ಮನೂ, ಅಸೂಯಾಪರನೂ, ಆದ ದುರ್ಯೋಧನನು, ನಗರವಾಸಿಗಳಂತೆ ಅರಣ್ಯದಲ್ಲಿ ವಾಸಮಾಡಿಕೊಂಡಿದ್ದ ಪಾಂಡವರ ವಿಷಯದಲ್ಲಿ, ಯಾವಾಗಲೂ, ದುರಾಲೋಚನೆ ಮಾಡತಕ್ಕ ವಂಚಕರಾದ ಕರ್ಣ, ದುಶ್ಶಾಸನ, ಶಕುನಿಗಳೊಡನೆ ಕೂಡಿ, ಅವರ ವಿಷಯದಲ್ಲಿ ಕೇಡನ್ನೇ ಚಿಂತಿಸುತ್ತಿದ್ದನು. ದ್ವೈತವನದಲ್ಲಿ ತನಗಾದ ಶಾಸ್ತಿಯನ್ನು ಮರೆತು, ಪುನಃ ಪಾಂಡವರನ್ನು ಕೆಣಕುವುದಕ್ಕೆ ಸಮಯವನ್ನೇ ಕಾಯುತ್ತಿದ್ದನು. ಒಂದು ಸರಿಯಾದ ಸನ್ನಿವೇಶವೂ ಒದಗಿತು. ಒಂದು ದಿನ ದೂರ್ವಾಸ ಮಹರ್ಷಿಗಳು ಅವನ ಅರಮನೆಗೆ ಹೋದರು. ಕೋಪವು ದೂರ್ವಾಸರಲ್ಲಿ ಮೂರ್ತೀಭವಿಸಿತ್ತು. ಅವರನ್ನು ತನ್ನ ಕಡೆಯವರನ್ನಾಗಿ ಮಾಡಿಕೊಂಡು, ಅವರಿಂದ ಪಾಂಡವರಿಗೇನಾದರೂ ಕೇಡಾಗುವಂತೆ ಮಾಡಬೇಕೆಂದಾಲೋಚಿಸಿ, ಅವರನ್ನು ಬಹುವಾಗಿ ಉಪಚರಿಸಿದನು, ಹೀಗಿರಲು ಒಂದು ದಿನ ದೂರ್ವಾಸರು 'ಎಲೈ ಕೌರವನೇ, ನೀನು

ಮಾಡಿದ ಸೇವೆಯಿಂದ ಸಂತುಷ್ಟನಾಗಿರುವೆನು. ನಿನಗೆ ಬೇಕಾದ ವರವನ್ನು ಕೊಡುವೆನು; ಬೇಡಿಕೊ ' ಎಂದನು. ಆಗ ದುರ್ಯೋಧನನಿಗೆ ಹೋದ ಜೀವವು ಬಂದಷ್ಟು ಸಂತೋಷವಾಯಿತು. ' ನನ್ನ ಎರಡು ಕಣ್ಣುಗಳು ಹೋದರೂ ಚಿಂತೆಯಿಲ್ಲ: ನನ್ನ ಶತ್ರುವಿನ ಒಂದು ಕಣ್ಣಾದರೂ ಹೋಗ ಬೇಕು ' ಎಂಬ ಅಲ್ಪಮತಿಯಂತೆ ದುರ್ಯೋಧನನು ದೂರ್ವಾಸರನ್ನು ಕುರಿತು ' ಎಲೈ ಋಷಿಯೆ, ನೀನು ನನ್ನಲ್ಲಿ ಅತಿಥಿಯಾಗಿ ಬಂದಂತೆ, ದ್ರೌಪದಿ ಮೊದಲಾಗಿ ಎಲ್ಲರೂ ಊಟಮಾಡಿ ಕುಳಿತಿರುವಾಗ ನೀನು ಧರ್ಮರಾಯನಲ್ಲಿಗೆ ಅತಿಥಿಯಾಗಿ ಹೋಗಬೇಕು ' ಎಂದು ಬೇಡಿದನು. ದ್ರೌಪದಿಯು ಭೋಜನ ಮಾಡಿದ ಬಳಿಕ ಅತಿಥಿಸತ್ಕಾರ ಮಾಡಲು ಅಶಕ್ತನಾದ ಧರ್ಮಜನ ಮೇಲೆ ಕುಪಿತನಾಗಿ ಏನಾದರೂ ಶಾಪವನ್ನು ಕೊಡುತ್ತಾನೆಂಬ ಕೋರಿಕೆಯಿಂದ ಈ ದೊಡ್ಡ ವರವನ್ನು ಬೇಡಿದನು. ಮಾತಿನಂತೆ ದೂರ್ವಾಸರು ಪಾಂಡವರಿದ್ದಲ್ಲಿಗೆ ಹೊರಟರು. ಒಂದು ದ್ವಾದಶೀದಿನ ಎಲ್ಲರೂ ಊಟಮಾಡಿ ಕಥಾಶ್ರವಣ ಮಾಡುತ್ತಿರುವಾಗ ಧರ್ಮರಾಯನನ್ನು ಕಾಣಿಸಿಕೊಂಡು, "ಹಸಿವಿನಿಂದ ಬಹುವಾಗಿ ಬಳಲಿರುವ ಹತ್ತು ಸಾವಿರ ಶಿಷ್ಯರೊಡನೆ ಇಲ್ಲಿಗೆ ಬಂದಿರುವೆನು. ಸ್ನಾನಮಾಡಿಕೊಂಡು ಬರುವುದರೊಳಗಾಗಿ ಭೋಜನ ಸಾಮಗ್ರಿಗಳನ್ನು ಸಿದ್ಧಪಡಿಸು " ಎಂದು ಹೇಳಿ ನದಿಗೆ ತೆರಳಿದರು. ಇತ್ತ ಧರ್ಮಜನು ಭಯಯುಕ್ತನಾಗಿ ದ್ರೌಪದಿಯನ್ನು ಕುರಿತು " ಶಿಷ್ಯರೊಡನೆ ಬಂದಿರುವ ದೂರ್ವಾಸರನ್ನು ತೃಪ್ತಿಪಡಿಸುವುದೆಂತು ? " ಎಂದು ಕೇಳಿದನು. ದಿಕ್ಕುತೋಚದೆ ಶಾಪ ಕೊಡುವರೆಂಬ ಭಯದಿಂದ ಕಳವಳಪಡುತ್ತ, ಎಲ್ಲರೂ ಮೂರ್ಛಾಕ್ರಾಂತರಾಗಿ ಚಲಿಸದ ಬೊಂಬೆಗಳಂತೆ, ಸುಮ್ಮನೆ ಕುಳಿತು ಬಿಟ್ಟರು. ಸುಮ್ಮನೆ ಕುಳಿತರೆ ಮುಂದಿನ ಪರಿಣಾಮವಾಗುವುದೆಂತು ! ದ್ರೌಪದಿಯು, ಮೌನದಿಂದ, ಮಾತಾಡದೆ ಒಳಗೆ ಹೋಗಿ, ಕಣ್ಣುಗಳನ್ನು ಮುಚ್ಚಿಕೊಂಡು, ತನ್ನ ಹೃದಯಕಮಲದಲ್ಲಿ, ಗೋಪಾಲಕರ ಮನೆಯಲ್ಲಿ ಬೆಣ್ಣೆ

ಕದ್ದು ತಿಂದು ತೇಗುತ್ತಿದ್ದ ಮುದ್ದು ಕೃಷ್ಣನನ್ನು ಸ್ಥಾಪಿಸಿ, ಬಹುವಾಗಿ ಸ್ತುತಿಸಿದಳು. ಪ್ರೇಮವೇ ಪ್ರಾರ್ಥನೆ; ಪ್ರಾರ್ಥನೆಯೇ ಪ್ರೇಮ, ಎಲ್ಲರನ್ನೂ ಪ್ರೀತಿಯಿಂದ ಕಾಣುವ ಪಾಂಚಾಲಿಯು ಅಂದು ಕೃಷ್ಣನನ್ನು ಪ್ರೇಮದಿಂದ ಕರೆದಳು, 'ಹಸಿವಾಗುತ್ತದೆ; ಏನಾದರೂ ಕೊಡು' ಎಂಬ ವಾಣಿಯು ಕೇಳಿಸಿತು. "ಏನೂ ಇಲ್ಲ! ಎಲ್ಲಾ ಬರಿದು!" ಎಂದು ಉತ್ತರವನ್ನಿತ್ತಳು. "ತಡೆಯಲಾರೆ, ತಾಮ್ರದ ಪಾತ್ರೆಯನ್ನು ತೆಗೆದುಕೊಂಡು ಬಾ, ನೋಡುವೆನು" ಎಂದಹಾಗಾಯಿತು. ಕಣ್ದೆರೆದು ಪುನಃ ಕಣ್ಣು ಮುಚ್ಚಿದಳು. ಕೃಷ್ಣನ ಮುದ್ದು ಮುಖವನ್ನು ಕಂಡಳು. ಪಾತ್ರೆಯನ್ನು ಮುಂದೆ ಹಿಡಿದಳು. ಅದರಲ್ಲೊಂದು ಅಗಸೆಸೊಪ್ಪು ಅಂಟಿಕೊಂಡಿತ್ತು. ಅದನ್ನು ತೆಗೆದುಕೊಂಡು ತಿಂದು ತೇಗಿದಹಾಗಾಯಿತು. ಕಣ್ಣು ಬಿಟ್ಟು ನೋಡಿದಳು. ಯಾರನ್ನೂ ಕಾಣಲಿಲ್ಲ. ತಾಮ್ರದ ಪಾತ್ರೆ ಮಾತ್ರ ಸಮೀಪದಲ್ಲಿತ್ತು. ಎದ್ದು ನಗುತ್ತ ಹೊರಗೆ ಬಂದಳು. ಧರ್ಮರಾಯಾದಿಗಳು ತಮಗೇನೋ ಇಂದು ವಿಪತ್ತು ಸಂಭವಿಸುವುದು ದಿಟವೆಂದು ತಿಳಿದು ಸ್ಥೂರ್ಥಾಕ್ರಾಂತರಾಗಿ ಸುಮ್ಮನೆ ಕುಳಿತಿದ್ದರು.

ದ್ರೌಪದಿಯ ಹೃದಯದಿಂದ ಹೊರಟ ಆ ನಿಶ್ಚಲವಾದ, ಆ ನಿರ್ಮಲವಾದ, ಆ ನಿಷ್ಕಳಂಕವಾದ, ಆ ಶಾಂತಿಮಯವಾದ ಪ್ರೇಮಪ್ರವಾಹವು ನದೀತೀರದಲ್ಲಿದ್ದ ದೂರ್ವಾಸರ ಮತ್ತು ಅವರ ಶಿಷ್ಯರ ಮನಸ್ಸನ್ನು ಪ್ರವೇಶಿಸಿತು. ಪ್ರೇಮದಿಂದ ಆನಂದವುಂಟಾಯಿತು; ಹಸಿವು ಮರೆಯಾಯಿತು; ಕುಟಿಲವು ಹಾರಿಹೋಯಿತು; ಕೋಪವು ಕೊನೆಗೊಂಡಿತು. ಶಿಷ್ಯರೊಡಗೂಡಿ ದೂರ್ವಾಸರು ಧರ್ಮರಾಯನಲ್ಲಿಗೆ ಬಂದು ಅವನ ಕ್ಷಮಾಪಣೆಯನ್ನು ಬೇಡಿ ತಮ್ಮ ಆಶ್ರಮಕ್ಕೆ ತೆರಳಿದರು.

ಕೌರವೇಶ್ವರಾ! ಕಾಡಿಗೆ ಕಳುಹಿಸಿದರೂ ಪಾಂಡವರಲ್ಲಿ ನಿನಗೆ ಸಹನೆ ಬರಲಿಲ್ಲ. ಕೈಯಲ್ಲಿ ಹರಿಯದ ಹೇಡಿಯಂತೆ, ಕತ್ತಲೆಯಲ್ಲಿ ಕೃತ್ರಿಮದಿಂದ ಪಾಂಡವರ ನಾಶಕ್ಕೆಳಸಿದೆ. ಕೃಷ್ಣನ ಒಲುಮೆಯು ಅವ

ರಲ್ಲಿ ಚೆನ್ನಾಗುಂಟೆಂಬುದನ್ನು ನೀನರಿಯೆ. ಇದರಿಂದ ದ್ರೌಪದಿಯ ಸತ್ತ್ವಪ್ರಭೆಯು, ಮಹತ್ತ್ವ ಎಲ್ಲೆಲ್ಲೂ ಹರಡಿತು. ಇದೇ ನೀನು ಕತ್ತಲೆಯಲ್ಲಿ ಮಾಡಲೆಳಸಿದ ಕುಟಿಲದ ಮಹಿಮೆ!

ಹೀಗೆ ಕಾಡಿನಲ್ಲಿ ಸಂಚರಿಸುತ್ತ, ಆನಂದದಿಂದ ತಮ್ಮ ಕಾಲವನ್ನು ಕಳೆಯುತ್ತ ಧನುರ್ಧಾರಿಗಳಾದ ಪಾಂಡವರು ರಾಜರ್ಷಿಯಾದ ವೃಷಪರ್ವನ ಆಶ್ರಮಕ್ಕೆ ಬಂದರು. ಅಲ್ಲಿರುವಾಗ ಒಂದು ದಿನ ಭೀಮಸೇನನು ತಾನೊಬ್ಬನೇ ಧನುರ್ಧಾರಿಯಾಗಿ ಖಡ್ಗವನ್ನು ಧರಿಸಿ ಬೇಟೆಗಾಗಿ ಹೋದನು. ತನ್ನ ಸ್ವಭಾವಕ್ಕೂ, ತನ್ನ ಭುಜಬಲಕ್ಕೂ ತಕ್ಕ ಕೆಲಸಗಳನ್ನು ಮಾಡುತ್ತ ಕಾಡಿನಲ್ಲಿ ತಾನೇ ತಾನಾಗಿ ವಿಹರಿಸುತ್ತಿದ್ದನು. ಹಾಗೆಯೇ ಮುಂದೆ ನಡೆಯುತ್ತ ತರಗೆಲೆಗಳಿಂದ ನಿಬಿಡವಾದ ಒಂದು ಮೈದಾನ ಪ್ರದೇಶವನ್ನು ಕಂಡನು. ಅದರ ಆಚೆಯ ಪಾರ್ಶ್ವದಲ್ಲಿ ಒಂದು ದೊಡ್ಡ ಕಮರಿಯಿತ್ತು. ಆ ಕಮರಿಯ ದಂಡೆಯಲ್ಲಿ ಒಂದು ದೊಡ್ಡ ಆಲದ ಮರವು ದೃಷ್ಟಿಗೆ ಗೋಚರವಾಯಿತು. ಅದನ್ನೇರಿ ಕಮರಿಯನ್ನೂ, ಸುತ್ತಮುತ್ತಲಿನ ಪ್ರದೇಶವನ್ನೂ ನೋಡಬೇಕೆಂಬ ಕುತೂಹಲವು ಕೂಡಲೆ ಉತ್ಪನ್ನವಾಯಿತು. ಆನಂದದಿಂದ ಉಬ್ಬಿದವನಾಗಿ ಅಲ್ಲಿದ್ದ ತರಗೆಲೆಗಳ ಮೇಲೆ ನೆಗೆಯುತ್ತ ಕುಣಿಯುತ್ತ, ಸಿಂಹನಾದ ಮಾಡುತ್ತ, ಭುಜವನ್ನಪ್ಪಳಿಸುತ್ತ ಹೋಗುತ್ತಿರುವಾಗ ಆ ದೊಡ್ಡ ವೃಕ್ಷದ ಕೆಳಭಾಗದಲ್ಲಿ ತರಗೆಲೆಗಳ ಮಧ್ಯದಲ್ಲಿದ್ದ ಘಟಸರ್ಪವನ್ನು ಕಾಣದೆ ಅದರ ಮೇಲೆ ಕಾಲಿಟ್ಟನು. ಅದು ಕೂಡಲೆ ಅವನ ಅಂಗಾಂಗಗಳನ್ನೆಲ್ಲ ಸುತ್ತಿಕೊಂಡುಬಿಟ್ಟಿತು. ಭೀಮನು ಅದರ ಹಿಡಿತದಿಂದ ತಪ್ಪಿಸಿಕೊಳ್ಳಲು ಎಷ್ಟೆಷ್ಟೋ ಪ್ರಯತ್ನಪಟ್ಟನು. ಅವನ ಪ್ರಯತ್ನವು ಹೆಚ್ಚಿದಷ್ಟೂ ಹಾವಿನ ಬಿಗಿತವೂ ಬಲವಾಗುತ್ತ ಬಂತು. ಹಾವನ್ನು ನಿಗ್ರಹಿಸುವುದಕ್ಕೂ, ಅದರಿಂದ ಬಿಡಿಸಿಕೊಳ್ಳುವುದಕ್ಕೂ ಆಗದೆ ಅಸಹಾಯನೂ ನಿರಾಶನೂ ಆಗಿ ಸುಮ್ಮನೆ ಚಿಂತಿಸುತ್ತಿದ್ದನು.

ಕೊನೆಗೆ ಭೀಮಸೇನನು ಸರ್ಪವನ್ನು ಕುರಿತು, "ಎಲೈ ಸರ್ಪ ಶ್ರೇಷ್ಠನೆ, ನೀನು ಯಾರು? ನನ್ನನ್ನು ಏನು ಮಾಡಬೇಕೆಂದು ಹಿಡಿದೆ? ನಾನು ಧರ್ಮರಾಯನ ತಮ್ಮನಾದ ಭೀಮಸೇನನು. ಹತ್ತುಸಾವಿರ ಆನೆ ಬಲವುಳ್ಳವನು. ಬೇಟೆಯಲ್ಲಿ ಸಿಂಹವೇ ಮೊದಲಾದ ಘೋರಮೃಗ ಗಳನ್ನು ಸಂಹಾರ ಮಾಡಿರುವೆನು. ಬಲಿಷ್ಠವಾದ ಸರ್ಪಗಳೂ, ಪಿಶಾಚ ಗಳೂ, ರಾಕ್ಷಸರೂ ನನ್ನ ಭುಜಬಲವನ್ನು ಸಹಿಸುವುದಕ್ಕೆ ಸಮರ್ಥ ರಲ್ಲ. ಹೀಗಿರುವಲ್ಲಿ ನಿನ್ನ ಮುಂದೆ ನನ್ನ ಪರಾಕ್ರಮವು ಎಲ್ಲೋ ಮಾಯವಾಗಿ ಹೋಗಿದೆ. ನೀನು ಯಾವುದಾದರೊಂದು ವಿದ್ಯಾಬಲ ದಿಂದ ಹಿಡಿದೆಯೋ, ಅಥವಾ ಯಾವುದಾದರೊಂದು ವರಪ್ರಸಾದದಿಂದ ವಶ ಮಾಡಿಕೊಂಡೆಯೋ ತಿಳಿಯದಿರುವೆನು. ಯಥಾರ್ಥವಾಗಿ ಹೇಳು" ಎಂದು ಬಹುವಾಗಿ ಕೇಳಿಕೊಂಡನು.

ಆಗ ಸರ್ಪನು "ಎಲೈ ಭೀಮಸೇನನೇ, ನಿಮ್ಮ ವಂಶೀಯನಾದ ನಹುಷನೇ ನಾನು. ಪತಿವ್ರತಾಶಿರೋಮಣಿಯಾದ ಶಚೀದೇವಿಯ ಸಿಟ್ಟಿಗೆ ಸಿಕ್ಕಿ, ಅಗಸ್ತ್ಯನಿಂದ ಶಾಪಗ್ರಸ್ತನಾಗಿ, ಈ ದುಷ್ಟಜನ್ಮದಲ್ಲಿ ನರಕ ಯಾತನೆಯನ್ನನುಭವಿಸುತ್ತಿರುವೆನು. ಮಧ್ಯಾಹ್ನಕಾಲಕ್ಕೆ ಸರಿಯಾಗಿ ಸಿಕ್ಕಿದ ಪ್ರಾಣಿಗಳೇ ನನಗೆ ಆಹಾರ. ಇಂದು ನೀನು ನನಗೆ ಪ್ರಿಯನಾ ಗಿದ್ದರೂ, ನಿನ್ನನ್ನು ಆಹಾರವಾಗಿ ತೆಗೆದುಕೊಳ್ಳದೆ ಬಿಡಲಾರೆ. ನನ್ನ ಪ್ರಶ್ನೆಗಳಿಗೆ ಯಾವನು ಸರಿಯಾದ ಉತ್ತರಗಳನ್ನು ಕೊಡುವನೋ, ಆಗ ನನಗೆ ಆ ಮಹಾತ್ಮನ ದರ್ಶನದಿಂದ ಶಾಪವಿಮೋಚನವಾಗುವುದು. ಆ ಕಾಲವನ್ನೇ ಕ್ಷಣೇ ಕ್ಷಣೇ ನಿರೀಕ್ಷಿಸುತ್ತಿರುವೆನು. ಅದುವರೆಗೂ ಹೀಗೆಯೇ ಮಾಡುತ್ತಿರುವೆನು" ಎಂದನು.

ಆಗ ಭೀಮಸೇನನು "ಎಲೈ ನಹುಷನೇ, ನನ್ನನ್ನು ಬಿಟ್ಟುಬಿಡು. ಪೂರ್ವಸ್ಮರಣೆಯುಳ್ಳ ನಿನಗೆ ನರಮಾಂಸಭಕ್ಷಣೆಯು ನಿಂದ್ಯವಾದುದು. ನಿನಗೆ ಯೋಗ್ಯವಾದ ಆಹಾರವನ್ನು ಬೇಕಾದಷ್ಟು ತಂದು ಕೊಡುವೆನು.

ನನಗೇನೂ ಅಷ್ಟಾಗಿ ಜೀವದಾಸೆಯಿಲ್ಲ. ಆದರೆ ದುಷ್ಟರಾದ ದುರ್ಯೋಧನ, ದುಶ್ಶಾಸನರನ್ನು ರಣದಲ್ಲಿ ಕೊಂದು, ದ್ರೌಪದಿಯ ಮನೋರಥವನ್ನು ಪೂರ್ಣಮಾಡಿ, ಧರ್ಮಜನಿಗೆ ಪಟ್ಟಕಟ್ಟಿ ಧನ್ಯನಾಗಬೇಕೆಂಬ ಉದ್ದೇಶದಿಂದ ಈ ದೇಹವನ್ನುಳಿಸಿಕೊಳ್ಳಲು ತವಕಿಸುತ್ತಿರುವೆನು. ನಾನು ನಷ್ಟವಾದ ಬಳಿಕ ನಿರುತ್ಸಾಹರಾಗಿ ರಾಜ್ಯದ ಹಂಬಲನ್ನು ತೊರೆದು, ಧರ್ಮರಾಜಾದಿಗಳು ದೀನದಶೆಯನ್ನೈದುವರೆಂದು ನನ್ನ ಮನಸ್ಸಿಗೆ ತೋರುತ್ತಲಿದೆ. ನಿನ್ನ ಮನಬಂದಂತೆ ಮಾಡು. ನಿನ್ನ ಮುಂದೆ ನಾನೇನೂ ಮಾಡಲಾರದೆ ನಿಸ್ಸಹಾಯನಾಗಿ, ನಿರಾಶನಾಗಿರುವೆನು '' ಎಂದನು.

ಹೀಗೆ ಭೀಮಸೇನನು ಹಾವಿನ ಕೈಗೆ ಸಿಕ್ಕಿ ನರಳುತ್ತಿರುವಾಗ ಅತ್ತ ಆಶ್ರಮದಲ್ಲಿದ್ದ ಧರ್ಮರಾಯನಿಗೆ ಇದ್ದಕ್ಕಿದ್ದ ಹಾಗೆ ಎದೆ ಹೊಡೆದುಕೊಳ್ಳುವುದಕ್ಕೆ ಮೊದಲಾಯಿತು. ಮನಸ್ಸಿನಲ್ಲಿ ಏನೋ ಒಂದು ಬಗೆ ದಿಗಿಲು. ಒಂದರೆಕ್ಷಣ ಒಂದುಕಡೆ ಕುಳಿತಿರಲಾರದೆ ಹೋದನು. ಯಾವ ಕೆಲಸ ಮಾಡುವುದಕ್ಕೂ ಮನ ಒಡಂಬಡದಂತಾಯಿತು. ಅಂದು ಅವನಿಗೇನೂ ಬೇಕಾಗಿರಲಿಲ್ಲ. ಯಾರೊಡನೆಯೂ ಮಾತು ಕಥೆಗಳು ಬೇಕಾಗಿರಲಿಲ್ಲ. ಏನೋ ಒಂದು ಬಗೆ ಮಂಕು ಕವಿದುಕೊಂಡು ಅವನ ಹೃದಯವು ಕೊರೆಯುತ್ತಿತ್ತು. ಈ ಮಧ್ಯೆ ದುರ್ನಿಮಿತ್ತಗಳು ಬೇರೆ ಕಾಣಿಸಿಕೊಳ್ಳಲು ಮೊದಲಾದುವು. ದ್ರೌಪದಿಗೂ ಅಂದು ಹಾಗೆಯೇ ಅನ್ನಿಸಿತು. ಧರ್ಮರಾಜನಲ್ಲಿಗೆ ಬಂದು, " ಅದೇಕೋ ಹೇಳಲಾರದಷ್ಟು ದುಃಖವಾಗುತ್ತಿದೆ. ಬಲಗಣ್ಣು ಅದುರುತ್ತಿದೆ. ಎದೆ ' ಡವ ಡವ ' ಎಂದು ಹೊಡೆದುಕೊಳ್ಳುತ್ತಿದೆ. ಭೀಮಸೇನನು ಬೇಟೆಗೆ ಒಬ್ಬನೇ ಹೋಗಿರುವನು. ಹೋಗಿ ಬಹಳ ಹೊತ್ತಾಯಿತು. ಇಷ್ಟು ಹೊತ್ತಿಗೆ ಎಲ್ಲಿದ್ದರೂ ಬಂದುಬಿಡುತ್ತಿದ್ದ ಭೀಮಸೇನನು ಇಂದು ಏಕೋ ಇನ್ನೂ ಬರಲಿಲ್ಲ. ಏನು ಕಾರಣವೋ ತಿಳಿಯದು. ನನಗೇನೋ ಒಂದು ಬಗೆ ಅನಿಷ್ಟಸೂಚನೆಯು ತೋರುತ್ತಲಿದೆ '' ಎಂದಳು.

ಕೂಡಲೆ ಧರ್ಮರಾಜನು ಎಲ್ಲರನ್ನೂ ಅಲ್ಲೇ ಬಿಟ್ಟು, ಧೌಮ್ಯರನ್ನು ಕರೆದುಕೊಂಡು ಭೀಮಸೇನನು ಹೋದಮಾರ್ಗವನ್ನು ಹಿಡಿದು ಹೊರ ಟನು. ಒಂದೆರಡು ತಾಸುಗಳ ತರುವಾಯ ಆ ಮಹತ್ತಾದ ಕಮರಿಯ ಸಮೀಪದಲ್ಲಿ ತರಗೆಲೆಗಳ ಮಧ್ಯದಲ್ಲಿ ಆ ಆಲದ ಮರದ ಕೆಳಗೆ ಸರ್ಪ ದಿಂದ ಬಂಧಿತನಾದ ಭೀಮಸೇನನನ್ನು ಕಂಡನು. ಕೂಡಲೆ ಭೀಮನನ್ನು ಕುರಿತು "ಇದೇನು ಆಟವೋ! ಅಥವಾ ನಿಜವಾಗಿಯೂ ದುಷ್ಟಜಂತುವಿ ನಿಂದ ನಿಶ್ಚೇತನನಾಗಿರುವೆಯೋ!" ಎಂದನು. ಭೀಮನು ಮಾತನಾಡ ಲಾರದೆ ತನ್ನ ಬೆರಳುಗಳಿಂದ ಸಂಜ್ಞೆಮಾಡಿ ಕಣ್ಣುಗಳಿಂದ ನೀರು ಸುರಿಸಿ ದನು. ಧರ್ಮರಾಯನಿಗೆ ತಡೆಯಲಾರದಷ್ಟು ದುಃಖವಾಯಿತು. ಧೌಮ್ಯ ರು ಮಗುವಿನಂತೆ ಅಳುತ್ತ ಒಂದು ಕಡೆ ಕುಳಿತುಬಿಟ್ಟರು.

ಧರ್ಮರಾಜನು ಧೈರ್ಯವನ್ನು ತಂದುಕೊಂಡು ಸರ್ಪನ ಕಡೆ ತಿರುಗಿ "ನಿನ್ನನ್ನು ನೋಡಿದರೆ ಸಾಮಾನ್ಯ ಸರ್ಪನಂತೆ ಕಾಣುವುದಿಲ್ಲ. ನೀನು ರಾಕ್ಷಸನೋ, ಗಂಧರ್ವನೋ, ಆಗಿರಬೇಕು. ಅನ್ಯಾಯವಾಗಿ ಇತರರಿಗೆ ಹಿಂಸೆಯನ್ನು ಕೊಟ್ಟರೆ ಅದರಿಂದ ಆಗತಕ್ಕ ಅನರ್ಥಗಳು ತಪ್ಪವು. ಅಪ ರಮಿತ ಬಾಹುಪರಾಕ್ರಮವುಳ್ಳ ನನ್ನ ತಮ್ಮನನ್ನು ಯಾವುದಾದರೊಂದು ಉದ್ದೇಶದಿಂದ ಹಿಡಿದಿರುವೆಯೋ, ಅಥವಾ ನಿನ್ನ ದುಷ್ಟಸ್ವಭಾವಕ್ಕನು ಸಾರವಾಗಿ ಈ ಕೆಲಸ ಮಾಡಿರುವೆಯೋ, ನಾನು ಕಾಣೆ ಏನುಮಾಡಿದರೆ ನನ್ನ ಸಹೋದರನನ್ನು ಬಿಟ್ಟುಬಿಡುವೆ? ನಿನಗೆ ಬೇಕಾದ ಆಹಾರ ಕೊಡ ಲು ಸಿದ್ಧನಾಗಿದ್ದೇನೆ" ಎಂದನು.

ಆಗ ಸರ್ಪನು ಭೀಮಸೇನನಿಗೆ ಹೇಳಿದಂತೆಯೇ ತನ್ನ ಪೂರ್ವ ವೃತ್ತಾಂತವನ್ನರುಹಲು ಧರ್ಮರಾಜನು ಸಂತೋಷದಿಂದ, "ಬ್ರಾಹ್ಮಣಶ್ರೇ ಷ್ಠರಾದ ಧೌಮ್ಯರು ಒಪ್ಪುವಂತೆ ಧರ್ಮದ ಮರ್ಮವನ್ನರುಹುವೆನು; ಸಂದೇಹವಿಲ್ಲ" ಎಂದನು. ಆಗ ಆ ಸರ್ಪವು, "ಯಾವನು ಬ್ರಾಹ್ಮಣನೆ ನಿಸಿಕೊಳ್ಳುವನು? ತಿಳಿಯಬೇಕಾದ ಅಂಶವಾವುದು?" ಎಂದು ಪ್ರಶ್ನೆ

ಮಾಡಿತು. ಅದಕ್ಕೆ ಧರ್ಮರಾಜನು, "ಬ್ರಹ್ಮಜ್ಞಾನವನ್ನು ತಿಳಿದವನೇ ಬ್ರಾಹ್ಮಣನು. ಬ್ರಾಹ್ಮಣಕುಲದಲ್ಲಿ ಹುಟ್ಟಿದ ಮಾತ್ರದಿಂದಲೇ ಬ್ರಾಹ್ಮಣನಾಗಲಾರನು. ಮಾಯೆಯನ್ನು ದಾಟಿ ಜೀವಾತ್ಮಪರಮಾತ್ಮಗಳ ಐಕ್ಯವನ್ನು ತಿಳಿದು ಪ್ರಪಂಚವನ್ನೆಲ್ಲ ಆವರಿಸಿರುವ ವಸ್ತುವು ಆ ಪರಬ್ರಹ್ಮ ಒಂದೇ ಎಂಬ ಜ್ಞಾನವನ್ನು ಪಡೆದು ಸಕಲ ಚರಾಚರಗಳನ್ನೂ ಯಾವನು ಪ್ರೀತಿಸುವನೋ ಆ ವಿಶ್ವಪ್ರೇಮಿಯೇ ಬ್ರಾಹ್ಮಣನು. ಜೀವಾತ್ಮನು ಪರಮಾತ್ಮನಿಂದ ಭಿನ್ನನಲ್ಲ, ಎರಡೂ ಒಂದೇ, 'ನೀನೇ ಅದು' ಎಂಬುದೇ ತಿಳಿಯಬೇಕಾದ ಅಂಶ" ಎಂದನು.

ಸರ್ಪವು ಕಣ್ಣಿಗೆ ಕಾಣಿಸದೆ ಹೋಯಿತು. ಭೀಮನಿಗೆ ಬಂಧನವು ತಪ್ಪಿತು. ಶಾಪದಿಂದ ಬಿಡುಗಡೆ ಹೊಂದಿದ ನಹುಷನು ದಿವ್ಯ ಶರೀರವನ್ನು ಹೊಂದಿ, "ಎಲೈ ಕುರುಕುಲ ಶಿಖಾಮಣಿಯೇ, ಇಗೋ ನಿನ್ನ ತಮ್ಮನಾದ ಭೀಮಸೇನನನ್ನು ಒಪ್ಪಿಸಿರುವೆನು" ಎಂದು ಹೇಳಿ ಅವನನ್ನು ಅವನ ಕೈಯಲ್ಲಿ ಕೊಟ್ಟು ತನಗಾಗಿ ಆಗತಾನೆ ದೇವಲೋಕದಿಂದ ಬಂದು ನಿಂತಿದ್ದ ವಿಮಾನದಲ್ಲಿ ಕುಳಿತು ಹೊರಟು ಹೋದನು.

ಇತ್ತ ಧರ್ಮರಾಜನು ಭೀಮನನ್ನು ಅಪ್ಪಿಕೊಳ್ಳಲು ಹೋದನು. ದುಗುಡದಿಂದ ಹಿಂದಕ್ಕೆ ಸರಿದು ಕಣ್ಣುಗಳಲ್ಲಿ ಕಂಬನಿಗಳನ್ನು ತುಂಬುತ್ತ ಏನೋ ತನಗೊಂದು ದೊಡ್ಡ ಅಪಮಾನವಾಯಿತೆಂದು ಭಾವಿಸಿ ಜೀವದಲ್ಲಿ ಜಿಹಾಸೆಯನ್ನು ಹೊಂದಿ ಪ್ರಾಣಬಿಡುವಷ್ಟು ಖಿನ್ನನಾಗಿದ್ದ ಭೀಮಸೇನನನ್ನು ಧರ್ಮರಾಜನು ನೋಡಿ ಬೇಕಾದಷ್ಟು ಮನನೀತಿಗಳನ್ನು ಹೇಳಿ ಪರ್ಣಶಾಲೆಗೆ ಕರೆದುಕೊಂಡು ಬಂದು ದ್ರೌಪದಿಯಿಂದಲೂ ಹೇಳಿಸಿದನು.

ಭೀಮಸೇನಾ! ನಿನ್ನ ಪಿತಾಮಹನಿಗೆ ಪಿತಾಮಹನಾದ ನಹುಷನಿಂದ ಬಂಧಿತನಾದೆ. ನಿನ್ನಗ್ರಜನಾದ ಧರ್ಮರಾಜನಿಂದ ಮುಕ್ತನಾದೆ. ಬಂಧನ ಮುಕ್ತಿಗಳೆರಡೂ ದೊಡ್ಡ ಅಪಮಾನವೆಂದು ಭಾವಿಸಿ ಜೀವ ಕಳೆದುಕೊಳ್ಳುವಷ್ಟು ದುಗುಡದಿಂದಿರುವೆ ತಾನು ತೊಂದರೆಗೀಡಾಗಿ

ಪರರಿಗೆ ಸುಖವನ್ನುಂಟುಮಾಡುವುದು ಸಜ್ಜನರ ಮತವೆಂಬುದನ್ನು ನೀನರಿಯೆ. ನಿನ್ನ ನಿಮಿತ್ತ ; ಧರ್ಮಜನ ದರ್ಶನ; ಸಹುಷನ ವಿಮೋಚನ, ಒಂದೆಡೆ ಸಹುಷನ ಆನಂದ ; ಇನ್ನೊಂದೆಡೆ ನಿನ್ನಗ್ರಜನ ಪ್ರಭಾವ. ಇವೆರಡೂ ನಿನಗೆ ಬೇಕಾದವುಗಳಲ್ಲವೆ !

ಹೀಗೆ ಪಾಂಡವರು ವೃಷಪರ್ವನ ಆಶ್ರಮದಲ್ಲಿ ಕೆಲವು ಕಾಲವಿದ್ದು ಅನಂತರ ದ್ವೈತವನವನ್ನು ಪ್ರವೇಶಿಸಿದರು. ಅಲ್ಲಿರುವಾಗ ಒಂದು ದಿನ ಒಬ್ಬ ಬ್ರಾಹ್ಮಣನು ಧರ್ಮಜನಲ್ಲಿಗೆ ಬಂದು “ಎಲೈ ಕರುಣಾಶಾಲಿಯಾದ ಯುಧಿಷ್ಠಿರನೇ, ನಾನು ವಾಸ ಮಾಡುತ್ತಿರುವ ಪರ್ಣಶಾಲೆಯ ಬಳಿ ಇರುವ ಗಿಡಕ್ಕೆ ಯಜ್ಞಸಾಧನವಾದ ಒಂದು ಅರಣಿಯನ್ನು ತಗುಲುಹಾಕಿದ್ದೆನು. ಒಂದು ಜಿಂಕೆಯು ಆ ಗಿಡಕ್ಕೆ ತನ್ನ ಮೈತಿಕ್ಕುತ್ತಿರುವಾಗ, ಅದರ ಕೋಡಿಗೆ ನನ್ನ ಅರಣಿಯು ಸಿಕ್ಕಿಕೊಂಡಿತು. ಅದರೊಡನೆ ಅದು ಓಡಿ ಹೋಯಿತು. ಅಗ್ನಿಹೋತ್ರ ಮಾಡಲು ಅವಕಾಶವಿಲ್ಲದೆ ಇರುವೆನು. ನನ್ನಲ್ಲಿ ದಯೆಮಾಡಿ ಜಿಂಕೆಯಿಂದಪಹೃತವಾದ ಅರಣಿಯನ್ನು ತಂದುಕೊಟ್ಟು ನನ್ನ ಕರ್ಮವು ಸರಾಗವಾಗಿ ನೆರವೇರುವಂತೆ ಮಾಡು” ಎಂದನು. ಆಗ ಧರ್ಮಜನು ತಮ್ಮಂದಿರೊಡನೆ ಧನುರ್ಧಾರಿಯಾಗಿ ಜಿಂಕೆಯನ್ನು ಬೆನ್ನಟ್ಟಿ ಹೋದನು. ಜಿಂಕೆಯು ಕಣ್ಣಿಗೆ ಕಾಣಿಸಿತು. ಕೊಲ್ಲದೆ ಹಿಡಿದು ಅರಣಿಯನ್ನು ತೆಗೆದುಕೊಳ್ಳಬೇಕೆಂದು ಯತ್ನಿಸುತ್ತಿರುವಾಗ ಅದು ಬಹು ವೇಗವಾಗಿ ಮುಂದೆ ಓಡಿಹೋಯಿತು. ಬಹುದೂರ ಹಿಂಬಾಲಿಸಿ ಹೋದರು ; ಕೊನೆಗೆ ಜಿಂಕೆಯು ಕಣ್ಣಿಗೆ ಕಾಣಿಸದೆ ಹೋಯಿತು. ಮಾರ್ಗಾಯಾಸದಿಂದ ಬಹುವಾಗಿ ಬಳಲಿ ಆ ಅರಣ್ಯದಲ್ಲಿ ತಂಪಾದ ನೆರಳುಳ್ಳ ಒಂದು ಆಲದ ಮರದ ಕೆಳಗೆ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಚಿಂತಿಸುತ್ತ ಕುಳಿತುಕೊಂಡರು.

ಆಗ ಧರ್ಮರಾಯನು ನಕುಲನನ್ನು ನೋಡಿ “ಎಲೈ ವತ್ಸನೆ, ನಾವೆಲ್ಲರೂ ಬಾಯಾರಿಕೆಯಿಂದ ಬಹುವಾಗಿ ಬಳಲಿರುವೆವು. ಎಲ್ಲಿಯಾ

ದರೂ ಸಮೀಪದಲ್ಲಿ ಉದಕಾಶ್ರಿತ ವೃಕ್ಷಗಳು ಕಾಣುವುವೇ ? ಈ ಮರ ಹತ್ತಿ ನೋಡು '' ಎಂದನು. ಆಗ ನಕುಲನು ಆ ಮರವನ್ನು ಹತ್ತಿ ಅಲ್ಲಿಗೆ ಸಮೀಪದಲ್ಲಿದ್ದ ಉದಕಾಶ್ರಿತ ವೃಕ್ಷಗಳನ್ನು ಕಂಡು, ಹಾಗೆಯೇ ಇನ್ನೂ ಸ್ವಲ್ಪ ಮೇಲಕ್ಕೆ ಹೋಗಿ ಆ ವೃಕ್ಷಗಳ ಆಚೆಯ ಭಾಗದಲ್ಲಿ ಒಂದು ಜಲಾಶಯವನ್ನು ಕಂಡನು. ಬಹಳ ಆನಂದದಿಂದ ಧರ್ಮರಾಯಾದಿಗಳನ್ನು ಕುರಿತು '' ವೃಕ್ಷಗಳೂ, ಜಲಾಶಯವೂ, ಇಗೊ, ಇಲ್ಲಿ ಕಾಣುತ್ತಿವೆ '' ಎಂದು ಹೇಳಿ ಸ್ಥಳವನ್ನು ಚೆನ್ನಾಗಿ ಗುರುತುಮಾಡಿಕೊಂಡು ಕೆಳಕ್ಕಿಳಿದನು. ಆಗ ಧರ್ಮರಾಯನು ಅವನನ್ನು ಕುರಿತು '' ಬತ್ತಳಿಕೆಗಳನ್ನು ತೆಗೆದುಕೊಂಡುಹೋಗಿ, ನಿನ್ನ ದಾಹವನ್ನು ತೀರಿಸಿಕೊಂಡು, ನೀರು ತುಂಬಿಕೊಂಡು, ಬೇಗ ಬಾ'' ಎಂದು ಹೇಳಿ ಕಳುಹಿಸಿದನು. ನಕುಲನು ಅತಿ ತ್ವರೆಯಿಂದ ನಡೆಯುತ್ತ ಜಲಾಶಯದ ಸಮೀಪವನ್ನು ಸೇರಿ, ಬತ್ತಳಿಕೆಯನ್ನು ಮೇಲುಗಡೆ ಇಟ್ಟು ನೀರು ಕುಡಿಯಲು ಸರೋವರಕ್ಕಿಳಿದನು. ಆಗ '' ಎಲೈ ನಕುಲನೆ, ಇಲ್ಲಿ ನೀರು ಕುಡಿಯುವ ಸಾಹಸ ಮಾಡಬೇಡ. ನಾನು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಟ್ಟು, ನಿನ್ನ ದಾಹವಿಂಗುವಷ್ಟು ನೀರುಕುಡಿದು, ಬೇಕಾದಷ್ಟು ತೆಗೆದುಕೊಂಡು ಹೋಗು. ಹಾಗಲ್ಲದೆ ನೀರು ಕುಡಿದೆಯಾದರೆ ಕೇಡು ತಪ್ಪದು '' ಎಂಬ ವಾಣಿಯು ಕೇಳಿಸಿತು. ನೀರಡಿಕೆಯಿಂದ ತಪಿಸುತ್ತಿದ್ದ ನಕುಲನ ಮನಕ್ಕೆ ವಾಣಿಯು ಬರಲೇ ಇಲ್ಲ. ವಾಯು ದೇವನು ಶಬ್ದಗಳನ್ನೊಯ್ಯುವ ತನ್ನ ಕೆಲಸವನ್ನು ಮಾಡಿಬಿಟ್ಟನು. ದೈವದತ್ತವಾದ ನಾಡಿಪುಂಜಗಳು ಮತ್ತು ನಾಡಿಗಳು ತಂತಮ್ಮ ಕೆಲಸಗಳನ್ನು ಮಾಡಿದುವು. ಆದರೆ ಅವನ ಮನಸ್ಸೆಲ್ಲವೂ ದಾಹವನ್ನಡಗಿಸುವ ಶೀತಳೋದಕವನ್ನು ಪಾನ ಮಾಡುವುದರಲ್ಲಿ ಲೀನವಾಗಿತ್ತು. ವ್ಯಕ್ತಿ ದರ್ಶನವಿಲ್ಲದೆ ವಾಣಿ ಮಾತ್ರ ಕಿವಿಗೆ ಬೀಳುತ್ತಿರುವುದು ಅಮಾನುಷವಾದುದೆಂದು ಅಂದು ಅವನಿಗೆ ತಿಳಿಯದೆ ಹೋಯಿತು. ಭಯವು ಸ್ವಲ್ಪವೂ ಉಂಟಾಗ

ಲಿಲ್ಲ. ದಾಹದ ವೇಗವು ಎಲ್ಲವನ್ನೂ ಮರೆಮಾಡಿಬಿಟ್ಟಿತು. ಬಾಲಸ್ವಭಾವವನ್ನನುಸರಿಸಿ ನಕುಲನು ಬಾಯನ್ನು ನೀರಿನಲ್ಲಿಟ್ಟು ತನಗೆ ತೃಪ್ತಿಯಾಗುವಷ್ಟು ಕುಡಿದು, ನೀರು ತುಂಬಿಕೊಳ್ಳಲು ಬತ್ತಳಿಕೆಗಳನ್ನು ತೆಗೆದುಕೊಳ್ಳುವುದಕ್ಕೆ ಮೇಲಕ್ಕೆ ಹೋದನು. ತಲೆ ತಿರುಗಿತು. ಹಾಗೆಯೇ ನೆಲದ ಮೇಲೆ ಒರಗಿದನು.

ಬಹಳ ಹೊತ್ತಾಯಿತು. ನಕುಲನು ಬರಲೇ ಇಲ್ಲ. ಆ ಮೇಲೆ ಸಹದೇವನು ಹೊರಟನು. ನೀರು ಕುಡಿದು ನಕುಲನ ಬಳಿ ಸದ್ದಿಲ್ಲದೆ ಮಲಗಿದನು. ಅರ್ಜುನನು ಜಲಾಶಯದ ಸಮೀಪವನ್ನು ಸೇರಿ ನಕುಲ ಸಹದೇವರನ್ನು ನೋಡಿ ತುಂಬ ವ್ಯಥೆಪಟ್ಟು ದಾಹಶಾಂತಿಗಾಗಿ ಸರೋವರವನ್ನಿಳಿಯಲು ಮೊದಲಿಸಂತೆ ವಾಣಿಯಾಯಿತು. ಅರ್ಜುನನು ವಾಣಿಯನ್ನು ತಿಳಿದನು. "ಸನ್ನಿದಿರಿಗೆ ನೀನು ಪ್ರತ್ಯಕ್ಷವಾಗಿ ಬಂದು, ಈ ಮಾತುಗಳನ್ನಾಡಿದ್ದರೆ ನಿನ್ನನ್ನು ತುಂಡು ತುಂಡಾಗಿ ಕತ್ತರಿಸಿಬಿಡುತ್ತಿದ್ದೆನು" ಎಂದು ವೀರಾಲಾಪಗಳನ್ನು ಮಾಡಿ ಧ್ವನಿ ಬಂದ ಕಡೆಗೆ ಬಾಣಗಳನ್ನೆಸೆದು ನೀರಿಗಿಳಿದನು. "ಪ್ರಶ್ನೆಗಳಿಗೆ ಉತ್ತರ ಕೊಡದೆ ಬರೀ ಸಾಹಸದಿಂದೇನು ಪ್ರಯೋಜನ? ನೀರು ಕುಡಿದರೆ ಕೇಡು ತಪ್ಪದು" ಎಂದು ಪುನಃ ವಾಣಿಯಾಯಿತು. ಇದು ಅರ್ಜುನನ ಮನಸ್ಸಿಗೆ ಹತ್ತಿದಂತೆ ಕಾಣಲಿಲ್ಲ. ನೀರಡಿಕೆಯ ವೇಗವನ್ನು ತಾಳಲಾರದೆ ಹೋದನು. ಚೆನ್ನಾಗಿ ನೀರು ಕುಡಿದು ತಮ್ಮಂದಿರ ಯೋಗಕ್ಷೇಮ ನೋಡಿಕೊಳ್ಳಲು ಮೇಲೆ ಬಂದನು. ಕಣ್ಣು ಕಾಣದೆ ಸಹದೇವನ ಬಳಿ ತಾನೂ ವಿಶ್ರಾಂತನಾದನು.

ಸ್ವಲ್ಪ ಹೊತ್ತಾದ ಮೇಲೆ ಭೀಮನು ಹೊರಟು, ಜಲಾಶಯದ ಬಳಿ ಶವದಂತೆ ಬಿದ್ದಿದ್ದ ತಮ್ಮಂದಿರನ್ನು ನೋಡಿ ದುಃಖಿತನಾಗಿ 'ಯಕ್ಷರೋ ರಾಕ್ಷಸರೋ ಈ ಕಾರ್ಯಮಾಡಿರಬೇಕು. ಅವರೊಡನೆ ನಾನು ಯುದ್ಧಮಾಡಬೇಕಾದೀತು. ಇರಲಿ ಮೊದಲು ದಾಹವನ್ನಿಂಗಿಸಿಕೊಂಡು

ಆಮೇಲೆ ಇದರ ವಿಚಾರಮಾಡುವೆನು' ಎಂದಂದುಕೊಂಡು ನೀರಿಗಿಳಿಯಲು ವಾಣಿಯು ನುಡಿಯಿತು. ಭೀಮನು ನೀರನ್ನು ಕುಡಿದೇ ಬಿಟ್ಟನು. ತಮ್ಮಂದಿರ ಯೋಗಕ್ಷೇಮ ನೋಡಿಕೊಳ್ಳಲು ಮೇಲೆ ಬಂದನು. ಏನೋ ಒಂದು ಬಗೆ ಆಯಾಸವುಂಟಾಯಿತು. ತಲೆತಿರುಗಿತು. ಕಣ್ಣು ಕಾಣದೆ ಹೋಯಿತು. ದೊಪ್ಪನೆ ನೆಲದ ಮೇಲೆ ಅರ್ಜುನನ ಬಳಿ ಬಿದ್ದನು.

ಭೀಮಾರ್ಜುನ ನಕುಲ ಸಹದೇವರ ಬರುವಿಕೆಯನ್ನೇ ಇದಿರು ನೋಡುತ್ತಿದ್ದ ಧರ್ಮರಾಜನು, ಬಹಳ ಹೊತ್ತಾದರೂ ಯಾರೂ ಬಾರದಿರುವುದನ್ನು ಕಂಡು, ತಾನೇ ಹೊರಟನು. ಸರೋವರವನ್ನು ಸೇರಿ ಅದರ ಸೊಬಗನ್ನು ನೋಡಿ ಇದು ವಿಶ್ವಕರ್ಮ ನಿರ್ಮಿತವಿರಬಹುದೆಂದಂದುಕೊಂಡು, ಸರೋವರದ ದಂಡೆಯಲ್ಲಿ ಮೃತಪ್ರಾಯರಾಗಿ ಬಿದ್ದಿದ್ದ ಸಹೋದರರನ್ನು ನೋಡಿ ಅನಾಥನಂತೆ ಅವರ ಗುಣಗಳನ್ನು ವರ್ಣನೆ ಮಾಡುತ್ತ, ಕೆಲವು ಕಾಲ ಪ್ರಲಾಪಿಸಿದನು. ದುಃಖದಿಂದ ದಾಹವು ಸ್ವಲ್ಪ ಮರೆಯಾಯಿತು. ಹಾಗೆಯೇ ಸ್ಥೈರ್ಯವನ್ನು ತಾಳಿಕೊಂಡು, "ಲೋಕೈಕವೀರರಾದ ಇವರನ್ನು ವಂಚಿಸಿ ಕೊಲ್ಲುವವರಾರು? ಮೃತರಾಗಿದ್ದರೆ ಮುಖದಲ್ಲಿ ವಿಕಾರವು ತೋರಬೇಕು. ಏನೂ ವಿಕಾರ ಕಾಣುವುದಿಲ್ಲ. ಇರಲಿ: ದಾಹವನ್ನು ತೀರಿಸಿಕೊಂಡು ಮುಂದೆ ವಿಚಾರಿಸುವೆನು. ಎಂದಂದುಕೊಂಡು, ಕೈಕಾಲುಗಳನ್ನು ತೊಳೆದುಕೊಂಡು ನೀರಿಗಿಳಿದನು. ಬೊಗಸೆಯಲ್ಲಿ ನೀರು ತುಂಬಿಕೊಂಡು ಬಾಯಿಯವರೆಗೂ ತೆಗೆದುಕೊಂಡುಹೋದನು. ವಾಣಿಯು ಕೇಳಿಸಿತು ನೀರನ್ನು ಹಾಗೆಯೇ ಬಿಸಾಟು ಅಲ್ಲಿದ್ದ ಪಕ್ಷಿಯ ಕಡೆಗೆ ತಿರುಗಿ "ಎಲೈ ಪಕ್ಷಿಯೇ, ನೀನು ಪಕ್ಷಿಮಾತ್ರನಾಗಿ ಕಾಣುವುದಿಲ್ಲ. ದೇವತೆಯಂತೆ ಕಾಣುವಿ. ಅಸಹಾಯಶೂರರಾದ ನನ್ನ ತಮ್ಮಂದಿರನ್ನು ಹೀಗೆ ಕೆಡಹಿದವರಾರು? ಇದನ್ನು ತಿಳಿಯಬೇಕೆಂಬ ಕುತೂಹಲವು ನನ್ನನ್ನು ಬಹುವಾಗಿ ಬಾಧಿಸುತ್ತಿದೆ. ಇದನ್ನೆಲ್ಲ ನೋಡಿ ನನಗೇನೋ ಬಹಳ ಭಯವಾಗಿದೆ. ನೀನು ಯಾರು? ಏತಕ್ಕೋ

ಸ್ಕರ ಇಲ್ಲಿ ಇರುವೆ '' ಎಂದು ಕೇಳಿದನು. ಆಗ ಆ ಪಕ್ಷಿವೇಷದಲ್ಲಿದ್ದ ಯಕ್ಷನು, "ರಾಯನೇ ನಾನು ಪಕ್ಷಿಯಲ್ಲ ; ನಾನೊಬ್ಬ ಯಕ್ಷನು. ಮಹಾಪರಾಕ್ರಮಶಾಲಿಗಳಾದ ನಿನ್ನ ತಮ್ಮಂದಿರು ನನ್ನಿಂದಲೇ ಹತರಾದರು '' ಎಂದು ನುಡಿದು ಉತ್ತರಕ್ಷಣದಲ್ಲಿಯೇ ವಿಕಾರವಾದ ಕಣ್ಣುಗಳುಳ್ಳವನಾಗಿಯೂ, ತಾಳೆಮರದಂತೆ ಉದ್ದವಾದ ಶರೀರವುಳ್ಳವನಾಗಿಯೂ, ಸೂರ್ಯಾಗ್ನಿಗಳಂತೆ ಜಾಜ್ವಲ್ಯಮಾನವಾದ ತೇಜಸ್ಸುಳ್ಳವನಾಗಿಯೂ, ಪರ್ವತಾಕಾರನಾಗಿ ಮತ್ತೊಬ್ಬರಿಂದ ತಿರಸ್ಕರಿಸಲಶಕ್ಯನಾಗಿಯೂ, ಮೇಘಧ್ವನಿಯಂತೆ ಗಭೀರವಾದ ಗರ್ಜನೆಯಿಂದ ಭಯಪಡಿಸುವವನಾಗಿಯೂ ತೋರುತ್ತ, ಒಂದು ದೊಡ್ಡಮರವನ್ನೊರಗಿಕೊಂಡು ನಿಂತು ಪ್ರತ್ಯಕ್ಷನಾದ ಯಕ್ಷನನ್ನು ಕಂಡನು.

ಬಳಿಕ ಯಕ್ಷನು ಧರ್ಮರಾಯನನ್ನು ಕುರಿತು "ಎಲೈ ರಾಯನೆ, ನಿನ್ನ ತಮ್ಮಂದಿರು ನಾನೆಷ್ಟು ಅಡ್ಡಿ ಮಾಡಿದರೂ ಲೆಕ್ಕಿಸದೆ ನೀರನ್ನು ಕುಡಿದು ನನ್ನಿಂದ ಕೆಡುಹಲ್ಪಟ್ಟರು. ಅವರಂತೆ ನೀನೂ ಸಾಹಸ ಮಾಡಬೇಡ. ನನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಟ್ಟು ಬಳಿಕ ಈ ಕಾಸಾರದ ನೀರನ್ನು ಪರಿಗ್ರಹಿಸು '' ಎಂದನು. "ನಿನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟಹೊರತು ಈ ಸರೋವರದ ನೀರನ್ನು ಬಯಸುವುದಿಲ್ಲ '' ಎಂದು ಧರ್ಮರಾಯನು ಹೇಳಿದನು.

## ಯಕ್ಷಪ್ರಶ್ನೆಗಳು

ಬಳಿಕ ಯಕ್ಷನು "ಎಲೈ ಧರ್ಮಜನೇ, ಲೋಕದಲ್ಲಿ ಸೂರ್ಯಪ್ರಭೆಗೆ ಸರಿಯಾದುದು ಯಾವುದು ? ಮಹಾತ್ಮನಾರು ? ವಂದ್ಯನಾರು ? ದೇವಪ್ರಿಯನಾರು ? ಬುದ್ಧಿಶಾಲಿ ಯಾರು ? ''

**ಧರ್ಮರಾಜ**—" ಎಲೈ ಯಕ್ಷನೇ, ಕೇಳು. ಲೋಕದಲ್ಲಿ ಸತ್ಯವೇ ಸೂರ್ಯನ ಪ್ರಭೆಗೆ ಸಮಾನವಾದುದು. ಅಹಿಂಸಾರತನೇ ಮಹಾಪುರುಷ

ಷನು ; ಪರಹಿತನೇ ವಂದ್ಯನು ; ಪರೋಪಕಾರಿಯೇ ದೇವಪ್ರಿಯನು ; ಸಾಧು ಸೇವಕನೇ ಬುದ್ಧಿಶಾಲಿಯು "

**ಯಕ್ಷ**—" ಸಮುದ್ರಕ್ಕೆ ಸಮಾನವಾದ ಸರೋವರ ಯಾವುದು ? ನೆಲಕ್ಕೆ ಹಿತವನ್ನು ಮಾಡುವವನಾರು ? ಲೋಕದ ಜನಗಳಿಗೆ ತಾಯಿ ಯಾರು ? ಕ್ಷತ್ರಿಯನಾರು ? ಬ್ರಾಹ್ಮಣರಲ್ಲಿ ಶ್ರೋತ್ರಿಯನಾರು ? '

**ಧರ್ಮರಾಜ**—' ಗಗನವೇ ಸಮುದ್ರಕ್ಕೆ ಸಮಾನವಾದ ಸರೋವರ ; ಮಳೆಯನ್ನು ಕೊಡುವ ದೇವೇಂದ್ರನೇ ಭೂಮಿಗೆ ಹಿತವನ್ನು ಮಾಡುವವನು; ಗೋವೇ ಮರ್ತ್ಯರಿಗೆ ಮಾತೆ; ಧೈರ್ಯಶಾಲಿಯೇ ಕ್ಷತ್ರಿಯನು ; ವೇದಜ್ಞನೇ ಶ್ರೋತ್ರಿಯನು. "

**ಯಕ್ಷ**—" ಕಷ್ಟನಾರು ? ನಿಂದ್ಯನಾರು ? ದೇಶನಾಶಕನಾರು ? ನರಕಿಯಾರು ? ಸ್ವಜನ ಬಾಹಿರನಾರು ? ಹುಚ್ಚನಾರು ? ಮಾನಗೇಡಿ ಯಾರು ? ಜೀವನ್ಮೃತನಾರು ? ಮೃತಪ್ರಾಯನಾರು ? "

**ಧರ್ಮರಾಜ**—ಪರರುನ್ನತಿಯನ್ನು ಸೈರಿಸದವನೇ ಕಷ್ಟನು ; ಪರ ನಿಂದಕನೇ ನಿಂದ್ಯನು ; ಚಾಡಿ ಮಾತು ಕೇಳಿ ಕುಣಿಯುವವನೇ ದೇಶನಾ ಶಕನು ; ಕೃತಘ್ನನೇ ನರಕಿಯು ; ಮದಾಂಧನೇ ಸ್ವಜನಬಾಹಿರನು ; ಗುರುಹಿರಿಯರ ನರಿಯದವನೇ ಮರುಳ. ಅಂಗನೆಯರಲ್ಲಿ ಆಸಕ್ತನಾಗಿರು ವವನೇ ಮಾನಗೇಡಿ : ದರಿದ್ರನೇ ಜೀವನ್ಮೃತನು ; ಶತ್ರುಗಳನ್ನು ನೋಡಿ ಹೆದರಿ ಹಿಂದಿರುಗುವವನೇ ಮೃತಪ್ರಾಯನು.

**ಯಕ್ಷ**—"ಲೋಕದಲ್ಲಿ ಅತ್ಯಾಶ್ಚರ್ಯಕರವಾದ ಸಂಗತಿ ಯಾವುದು?"

**ಧರ್ಮರಾಜ**—ಆಗಾಗ್ಗೆ ಲೋಕದ ಭೂತಗಳು ಯಮನಿಲಯವನ್ನು ಪ್ರವೇಶ ಮಾಡುತ್ತಿರುತ್ತವೆ. ಉಳಿದವರು ತಾವು ಸ್ಥಿರರೆಂದು ತಿಳಿಯು ತ್ತಾರೆ. ಇದಕ್ಕಿಂತಲೂ ಆಶ್ಚರ್ಯಕರವಾದ ಸಂಗತಿ ಮತ್ತೊಂದೇ ನಿದೆ ? " ಎಂದನು.

ಧರ್ಮರಾಯನ ಉತ್ತರಗಳನ್ನು ಕೇಳಿ ಯಕ್ಷನಿಗೆ ರೋಮಾಂಚವಾಯಿತು. ತಲೆದೂಗಿದನು. ಆನಂದವಾಯಿತು. ಆಗ "ಎಲೈ ಧರ್ಮಜನೆ, ಮೆಚ್ಚಿದೆನು. ನಿನ್ನ ತಮ್ಮಂದಿರಲ್ಲಿ ಯಾರಾದರಿಬ್ಬರ ಪ್ರಾಣವನ್ನು ಬೇಡು, ಕೊಡುವೆನು" ಎಂದನು. ಆಗ ಧರ್ಮಜನು 'ನಕುಲ ಸಹದೇವರೇಳಲಿ' ಎಂದನು. ಅವರಿಬ್ಬರೂ ಎದ್ದು ಕುಳಿತರು. "ಲೋಕೈಕವೀರರಾದ ಭೀಮಾರ್ಜುನರನ್ನು ಬಿಟ್ಟು ಇವರನ್ನೇಕೆ ಬೇಡಿದೆ?" ಎಂದು ಯಕ್ಷನು ಕೇಳಲು ಧರ್ಮಜನು "ಎಲೈ ಯಕ್ಷನೆ, ಮಾದ್ರಿಯು ತನ್ನ ಮರಣಾವಸ್ಥೆಯಲ್ಲಿ ನನ್ನನ್ನು ಕರೆದು, 'ಇವರನ್ನು ಕಾಪಾಡುವ ಭಾರವು ನಿನ್ನದು' ಎಂದು ಹೇಳಿ ಇಬ್ಬರನ್ನೂ ನನ್ನ ಮಡಲಿಗೆ ಹಾಕಿದಳು. 'ಕಾಪಾಡುವೆನು; ಸುಖವಾಗಿ ಪ್ರಾಣ ಬಿಡು' ಎಂದು ಅವಳಿಗೆ ಅಂದು ವಚನ ಕೊಟ್ಟೆನು. ಅದನ್ನು ಹೇಗೆ ಮರೆಯಲಿ? ಇದೂ ಅಲ್ಲದೆ ಕುಂತಿಗೆ ಭೀಮಾರ್ಜುನರಿಗಿಂತಲೂ ನಕುಲ ಸಹದೇವರಲ್ಲಿ ಪ್ರೀತಿ ಹೆಚ್ಚು. ನಕುಲ ಸಹದೇವರಿಲ್ಲದೆ ಕುಂತಿಯ ಮುಂದೆ ನಿಲ್ಲಲಾರೆ ಸ್ವಾರ್ಥದಿಂದ ಅವಳ ಮನಸ್ಸಿಗೆ ಸಂತೋಷಪಡಿಸದ ನನ್ನ ಜನ್ಮವು ಒಂದು ಜನ್ಮವೇ ?" ಎಂದನು. ಯಕ್ಷನು ಸಂತುಷ್ಟನಾಗಿ, ಭೀಮಾರ್ಜುನರೂ ಏಳುವಂತೆ ಮಾಡಿದನು. ನಾಲ್ವರೂ ಅದ್ಭುತಾಕಾರನಾದ ಯಕ್ಷನನ್ನು ನೋಡಿ, ಭಯಭ್ರಾಂತರಾಗಿ ಚಲಿಸದೆ ತಂತಮ್ಮ ಸ್ಥಾನಗಳಲ್ಲಿ ಕುಳಿತಿದ್ದರು.

ಒಂದೇ ಕಾಲಿನಿಂದ ನಿಂತಿರುವ ಯಕ್ಷನನ್ನು ನೋಡಿ ಧರ್ಮಜನು "ನಿನ್ನನ್ನು ನೋಡಿದರೆ ಯಕ್ಷನಂತೆ ಕಾಣುವುದಿಲ್ಲ. ನೀನು ಏಕಾದಶ ರುದ್ರರಲ್ಲಿ ಒಬ್ಬನೋ, ಅಷ್ಟವಸುಗಳಲ್ಲಿ ಒಬ್ಬನೋ, ಅಥವಾ ದೇವತಾಶ್ರೇಷ್ಠನಾದ ಇಂದ್ರನೋ ಆಗಿರಬೇಕು. ನನ್ನಲ್ಲಿ ಪ್ರಸನ್ನನಾಗಿ ನಿನ್ನ ಇರವನ್ನು ತೋರು" ಎಂದನು. ಆಗ ಆ ಯಕ್ಷರೂಪದಲ್ಲಿದ್ದ ಯಮಧರ್ಮನು ತನ್ನ ನಿಜರೂಪವನ್ನು ತೋರಲು, ಧರ್ಮಜನು ತಮ್ಮಂದಿರೊಡನೆ ಸಾಷ್ಟಾಂಗ ಪ್ರಣಾಮಮಾಡಿ ಕೈ ಮುಗಿದು ನಿಂತಿರಲು, ಯಮನು, "ನಿಮ್ಮ

ಅಜ್ಞಾತವಾಸವು ಯಾರಿಗೂ ಅರಿಯದಂತೆ ನಿರ್ವಿಘ್ನವಾಗಿ ನೆರವೇರಲಿ" ಎಂದು ಅನುಗ್ರಹಿಸಿ ಅರಣಿಯನ್ನು ಕೊಟ್ಟು ಅಂತರ್ಧಾನನಾದನು.

ಇತ್ತ ಆ ಬ್ರಾಹ್ಮಣನೂ, ಧೌಮ್ಯನೂ, ದ್ರೌಪದಿಯೂ, ಎಷ್ಟು ಹೊತ್ತಾದರೂ ಧರ್ಮರಾಜಾದಿಗಳು ಬಾರದಿರುವುದನ್ನು ನೋಡಿ ಚಿಂತಾಕ್ರಾಂತರಾಗಿ ಪರ್ಣಶಾಲೆಯ ಮುಂಭಾಗದ ಅಂಗಳದಲ್ಲಿ ಅವರ ಆಗಮನವನ್ನೇ ನಿರೀಕ್ಷಿಸುತ್ತ ಕುಳಿತಿದ್ದರು. ಭೀಮಸೇನನು ಅರಣಿಯನ್ನು ತೆಗೆದುಕೊಂಡು ವಾಯುವೇಗದಿಂದ ತಾನೊಬ್ಬನೇ ಮುಂದೆ ಹೊರಟನು. ದೂರದಲ್ಲಿ ಒಬ್ಬನೇ ಬರುತ್ತಿದ್ದ ಭೀಮಸೇನನನ್ನು ದ್ರೌಪದಿಯು ನೋಡಿ ಅವನನ್ನು ದಾರಿಯಲ್ಲಿಯೇ ಇದಿರುಗೊಂಡಳು. ಹಿಂದೆ ನಿಧಾನವಾಗಿ ಎಲ್ಲರೂ ಬರುತ್ತಿರುವುದನ್ನು ತಿಳಿಸಿ, ಬ್ರಾಹ್ಮಣನಿಗೆ ಅರಣಿಯನ್ನು ಕೊಟ್ಟು, ಧೌಮ್ಯರಿಗೆ ನಮಸ್ಕಾರಮಾಡಿ ವಿಶ್ರಾಂತಿಸುಖವನ್ನು ಬಯಸಿ ತಾನು ಮಲಗುತ್ತಿದ್ದ ಕೋಣೆಗೆ ಹೋದನು. ಸ್ವಲ್ಪ ಹೊತ್ತಾದ ಮೇಲೆ ಉಳಿದವರೂ ಪರ್ಣಶಾಲೆಯನ್ನು ಸೇರಿದರು.

ಧರ್ಮರಾಜ! ನಿನ್ನ ಸತ್ತ್ವಪ್ರಭೆಯಿಂದ ಶ್ರೀಕೃಷ್ಣನನ್ನು ನಿನ್ನ ಬೆಂಗಾವಲಿನವನನ್ನಾಗಿ ಮಾಡಿಕೊಂಡೆ; ಸೂರ್ಯನ ಒಲುಮೆಗೆ ಪಾತ್ರನಾದೆ; ದೂರ್ವಾಸರ ದುಗುಡವನ್ನು ದೂರಮಾಡಿದೆ. ಭೀಮಾರ್ಜುನರಿಗೆ ಶಿವನು ವೈರಿದೋರನಂತೆ ಮಾಡಿದೆ. ನಹುಷನ ಶಾಪವಿಮೋಚನಮಾಡಿದೆ. ನಿನ್ನ ತಮ್ಮಂದಿರಿಗೆಲ್ಲ ಜವನ ದರ್ಶನ ಮಾಡಿಸಿದೆ. ದೇವತೆಗಳ ಪ್ರೀತಿಗೆ ಪಾತ್ರನಾದೆ. ನಿನಗೆ ಅಪ್ರಿಯವನ್ನು ಬಯಸಿ ಪ್ರತೀಕಾರಮಾಡಿದವರು ತಮ್ಮಲ್ಲಿ ತಾವೇ ತಿರಸ್ಕೃತರಾಗುವಂತೆ ಮಾಡಿದೆ. ಇದೊಂದನ್ನೂ ನೀನರಿಯೆ. ಕೌರವನು ಕಾಡಿಗೆ ಕಳುಹಿಸಿದುದು ನಿನಗೊಂದು ಬುರುಕಿಯೊಳಗಿನ ಶಿವನ ಪ್ರಸಾದ—ಇದನ್ನು ನೀನರಿಯೆ.



**ಶ್ರೀಮತ್ಕೃಷ್ಣರಾಜೇಂದ್ರ ಒಡೆಯರ್ ಬಹಾದುರ್**

ಜಿ. ಸಿ. ಎಸ್. ಐ. ಜಿ. ಬಿ. ಇ. ಮಹಾಪ್ರಭುಗಳವರು

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ |

ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||

|| ಶ್ರೀ ||

# ವಿರಾಟಪರ್ವ

## ಒಂದನೆಯ ಅಧ್ಯಾಯ

# ಸಮಸ್ಯೆ ಮತ್ತು ಪರಿಹಾರ

---

ಪ್ರತಿಜ್ಞಾಪಾಲಕರಾದ ಪಾಂಡವರು ದ್ರೌಪದಿಸಮೇತರಾಗಿ ಹನ್ನೆರಡು ವರ್ಷ ವನವಾಸವನ್ನು ಸುಖವಾಗಿ ಕಳೆದರು. ಇನ್ನು ಒಂದು ವರ್ಷ ಅಜ್ಞಾತವಾಸವನ್ನು ಮಾತ್ರ ಕಳೆಯಬೇಕು. ಅವರು ಅಜ್ಞಾತದಲ್ಲಿರುವಾಗ ಕೌರವಾದಿಗಳು ಅವರನ್ನು ಕಂಡುಹಿಡಿದರೆ ಪುನಃ ಹನ್ನೆರಡು ವರ್ಷ ವನವಾಸ ಮಾಡಬೇಕಾದ ಸಂಭವವಿದ್ದಿತು. ವನವಾಸಕ್ಕಿಂತಲೂ ಅಜ್ಞಾತವಾಸವು ಅವರಿಗೆ ಬಹಳ ಅಪಾಯಕರವಾಗಿದ್ದಿತು. ಅಪಾಯದಿಂದ ತಪ್ಪಿಸಿಕೊಂಡು ಸುಖವಾಗಿ ಬಾಳಲು ಯಾರಿಗೆ ತಾನೆ ಇಷ್ಟವಿಲ್ಲ? ತಿರ್ಯಗ್ಜಂತುಗಳೂ ಅಪಾಯದ ಕುರುಹು ತೋರಿದೊಡನೆಯೆ, ಆ ಸ್ಥಳವನ್ನು ಬಿಟ್ಟು ಸುರಕ್ಷಿತವಾದ ಬೇರೆ ಸ್ಥಳವನ್ನು ಕುರಿತು ಹೋಗುವುವು. ಪಕ್ಷಿಗಳು ತಮ್ಮ ಗೂಡುಗಳಿರುವ ವೃಕ್ಷವನ್ನು ಸೇರುವುವು; ಕುರಿ ಮುಂತಾದ ಪ್ರಾಣಿಗಳು ತಮ್ಮ ಹಿಂಡನ್ನು ಕೂಡುವುವು; ಬಾಲಕರು ತಮ್ಮ ಪೋಷಕರ ಸಮೀಪವನ್ನೈದುವರು. ತಿಳುವಳಿಕೆಯುಳ್ಳ ಮನುಷ್ಯನು ಏನು ಮಾಡುವನೋ ಯಾರು ಹೇಳಬಲ್ಲರು?

ಧರ್ಮಜ್ಞನೂ ಸತ್ಯವ್ರತನೂ ಆದ ಧರ್ಮರಾಯನು ತನ್ನ ತಮ್ಮಂದಿರು, ಪರಮಪಾವನೆಯೂ ಸತ್ಯಶೀಲಳೂ ಮಹಾನುಭಾವಳೂ ಪತಿವ್ರ

ತಾಶಿರೋಮಣಿಯೂ ಆದ ದ್ರೌಪದಿ ಮತ್ತು ತಮ್ಮ ಕುಲಪುರೋಹಿತರಾದ ಧೌಮ್ಯರು ಇವರುಗಳೊಡನೆ ಕೂಡಿ ಕಂದಮೂಲ ಫಲಾದಿಗಳನ್ನು ಸೇವಿಸುತ್ತ ಹನ್ನೆರಡು ವರ್ಷ ವನವಾಸವನ್ನು ಕಳೆದನು. ಕೋಮಲದೇಹದ ಬಾಲಕರಾದ ನಕುಲ ಸಹದೇವರೂ, ಸುಕುಮಾರಿಯಾದ ದ್ರೌಪದಿಯೂ, ಧರ್ಮರಾಯ ಭೀಮಾರ್ಜುನರೊಡನೆ ಕಾಡಿನಲ್ಲಿ ಸುತ್ತಿ, ಒಳಲಿ, ಬೆಂದು ಬೆಂಡಾಗಿ ಹೋಗಿದ್ದರು. ಮಾಡುವುದು ತಾನೆ ಏನು? ಒಂದು ವರ್ಷ ಅಜ್ಞಾತವಾಸವನ್ನು ಮಾಡಿಯೇ ತೀರಬೇಕು. ಆಗ ಧರ್ಮಜನು ಧೌಮ್ಯರಿಗೆ ನಮಸ್ಕಾರಮಾಡಿ ತಮ್ಮ ಅಜ್ಞಾತವಾಸವು ಯಾರಿಗೂ ತಿಳಿಯದಂತೆ ಯಶಸ್ವಿಯಾಗಿ ಜರುಗುವಂತೆ ಆಶೀರ್ವದಿಸಿ ತಮ್ಮನ್ನು ಉದ್ಧರಿಸಬೇಕೆಂದು ಕೇಳಿಕೊಂಡನು. ಆಗ ಧೌಮ್ಯರು, 'ಅಜ್ಞಾತವಾಗಿದ್ದುಕೊಂಡು ಮಹಾಕಾರ್ಯಗಳನ್ನು ಮಾಡಿರುವ ಮಹಾನುಭಾವರಂತೆ, ನಿನ್ನ ಅಜ್ಞಾತವಾಸವು, ಬಹಳ ಯಶಸ್ವಿಯಾಗಿ ಕೌರವಾದಿಗಳಿಗೆ ತಿಳಿಯದಂತೆ, ನೆರವೇರುವುದು. ಇದರಲ್ಲಿ ಸಂಶಯ ಬೇಡ' ಎಂದು ನುಡಿದು, ಧರ್ಮರಾಯನ ದುಃಖವನ್ನು ಹೋಗಲಾಡಿಸಿ, ಅವನ ಮನಸ್ಸಿಗೆ ಸಂತೋಷವನ್ನುಂಟುಮಾಡಿದರು.

ನಿಷ್ಕಲ್ಮಷಹೃದಯರಾಗಿಯೂ, ನಿಷ್ಕಪಟಿಗಳಾಗಿಯೂ, ಲೋಭ ಮೋಹ ಮದ ಮಾತ್ಸರ್ಯಗಳನ್ನು ಬಿಟ್ಟವರಾಗಿಯೂ, ಇರುವ ಮಹರ್ಷಿಗಳ ಮಾತು ಎಂದಿಗೂ ಹುಸಿಯಾಗದು. ಆದರೂ ಸುರಕ್ಷಿತಸ್ಥಳವು ಒಂದು ಬೇಕೇ ಬೇಕು. ಕೌರವನಿಗೆ ಮಿತ್ರರಾಗಿರುವ ರಾಜರುಗಳ ರಾಜ್ಯಗಳಲ್ಲಿರಲು ಸಾಧ್ಯವಿಲ್ಲ. ತಮ್ಮ ತಮ್ಮ ಸ್ವಜಗುಣಗಳನ್ನು ಮರೆಮಾಡಲು ಯಾರಿಗೂ ಆಳವಲ್ಲ. ಹೀಗಿರುವಲ್ಲಿ, ಲೋಕಪ್ರಸಿದ್ಧರಾದ ಪಾಂಡವರನ್ನು ಪತ್ತೆ ಹಚ್ಚುವದು ಕಷ್ಟವೇ! ಕೌರವಾದಿಗಳು ಸಮಯವನ್ನೇ ಕಾಯುತ್ತಿದ್ದರು. ಕೌರವನಿಂದ ತಪ್ಪಿಸಿಕೊಳ್ಳುವದು ಪಾಂಡವರಿಗೆ ಪ್ರಮಾದವಾಗಿಯೇ ಇತ್ತು. ಆದರೂ ಮನುಷ್ಯನ ಬುದ್ಧಿಗೆ ಎಲ್ಲೆಯೇ ಇಲ್ಲ; ಆ

ಬುದ್ಧಿಯೊಂದಿಗೆ ದೈವಬಲ ಮತ್ತು ಹಿರಿಯರ ಆಶೀರ್ವಾದಬಲ, ಎರಡೂ ಇದ್ದರೆ, ಕೇಳಬೇಕಾದುದೇನು! ಎಂಥಾ ಸನ್ನಿವೇಶಗಳೊದಗಿದರೂ, ಬಿರುಗಾಳಿಯ ಮುಂದೆ ಮೇಘಗಳು ಚದುರಿ ಹೋಗುವಂತೆ, ಹಾರಿ ಹೋಗುವುವು.

ಯಾರಿಗೂ ಮೋಸ ಮಾಡದ ಮೋಸ ಬಗೆಯದ ಪಾಂಡವರು, ದುಷ್ಟರ ಮೋಸಕ್ಕೆ ಸಿಕ್ಕಿ, ಎಲ್ಲಿ ಇತರರು ತಮ್ಮನ್ನು ಕಂಡುಬಿಡುವರೋ ಎಂಬ ಭಯದಿಂದ, ತಲೆ ತಪ್ಪಿಸಿಕೊಂಡು, ಒಂದು ವರ್ಷಕಾಲ ಗೋಪ್ಯವಾಗಿದ್ದೇತೀರಬೇಕು. ಅಂಥ ಕಾಲವು ಅವರಿಗೆ ಪ್ರಾಪ್ತವಾಯಿತು. ಆಗ ಧರ್ಮಜನು ತನ್ನ ತಮ್ಮಂದಿರನ್ನೂ ದ್ರೌಪದಿಯನ್ನೂ ಧೌಮ್ಯರನ್ನೂ ಕೂರಿಸಿಕೊಂಡು ಅರ್ಜುನನನ್ನು ಕುರಿತು 'ಅಪಾಯಕರವಾದ ಅಜ್ಞಾತವಾಸವನ್ನು ಎಲ್ಲಿ ಕಳೆಯೋಣ?' ಎಂದನು. ಈ ಪ್ರಶ್ನೆಯು ಇತ್ಯರ್ಥವಾದ ಹೊರತು ಗತ್ಯಂತರವೇ ಇಲ್ಲ. ಅರ್ಜುನನು ಅನೇಕ ದೇಶದ ಹೆಸರುಗಳನ್ನು ಹೇಳಿ ಕೊನೆಗೆ "ಮತ್ಸ್ಯದೇಶದ ವಿರಾಟನಗರವು ಸಮಸ್ತ ಜನಸಂಕೀರ್ಣವಾಗಿಯೂ ಸಕಲವಸ್ತುಸಮೃದ್ಧಿಯಿಂದ ರಮಣೀಯವಾಗಿಯೂ ಇರುವುದು ಎಂದು ಕೇಳಿ ಉಂಟು" ಎಂದು ಹೇಳಿ ತನ್ನ ಅಭಿಮತವನ್ನು ಕೊಟ್ಟನು. ಧರ್ಮರಾಯನು ತಲೆದೂಗುತ್ತ 'ನೀನು ಹೇಳಿದ ಮಾತುಗಳೆಲ್ಲವೂ ಯಥಾರ್ಥವೇ ಸರಿ. ಮತ್ಸ್ಯಾಧಿಪನು ಮಹಾ ಬಲಶಾಲಿ, ವದಾನ್ಯ, ವಯೋವೃದ್ಧ ಮತ್ತು ಸಜ್ಜನಪ್ರಿಯ. ನಾನು ಹೇಗಾದರೂ ಅವನೊಡನೆ ಸರಿಹೋಗಿಸಿಕೊಂಡಿರಬಲ್ಲೆನು. ನೀವು ಹೇಗಿರುವಿರಿ, ?' ಎನ್ನಲು, ಈ ಮಾತುಗಳನ್ನು ಕೇಳಿ ಅರ್ಜುನನಿಗೆ ಸಂತಾಪವುಂಟಾಯಿತು. ಹಾಗೆಯೇ ಅವನು 'ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳನ್ನರಿಯದ ನೀನು ವಿರಾಟರಾಯನ ಬಳಿ ಹೇಗಿರುವೆ, ?' ಎಂದನು.

ಆಗ ಧರ್ಮಜನು 'ಯತಿವೇಷವನ್ನು ಧರಿಸಿ ಕಂಕನೆಂಬ ಹೆಸರಿನಿಂದ ಜ್ಯೋತಿಷ, ಶಕುನಶಾಸ್ತ್ರ, ವೇದಶಾಸ್ತ್ರಾದಿ ವಿದ್ಯೆಗಳು, ಸ್ವಪ್ನನಿ

ಮಿತ್ರಗಳು, ಧರ್ಮಾರ್ಥಕಾಮಮೋಕ್ಷಗಳು ಇವುಗಳನ್ನೆಲ್ಲ ತಿಳಿದವನೆಂದು ಪ್ರಸಿದ್ಧಿ ಪಡೆದು, ಕೇಳಿದ ಸಂಶಯಗಳನ್ನು ಪರಿಹರಿಸುತ್ತ, ಪ್ರಿಯಭಾಷಣಗಳಿಂದ, ಆ ನರೇಂದ್ರನಿಗೆ ಮನೋರಂಜನೆಯನ್ನುಂಟುಮಾಡುವೆನು. ಇದಲ್ಲದೆ ಅಕ್ಷಹೃದಯಜ್ಞನು ಈತನೇ ಸರಿ ಎಂಬ ಹಾಗೆ ಕೌಶಲ್ಯವನ್ನು ತೋರಿಸುತ್ತ ವಿನೋದವನ್ನುಂಟುಮಾಡುವೆನು' ಎಂದು ನುಡಿದನು.

ತನ್ನ ಮಾತುಗಳಾದ ಮೇಲೆ ಕಂಬನಿಗಳಿಂದ ಕೂಡಿದ ಕಣ್ಣುಗಳುಳ್ಳವನಾಗಿ, ನಿಟ್ಟುಸಿರುಗಳನ್ನು ಬಿಡುತ್ತ, ಭೀಮನ ಕಡೆ ತಿರುಗಿದನು. ಭೀಮಸೇನನು ಸಾಮಾನ್ಯನಲ್ಲ. ಬಕ, ಕಿರ್ಮೀರ, ಹಿಡಿಂಬ, ಜಟಾಸುರ ಮುಂತಾದ ರಾಕ್ಷಸಶ್ರೇಷ್ಠರನ್ನು ಲೀಲಾಮಾತ್ರದಿಂದ ಸಂಹರಿಸಿದ ವೀರನು. ದ್ರೌಪದಿಯು ಸೌಗಂಧಿಕಪುಷ್ಪವು ಬೇಕೆಂದು ಹೇಳಲಾಗಿ, ಅನೇಕ ಯಕ್ಷರಾಕ್ಷಸ ಶ್ರೇಷ್ಠರನ್ನು ಕೊಂದು, ತನ್ನ ಪ್ರೀತಿಯ ಕಾಣಿಕೆಯನ್ನು ಒಪ್ಪಿಸಿದ ವದಾನ್ಯ. ಪರರ ಅನುಚಿತಕಾರ್ಯಗಳನ್ನು ಲೇಶವಾದರೂ ಸಹಿಸದ ಸರಳಹೃದಯ. ಇಂಥಾ ಭೀಮಸೇನನು ವಿರಾಟನ ಬಳಿ ಇರುವುದೆಂತು ? ಇದನ್ನು ಬಗೆಹರಿಸುವವರಾರು ?

ಧರ್ಮರಾಯನ ಇಂಗಿತವನ್ನು ತಿಳಿದು ಭೀಮಸೇನನು ಅವನನ್ನು ಕುರಿತು 'ವಲಲನೆಂಬ ಹೆಸರಿನಿಂದ ವಿರಾಟರಾಯನ ಅಡಿಗೆಯ ಮನೆಯನ್ನು ಸೇರಿ, ರುಚಿರುಚಿಯಾಗಿರುವ ವಿಧವಿಧವಾದ ಅಡಿಗೆಗಳನ್ನು ಮಾಡಿ, ಅವನಿಗೆ ಬಡಿಸಿ, ಅವನ ಮೆಚ್ಚಿಗೆಯನ್ನು ಸಂಪಾದಿಸಿಕೊಳ್ಳುವೆನು. ಮತ್ತು ಅಜಯ್ಯರೆಂದು ಬಿರುದುಳ್ಳ ಜಟ್ಟಿಗಳನ್ನು ಸೋಲಿಸಿ, ಅವರ ಗರ್ವವನ್ನು ಮುರಿದು, ರಾಜನಿಗೆ ಸಂತೋಷಪಡಿಸುವೆನು. ದುಷ್ಟಮೃಗಗಳ ಬೇಟೆಯಿಂದ ಅವನಿಗೆ ಆನಂದವನ್ನುಂಟುಮಾಡುವೆನು. ನೀನಾರೆಂದು ಕೇಳಿದರೆ ಧರ್ಮರಾಜನ ಬಳಿ ಪರಿಚಾರಕನಾಗಿದ್ದವನೆಂದು ಹೇಳುತ್ತ, ಒಬ್ಬರಿಗೂ ಅರಿಯದಂತೆ ಇರುವೆನು. ಇದರಲ್ಲೇನೂ ಸಂಶಯ ಬೇಡ'

ಎಂದನು. ಧರ್ಮರಾಯನಿಗೆ ಅವನ ತಲೆಯ ಮೇಲಿದ್ದ ಭಾರದಲ್ಲಿ ಅರ್ಧ ವನ್ನು ಕೆಳಕ್ಕೆ ಇಳುಹಿಸಿದಂತಾಯಿತು.

ಬಳಿಕ ಅರ್ಜುನನ ಕಡೆ ತಿರುಗಿದನು. ದ್ರುಪದನನ್ನು ಹೆಡೆಮುರಿ ಕಟ್ಟಿ ದ್ರೋಣನ ಪಾದದ ಮೇಲೆ ಕೆಡಹಿದಾಗಲೂ, ದ್ರೌಪದಿಯ ಸ್ವಯಂ ವರ ಮಂಟಪದಲ್ಲೂ, ಕಾಡಿನಲ್ಲಿದ್ದಾಗ ಕುಬೇರನ ಕಡೆಯವರ ಸೆರೆಯಾ ಳಾಗಿದ್ದ ಕೌರವನನ್ನು ಬಿಡಿಸಿ ಧರ್ಮಜನ ಕಾಲಿನ ಮೇಲೆ ಕೆಡಹಿದಾ ಗಲೂ, ಇವನ ಶಕ್ತಿಪ್ರದರ್ಶನವಾಗಿದೆ. ಇಂಥವನು ಇರುವುದೆಂತು ? ಎಂಬ ಪ್ರಶ್ನೆಯು ಧರ್ಮರಾಯನನ್ನು ಸ್ವಲ್ಪ ಬಾಧಿಸಿತು. ಅರ್ಜುನನು ದೇವಲೋಕಕ್ಕೆ ಹೋಗಿದ್ದಾಗ ಊರ್ವಶಿಯಿಂದ ನಪುಂಸಕನಾಗೆಂದು ಶಾಪ ಪಡೆದಿದ್ದನು. ಅಜ್ಞಾತವಾಸಕಾಲದಲ್ಲಿ ಅದನ್ನು ಒಂದು ವರ್ಷ ಅನುಭವಿಸೆಂದು ಇಂದ್ರನು ಕರುಣಿಸಿದ್ದನು.

ಆಗ ಅರ್ಜುನನು ಧರ್ಮರಾಯನನ್ನು ಸಂಬೋಧಿಸುತ್ತ ' ನಾನು ಸ್ತ್ರೀವೇಷಧಾರಿಯಾಗಿ, ವಿರಾಟನ ಅಂತಃಪುರದಲ್ಲಿ, ಕೇಳಿದವರಿಗೆ ದ್ರೌಪದಿ ಪರಿಚಾರಿಣಿಯಾದ ಬೃಹನ್ನಳೆ ಎಂದು ಹೇಳುತ್ತ, ಅಲ್ಲಿರುವ ಸ್ತ್ರೀಜನರಿಗೆ ನಾಟ್ಯ ಸಂಗೀತಗಳನ್ನೂ ವೀಣಾಗಾನ ಮೊದಲಾದ ವಿದ್ಯೆ ಗಳನ್ನೂ ಕಲಿಸುತ್ತ, ರಾಯನ ಮನಸ್ಸಿಗೆ ಸಂತೋಷವನ್ನುಂಟುಮಾ ಡುತ್ತ, ಗೂಢವರ್ತನದಿಂದಿರುವೆನು ' ಎಂದನು.

ಬಳಿಕ ನಕುಲ ಸಹದೇವರ ಕಡೆ ತಿರುಗಿದನು. ನಕುಲನು ಶೂರ, ಸುಕುಮಾರ, ಸುಂದರ, ಕಷ್ಟವನ್ನರಿತವನಲ್ಲ. ಸಹದೇವನು ಕಾಲಜ್ಞಾನಿ, ರಾಜತಂತ್ರಗಳಲ್ಲಿ ಪ್ರವೀಣ, ಅನೇಕ ಶಾಸ್ತ್ರವೇತ್ತ, ಕುಂತೀಪ್ರಿಯ. ಇವರುಗಳಿರುವುದೆಂತು ?

ನಕುಲನು ಧರ್ಮರಾಯನನ್ನು ಕುರಿತು, ' ನಾನು ವಿರಾಟನ ಅಶ್ವ ಶಾಲೆಯನ್ನು ಸೇರಿ, ನೀನಾರೆಂದು ಕೇಳಿದರೆ ನಾನು ಧರ್ಮರಾಯನ ಸಮೀಪದಲ್ಲಿದ್ದವನೆಂದು ಹೇಳುತ್ತ, ಎಲ್ಲರಿಗೂ ಸಂತೋಷವನ್ನುಂಟು

ಮಾಡುತ್ತ, ಯಾರಿಗೂ ಅರಿಯದಂತೆ, ವರ್ತಿಸುವೆನು ; ಸಂಶಯ ಬೇಡ ' ಎಂದನು.

ಸಹದೇವನು ' ನಾನು ಗೋಪಾಲಕನಾಗಿ, ರಾಜನ ಪ್ರೀತಿಗೆ ಪಾತ್ರನಾಗಿ, ನೀನಾರೆಂದು ಕೇಳಿದರೆ ಧರ್ಮರಾಯನ ಗೋಸಮೂಹ ವನ್ನು ರಕ್ಷಿಸುತ್ತಿದ್ದವನೆಂದು ನುಡಿದು, ನನ್ನ ವೃತ್ತಾಂತವು ಯಾರಿಗೂ ತಿಳಿಯದೆ ಇರುವ ರೀತಿಯಲ್ಲಿ, ಸಂಚರಿಸುವೆನು. ಇದರಲ್ಲಿ ಸ್ವಲ್ಪವೂ ಸಂಶಯಬೇಡ ' ಎಂದನು.

ಧರ್ಮರಾಜನಿಗೆ ಧಾರಾಳವಾಗಿ ಕಣ್ಣುಗಳಲ್ಲಿ ನೀರು ಸುರಿಯು ವುದಕ್ಕೆ ಪ್ರಾರಂಭವಾಯಿತು. ಗಂಟಲು ಬಿಗಿದುಕೊಂಡು ಹೋಯಿತು. ಹಾಗೆಯೇ ದ್ರೌಪದಿಯ ಕಡೆ ತಿರುಗಿದನು. ದ್ರೌಪದಿಯು ಎಲ್ಲರಂತೆ ಸಾಮಾನ್ಯ ಹೆಂಗಸಲ್ಲ; ಎಲ್ಲರಂತೆ ಕೆಲಸ ಮಾಡಲು ತಿಳಿದವಳಲ್ಲ ; ಸುಕುಮಾರಿ; ಪಾಂಡವರ ಪ್ರಾಣ. ಇವಳನ್ನು ತಾಯಿಯ ಹಾಗೂ, ಒಡ ಹುಟ್ಟಿದ ಸಹೋದರಿಯ ಹಾಗೂ, ವಿರಾಟನಗರದಲ್ಲಿ ಕಾಪಾಡುವವರಾ ರು ? ಈ ಪ್ರಶ್ನೆಯು ಧರ್ಮಜನ ಮನಸ್ಸನ್ನು ಪೂರ್ಣವಾಗಿ ಕಲಕಿಬಿಟ್ಟಿತು.

ಆಗ ದ್ರೌಪದಿಯು ಧರ್ಮರಾಯನನ್ನು ಕುರಿತು ' ಸ್ತ್ರೈರಂಧ್ರಿಯ ರಿಗೆ ಪತಿಸಾನ್ನಿಧ್ಯವು ತಪ್ಪಿದ ಬಳಿಕ, ಪಾತಿವ್ರತ್ಯಕ್ಕೆ ಭಂಗ ಬರದಂತೆ, ಪರಸ್ತ್ರೀಯರ ಶುಶ್ರೂಷೆ ಮಾಡುತ್ತಲಿರುವುದು ಉಚಿತವಾದುದು. ನಾನು ಮತ್ಸ್ಯರಾಯನ ಅಂತಃಪುರದಲ್ಲಿ ಸುಧೇಷ್ಣೆಯ ಸಮೀಪವನ್ನು ಸೇರಿ, ನನಗೆ ತೋರಿದ ರೀತಿಯಿಂದ ಉಚಿತವಾಗಿದ್ದುಕೊಂಡು, ಆ ದೇವಿಯ ಮೆಚ್ಚಿಗೆಗೆ ಪಾತ್ರಳಾಗಿ, ನನ್ನನ್ನು ಯಾರೂ ಗುರ್ತಿಸದಂತೆ ಗೂಢವಾಗಿ ನಡೆದುಕೊಳ್ಳುವೆನು. ನನ್ನ ಧರ್ಮವೇ ನನ್ನನ್ನು ಕಾಪಾಡುವುದು. ನನ್ನ ನಿಮಿತ್ತವಾಗಿ ನೀನು ಕ್ಲೇಶಪಡಬೇಡ ' ಎಂದಳು.

ಧರ್ಮರಾಯನ ತಲೆಯ ಮೇಲಿದ್ದ ಭಾರವನ್ನೆಲ್ಲ ಕೆಳಕ್ಕೆ ಇಳುಹಿಸಿ ದಂತಾಯಿತು. ದ್ರೌಪದಿ ಭೀಮ ಇವರದೇ ಅವನಿಗೆ ಯೋಚನೆ ಹೆಚ್ಚಾ

ಗಿತ್ತು. ಹೇಗೋ ಎಲ್ಲರೂ ಸೇರಿ ಸಮಸ್ಯೆಯನ್ನು ಬಗೆಹರಿಸಿದರು. ತಮ್ಮ ಬಳಿ ಇದ್ದ ಇಂದ್ರಸೇನಾದಿಭೃತ್ಯರು ರಥಾದಿಗಳೊಡನೆ ದ್ವಾರಕಾ ಪಟ್ಟಣಕ್ಕೆ ಹೋಗಬೇಕೆಂದೂ, ಅಲ್ಲಿ ಯಾರಾದರೂ ಪಾಂಡವರೆಲ್ಲಿದ್ದಾರೆಂದು ಕೇಳಿದರೆ, ದ್ವೈತವನದಲ್ಲಿದ್ದು ನಮ್ಮನ್ನು ಇಲ್ಲಿಗೆ ಕಳುಹಿಸಿ, ಅಲ್ಲಿಂದ ಎಲ್ಲಿಗೆ ಹೋದರೋ ತಿಳಿಯದು ಎಂದು ನುಡಿಯತಕ್ಕದ್ದೆಂದೂ, ಕಟ್ಟುಮಾಡಿ, ಅವರನ್ನೆಲ್ಲ ಕಳುಹಿಸಿ, ಧೌಮ್ಯರನ್ನು ಮುಂದು ಮಾಡಿಕೊಂಡು, ಪಾದಚಾರಿಗಳಾಗಿ, ಮತ್ಸ್ಯದೇಶಾಭಿಮುಖರಾಗಿ ಹೊರಟರು. ದಾರಿಯಲ್ಲಿ ಉದ್ದಕ್ಕೂ ಪ್ರಕೃತಿ ಸೌಂದರ್ಯವನ್ನು ನೋಡಿ ಹಿಗ್ಗುತ್ತ ಮತ್ಸ್ಯದೇಶದ ಎಲ್ಲೆಯನ್ನು ಸೇರಿದರು. ಅಲ್ಲಿ ಧೌಮ್ಯರಿಂದ ಸೇವಕಧರ್ಮ ತತ್ತ್ವೋಪದೇಶವನ್ನು ಹೊಂದಿ, ಪ್ರದಕ್ಷಿಣ ನಮಸ್ಕಾರವನ್ನು ಮಾಡಿ, ಅವರ ಆಶೀರ್ವಾದವನ್ನು ಪಡೆದು, ಅವರನ್ನಗಲಿ ಮುಂದೆ ಹೊರಟರು. ದ್ರೌಪದಿಗೆ ಆಯಾಸವು ಹೆಚ್ಚಾಯಿತು. ಮುಂದೆ ಹಜ್ಜೆ ಇಡಲಾರದೆ ಹೋದಳು. ಧರ್ಮಜನನ್ನು ಕುರಿತು 'ವಿರಾಟನಗರಿಯು ಇನ್ನೆಷ್ಟು ದೂರದಲ್ಲಿದೆ?' ಎಂದಳು. ದ್ರೌಪದಿಯ ಇಂಗಿತವನ್ನು ತಿಳಿದು ಧರ್ಮಜನು ಅವಳನ್ನೆತ್ತಿಕೊಂಡು ಬರುವಂತೆ ನಕುಲ ಸಹದೇವರಿಗೆ ಆಜ್ಞಾಪಿಸಿದನು. ಪಾಪ! ಕೋಮಲಶರೀರಿಗಳಾದ ಬಾಲರು, ಕಲ್ಲು ಮುಳ್ಳುಗಳಲ್ಲಿ ನಡೆದು ಬಹಳ ಆಯಾಸಪಟ್ಟಿದ್ದರು. ನಮ್ಮಿಂದಾಗದು' ಎಂದರು. ಆಗ ಅರ್ಜುನನಿಗೆ ಅಪ್ಪಣೆ ಮಾಡಿದನು. ಆಯಾಸವಾಗಿದ್ದರೂ, ಅರ್ಜುನನು ಬಹಳ ಸಂತೋಷದಿಂದ ದ್ರೌಪದಿಯನ್ನೆತ್ತಿಕೊಂಡು ವಿರಾಟನಗರದ ಗಡಿಯಲ್ಲಿ ಒಂದೆಡೆ ಇಳುಹಿಸಿದನು.



|| ಶ್ರೀ ||

## ಎರಡನೆಯ ಅಧ್ಯಾಯ

# ನಗರಪ್ರವೇಶ

ಸಮಸ್ಯೆಯೇನೋ ಪರಿಹಾರವಾಯಿತು. ಆದರೆ ಆ ತೀರ್ಮಾನದಂತೆ ಕಾರ್ಯತಃ ನಡೆಯುವುದು ಸುಲಭವೇ ! ಎಲ್ಲರೂ ಸುಖವಾಗಿ ವಿರಾಟನಗರದ ಗಡಿಯನ್ನು ಸೇರಿದರು. ಈಗ ಮತ್ತೊಂದು ಕಷ್ಟವು ಒದಗಿತು. ಆಯುಧ ಸಮೇತ ನಗರಪ್ರವೇಶ ಮಾಡುವುದೆಂತು ! ಅರ್ಜುನನ ಗಾಂಡೀವವನ್ನೂ, ಭೀಮನ ಗದೆಯನ್ನೂ, ನೋಡದವರಾರು ? ವಿಪುಲಪರಾಕ್ರಮದಿಂದ ಕೂಡಿ ತೇಜೋವಂತರಾಗಿರುವ ಈ ಪಾಂಡವರು ವೇಷಾಂತರದಲ್ಲಿದ್ದರೂ, ಆಯುಧಪಾಣಿಗಳಾಗಿ ನಗರಪ್ರವೇಶ ಮಾಡಿದರೆ, ಇವರನ್ನು ಗುರುತು ಹಿಡಿಯುವುದು ಯಾರಿಗೆ ತಾನೆ ಕಷ್ಟವಾದೀತು ! ಇವರು ಪಾಂಡವರೆಂದು ಸ್ವಲ್ಪ ತಿಳಿದರೆ ಸಾಕು. ಯಾವನಾದರೊಬ್ಬನಿಗೆ ತಿಳಿದರೆ ಸಾಕು. ಆ ವರ್ತಮಾನವು ದುರ್ಯೋಧನನಿಗೆ ಕೂಡಲೆ ಮುಟ್ಟುವುದು, ಮಾಡುವುದೇನು ! ಒಬ್ಬರಿಗೂ ಕಾಣಿಸದಂತೆ ಯಾವದಾದರೊಂದು ಪೊದರಿನಲ್ಲಿಡೋಣವೆಂದರೆ ಸಾಮಾನ್ಯವಾದ ಆಯುಧಗಳೆ ! ಆಯುಧಪಾಣಿಗಳಾಗಿ ನಗರಪ್ರವೇಶ ಮಾಡುವಂತಿಲ್ಲ. ಅಸಾಧಾರಣವಾದ ಆಯುಧಗಳನ್ನಿಡಲು ಸ್ಥಳವಿಲ್ಲ. ಇಂಥ ಸಂದಿಗ್ಧ ವೇಳೆಗಳಲ್ಲಿ ಧರ್ಮರಾಯನು ಅರ್ಜುನನ ಕಡೆ ತಿರುಗುವುದು ಹೆಚ್ಚು. ಯಾವ ಸಮಯದಲ್ಲಿ ಹೇಗೆ ನಡೆಯಬೇಕೆಂಬುದನ್ನು ಊಹಿಸಿ ಹೇಳುವ ಪ್ರತಿಭಾಶಕ್ತಿಯು ಅವನಲ್ಲಿತ್ತು.

ಹಾಗೆಯೇ ಯೋಚಿಸುತ್ತ, ಅರ್ಜುನನು ಸುತ್ತಲೂ ನೋಡಿದನು. ದೂರದಲ್ಲಿ ಹೆಚ್ಚು ಜನ ಸಂಚಾರವಿಲ್ಲದ ಶ್ಮಶಾನ ಸಮೀಪದಲ್ಲಿದ್ದ ಒಂದು ಬನ್ನಿಯ ಮರವು ಅವನ ದೃಷ್ಟಿಗೆ ಗೋಚರವಾಯಿತು. ಅದು ಮಹೋನ್ನತವಾಗಿಯೂ, ಹತ್ತುವುದಕ್ಕೆ ಅಶಕ್ಯವಾಗಿಯೂ, ಅತ್ಯಾಯತಂಗಳಾದ ಕೊಂಬೆಗಳಿಂದ ಒಪ್ಪುತ್ತಲೂ, ಬಹುವಿಧ ಪಕ್ಷಿಸಮೂಹ ಸಂಕುಲವಾಗಿಯೂ ಇದ್ದಿತು. ಆಗ ಅರ್ಜುನನು 'ಆಯುಧಗಳನ್ನೂ ಮಿಕ್ಕ ಸಾಧನಗಳನ್ನೂ ಕೂಡಿಸಿ, ಕೂದಲುಗಳಿಂದಲೂ ಮೂಳೆಗಳಿಂದಲೂ ಕೂಡಿರುವ ಚರ್ಮಗಳಿಂದ ಕಟ್ಟಿ, ಪುರುಷಾಕಾರವನ್ನು ಮಾಡಿ, ಧನುಸ್ಸಿನ ಹೆದೆಗಳಿಂದ ನೇತುಹಾಕಿದರೆ ಈ ಪ್ರದೇಶದಲ್ಲಿ ಆಗಾಗ್ಗೆ ಸಂಚಾರ ಮಾಡುವ ಗೊಲ್ಲರ ಮತ್ತು ಒಕ್ಕಲಿಗರ ದೃಷ್ಟಿಗೆ ಒಂದು ವೇಳೆ ಬಿದ್ದರೂ ಭಯಪಟ್ಟು ಆಯುಧಗಳೆಂದರಿಯಲಾರರು. ನಾವು ವಿರಾಟನಗರಿಯಲ್ಲಿ ನಿರ್ಭಯದಿಂದಲೂ ನಿರಾತಂಕದಿಂದಲೂ ಇರಬಹುದು ಎಂದನು. ಧರ್ಮರಾಯನು ಹಾಗೆಯೇ ಆಗಲೆಂದು ಹೇಳಲು ಎಲ್ಲರೂ ತಂತಮ್ಮ ಧನುಸ್ಸಿನ ಹೆದೆಯನ್ನಿಳುಹಿದರು.

ಆ ಮೇಲೆ ನಕುಲನು ಧರ್ಮರಾಯನಿಂದ ಆಜ್ಞಪ್ತನಾಗಿ ಧನುಸ್ಸುಗಳನ್ನೂ ಖಡ್ಗಗಳನ್ನೂ ಬಾಣಗಳಿಂದ ತುಂಬಿರುವ ಬತ್ತಳಿಕೆಗಳನ್ನೂ ಗದಾದಂಡಗಳನ್ನೂ ಚರ್ಮದಿಂದ ಸುತ್ತಿ ಧನುಸ್ಸಿನ ಹೆದೆಗಳಿಂದ ಕಟ್ಟಿ ಪುರುಷಾಕಾರವನ್ನು ಮಾಡಿ ಮರವನ್ನೇರಿ ನೇತುಹಾಕಿ ಕೆಳಕ್ಕಿಳಿದನು. ಹೀಗೆ ಮನುಷ್ಯನ ಬುದ್ಧಿಗೆ ತೋರಬಹುದಾದ ಬಂದೋಬಸ್ತುಗಳನ್ನೆಲ್ಲ ಮಾಡಿ ಧರ್ಮರಾಯನು ಸಮಸ್ತ ದೇವತೆಗಳನ್ನೂ ಕುರಿತು 'ಇಗೋ ನಮ್ಮ ಆಯುಧಗಳನ್ನು ನಿಮ್ಮವಶ ಮಾಡಿದ್ದೇನೆ. ನಾನಾಗಲಿ ಅರ್ಜುನನಾಗಲಿ ಬಂದರೆ ಆಯುಧಗಳನ್ನು ಕೊಡುವುದು, ಕೌರವನಲ್ಲಿ ಕುಪಿತನಾಗಿ ಭೀಮಸೇನನು ಆಯುಧಗಳಿಗಾಗಿ ಬಂದಲ್ಲಿ ಕೊಡಕೂಡದು ಎಂದು ಪ್ರಾರ್ಥಿಸಿಕೊಂಡನು. ಶಾಂತಿಮಯವಾದ ಅಂದಿನ ವಾತಾ

ವರಣದಲ್ಲಿ 'ತಥಾಸ್ತು' ಎಂಬ ಧ್ವನಿಯು ಧರ್ಮಜನ ಕಿವಿಗೆ ಬಿದ್ದಂತಾಯಿತು ಮತ್ತೊಂದಾವೃತ್ತಿ ಸಹೋದರ ಸಮೇತನಾಗಿ ಸಕಲ ದೇವತೆಗಳಿಗೂ ಸಾಷ್ಟಾಂಗಪ್ರಣಾಮವನ್ನು ಮಾಡಿ ವಿರಾಟನಗರದಲ್ಲಿ ತಾವು ಪರಸ್ಪರ ವ್ಯವಹಾರ ನಡೆಸುವಾಗ ಜಯ ಜಯಂತ ವಿಜಯ ಜಯತ್ಸೇನ ಜಯದ್ಬಲ ಎಂಬ ಹೆಸರುಗಳಿಂದ ಕರೆಯಲುಳ್ಳವರೆಂದು ಸಂಕೇತ ಮಾಡಿಕೊಂಡು ಮುಂದಿನ ವೇಷ ಬದಲಾವಣೆಯ ಕಾರ್ಯಕ್ಕನುವಾದರು.

ಅಲ್ಲಿ ಸಂಚರಿಸುವ ಗೊಲ್ಲರೂ ಒಕ್ಕಲಿಗರೂ ಕುತೂಹಲದಿಂದ ಯಾರು ಏನು ಅವಿವೇಕ ಮಾಡಿ ಅಪಾಯಕ್ಕೊಳಗಾಗುವರೋ ಎಂಬ ದಿಗಿಲು ಮಾತ್ರ ಅವರನ್ನು ಬಿಡಲಿಲ್ಲ. ಇಷ್ಟೆಲ್ಲ ಆಗುವ ವೇಳೆಗೆ ಸರಿಯಾಗಿ ಅಲ್ಲಿಗೆ ಕೆಲವು ಮಂದಿ ಒಕ್ಕಲಿಗರೂ ಗೊಲ್ಲರೂ ಬಂದೇ ಬಂದರು. ಅವರನ್ನು ಯಾರೂ ಪ್ರಶ್ನಿಸಲಿಲ್ಲ. ಆಗ ನಕುಲನು ತಾನಾಗಿಯೇ ಅವರನ್ನು ಕುರಿತು 'ವನಚಾರಿಗಳಾದ ನಮ್ಮಲ್ಲಿ ಯಾರಾದರೂ ಸತ್ತುಹೋದರೆ ಈ ರೀತಿ ಮಾಡುವುದು ನಮ್ಮ ಕುಲಧರ್ಮ. ಈಗ ನಮ್ಮ ತಾಯಿ ಮುದುಕಮ್ಮನು ಕಾಲಾಧೀನವಾದುದರಿಂದ ಹೀಗೆ ಮಾಡಿದ್ದೇವೆ' ಎಂದನು.

ದೈವವೇ ಪೌರುಷಕ್ಕಿಂತಲು ಬಲವತ್ತರವಾದುದು. ಎಂದೂ ಸುಳ್ಳಾಡದ ಧರ್ಮಜನು, ಅಸಾಧಾರಣಗಳಾದ ಆಯುಧಗಳಿಂದುಂಟಾಗಬಹುದಾದ ಅಪಾಯಗಳಿಂದ ಇತರರನ್ನು ರಕ್ಷಿಸಲು, ಅಂದು ಸುಳ್ಳಾಡಲು ತನ್ನ ಒಪ್ಪಿಗೆಯನ್ನು ಕೊಡಬೇಕಾಯಿತು.

ಅನಂತರ ಧರ್ಮರಾಯನು ಗಂಗಾನದಿಯಲ್ಲಿ ಮಿಂದು ನಿತ್ಯಕರ್ಮಗಳನ್ನು ತೀರಿಸಿಕೊಂಡು ದುರ್ಗಾದೇವಿಯನ್ನು ಪ್ರಾರ್ಥಿಸಿ ಸಹೋದರರು ಸಮೇತ ಸಾಷ್ಟಾಂಗಪ್ರಣಾಮವನ್ನು ಮಾಡಲು ದೇವಿಯು ಪ್ರತ್ಯಕ್ಷಳಾಗಿ 'ನೀನು ಶತ್ರುಗಳನ್ನು ಜಯಿಸಿ ತಮ್ಮಂದಿರೊಡನೆ ರಾಜ್ಯವನ್ನನುಭವಿಸು' ಎಂದು ಹರಸಿ ಕಣ್ಮರೆಯಾದಳು. ಇದರಿಂದ ಧರ್ಮರಾ

ಯನ ಪ್ರಕೃತಕಾರ್ಯಕ್ಕೆ ಸ್ವಲ್ಪವೂ ಸಹಾಯವಾಗಲಿಲ್ಲ. ಪುನಃ ದೇವಿಯನ್ನು ಪ್ರಾರ್ಥಿಸಿದನು. ಪುನಃ ಪ್ರತ್ಯಕ್ಷಳಾದಳು. 'ಅಜ್ಞಾತವಾಸವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವಂತೆ ಕರುಣಿಸು' ಎಂದು ದೇವಿಯನ್ನು ಬೇಡಿಕೊಂಡನು. ಆಗ ಧರ್ಮರಾಯನು ತನಗೆ ತಾನೇ ತ್ರಿದಂಡ ಕಾಷಾಯವಸ್ತ್ರ ಕಮಂಡಲುಧರನಾಗಿಯೂ, ಪವಿತ್ರಪಾಣಿಯಾಗಿಯೂ ಶಿಖಾಸಮೇತನಾದ ಯತಿಶ್ರೇಷ್ಠನಾದನು. ದ್ರೌಪದಿ ಭೀಮಾರ್ಜುನ ನಕುಲಸಹದೇವರಿಗೂ ವೇಷಗಳಿಗನುಕೂಲವಾದ ದುಕೂಲಗಳು ದುರ್ಗಾದೇವಿಯ ಪ್ರಸಾದದಿಂದ ಬಂದೊದಗಿದುವು ಎಲ್ಲರೂ ನೂತನವೇಷಧಾರಿಗಳಾಗಿ ನಗರಪ್ರವೇಶಕ್ಕನುವಾದರು.

ಮೊದಲು ಧರ್ಮರಾಯನು ನಗರಪ್ರವೇಶ ಮಾಡಿ ರಾಜನನ್ನು ಕಾಣಿಸಿಕೊಂಡನು. ದಿವ್ಯತೇಜಸ್ಸಿನಿಂದೊಪ್ಪುವ ಯತಿಶ್ರೇಷ್ಠನನ್ನು ನೋಡಿ ದಿಗ್ಭ್ರಾಂತನಾದ ವಿರಾಟನು, 'ನನ್ನ ವಿಶಿಷ್ಟರಾಜ್ಯವನ್ನೂ ನಿನ್ನ ಸ್ವಾಧೀನ ಮಾಡುತ್ತೇನೆ. ನೀನೇ ಮತ್ಸ್ಯರಾಜ್ಯವನ್ನು ಪರಿಪಾಲನೆ ಮಾಡಿಕೊಂಡು ಬಾ' ಎಂದನು. ಆಗ ಧರ್ಮರಾಯನು ಅದಕ್ಕೊಪ್ಪದೆ, ಹಿಂದೆ ನಿಷ್ಕರ್ಷೆ ಮಾಡಿಕೊಂಡಂತೆ, ತನ್ನ ಕಸುಬಿನ ವಿವರವನ್ನು ತಿಳಿಸಲು, ದೊರೆಯು ಅದಕ್ಕೊಪ್ಪಿ, ಅವನನ್ನು ತನ್ನಬಳಿ ಇಟ್ಟುಕೊಂಡನು.

ಅಪರಿಮಿತ ಬಾಹುಬಲದಿಂದ ಕೂಡಿರುವ ಭೀಮಸೇನನು ಶಾಕಗಳನ್ನು ಕತ್ತರಿಸುವುದಕ್ಕೆ ಸಾಧನವಾದ ಒರೆ ಇಲ್ಲದ ಒಂದು ಕಡುಗತ್ತಿ ಶುಂಠಿ ಹಸಿಶುಂಠಿ ಕಠಿಣವಾದವುಗಳನ್ನು ಮೃದು ಮಾಡುವ ಸಿಪ್ಪೆ ಹುಲ್ಲು ಇವೆಲ್ಲವನ್ನೂ ಹಗ್ಗದಿಂದ ಮಾಡಿದ ಕಲ್ಲಿಯಲ್ಲಿಟ್ಟುಕೊಂಡು, ಖಡ್ಗ ಧನುರ್ಬಾಣಗಳನ್ನು ಧರಿಸಿಕೊಂಬುವ ಕೈಯಲ್ಲಿ ಸವುಟನ್ನೂ ಸಟ್ಟುಗವನ್ನೂ ಕಡೆಗೋಲನ್ನೂ ಹಿಡಿದುಕೊಂಡು, ಇನ್ನೊಂದು ಕೈಯಲ್ಲಿ ಕರಿಯುವುದಕ್ಕೆ ಯೋಗ್ಯವಾದ ಎಣ್ಣೆಯ ಬಾಣಲೆಯನ್ನೂ

ಸಾಸುವೆ ಮೆಂತ್ಯ ಜೀರಿಗೆ ಇಂಗು ಮೊದಲಾದ ಮುಸ್ತೈದುಗಳಿಂದ ತುಂಬಿದ ಚರ್ಮದ ಬತ್ತಿಗೆಯನ್ನೂ ಹಿಡಿದುಕೊಂಡು, ಮಲಿನವಸ್ತ್ರವನ್ನುಟ್ಟು ಪಾಕಶಾಲೆಯ ಬಳಿ ವಿರಾಟನನ್ನು ಕಾಣಿಸಿಕೊಂಡನು. ಹೊರಗಿನ ವೇಷವು ನಿಜಸ್ವರೂಪವನ್ನೆಂದಿಗೂ ಮುಚ್ಚಲಾರದು. ವಿರಾಟನು ಭೀಮಸೇನನನ್ನು ನಾಲ್ಕಾರು ಸಲ ಮೇಲೂ ಕೆಳಗೂ ನೋಡಿ, ಇವನು ಕ್ಷತ್ರಿಯಕುಲೋತ್ಪನ್ನನೆಂದೂಹಿಸಿ, 'ನೀನಾರು?' ಎಂದನು. 'ಧರ್ಮರಾಯನಲ್ಲಿ ಸೇವೆ ಮಾಡಿಕೊಂಡು ಅವನ ಮೆಚ್ಚಿಕೆಗೆ ಪಾತ್ರನಾಗಿದ್ದ ವಲಲನೇ ನಾನು' ಎಂದು ಭೀಮನು ನುಡಿದನು. ದೊರೆಯ ಸಂಶಯವು ಹೋಗಲೇ ಇಲ್ಲ. ಪರಿಚಾರಕನಾಗಿ ಪಚ್ಚಡಿ ಕಜ್ಜಾಯ ಕಡುಬು ಚಟ್ನಿ ಬಜ್ಜಿ ಸೀಕರಣೆ ತೊವ್ವೆ ಇವುಗಳನ್ನು ಮಾಡಿಕೊಂಡಿದ್ದೆನೆಂದು ಭೀಮಸೇನನು ಹೇಳಿದ ಮಾತ್ರದಿಂದಲೆ ಆ ಮಾತಿನಲ್ಲಿ ನಂಬಿಕೆ ಬಂದೀತೆ! ಆಗ ವಿರಾಟನು 'ನಿನ್ನನ್ನು ನೋಡಿದರೆ ಸಾಮಾನ್ಯನಂತೆ ಕಾಣಿಸುವುದಿಲ್ಲ. ಸೇನಾಧಿಪತ್ಯವನ್ನು ಕೊಡುತ್ತೇನೆ; ಸ್ವೀಕರಿಸು' ಎಂದನು. ಆಗ ಭೀಮನು ಅದು ನನ್ನ ಕೆಲಸವಲ್ಲ. ನನ್ನ ಕಸುಬನ್ನು ನಾನು ಮಾಡಲುಳ್ಳವನು. ಪಾಂಡವರಿಗೆ ಅಜ್ಞಾತವಾಸ ಪ್ರಾಪ್ತವಾದುದುದರಿಂದ ನಾನು ಈ ಒಂದು ವರ್ಷವನ್ನು ನಿಮ್ಮ ಸೇವೆಯಲ್ಲಿ ಕಳೆಯಬೇಕೆಂದಿರುವೆನು. ಇದೊಂದು ವಿನಾ ಮತ್ತೆ ಯಾವ ವೃತ್ತಿಯನ್ನೂ ಮಾಡಲಾರೆನು. ನಿಮಗೆ ಇಷ್ಟವಿದ್ದಲ್ಲಿ ಆಗಬಹುದು. ಇಲ್ಲವಾದರೆ ಮತ್ತೆಲ್ಲಿಗಾದರೂ ಹೋಗಲುಳ್ಳವನು' ಎಂದನು. ಆಗ ಮತ್ಸ್ಯರಾಯನು 'ನಿನ್ನ ಮನಬಂದಂತೆ ಇರು' ಎಂದು ಹೇಳಿ, ಅವನನ್ನು ಪಾಕಶಾಲೆಯ ಅಧ್ಯಕ್ಷನನ್ನಾಗಿ ಮಾಡಿ ಹೊರಟುಹೋದನು.

ಕಪ್ಪಾಗಿ ಸೂಕ್ಷ್ಮವಾಗಿರುವ ಎರಡು ವಸ್ತ್ರಗಳನ್ನೂ ಶಂಖದ ಓಲೆಗಳನ್ನೂ ಧರಿಸಿ, ಸ್ತ್ರೀವೇಷದಿಂದ ಉದ್ದವಾದ ಮುಂಡೆಕೂದಲುಗಳನ್ನು ಜಡೆಹಾಕಿಕೊಂಡು, ನಪುಂಸಕ ರೂಪದಿಂದ, ಸಭಾಮಂಟಪಾಭಿ

ಮುಖವಾಗಿ ಬರುತ್ತಿರುವ ಮಹಾವ್ಯಕ್ತಿಯನ್ನು, ವಿರಾಟನು ಕಂಡು, ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಭೀಮಸೇನನನ್ನು ನೋಡಿದಾಗ ಹೇಗೆ ಸಂಶಯ ಉತ್ಪನ್ನವಾಯಿತೋ ಹಾಗೆಯೇ ನಪುಂಸಕ ರೂಪದಲ್ಲಿದ್ದ ಆ ಮಹಾವ್ಯಕ್ತಿಯನ್ನು ನೋಡಿದಾಗ ಆ ಬಗೆಯ ಸಂಶಯವು ದೊರೆಯ ಮನಸ್ಸಿನಲ್ಲಿ ಉದಯಿಸಿತು. 'ಇಂಥ ವ್ಯಕ್ತಿಯು ನಪುಂಸಕ ಹೇಗಾದನು?' ಎಂದು ಎಲ್ಲರೂ ಆಶ್ಚರ್ಯಯುಕ್ತರಾಗಿರಲು, ಅರ್ಜುನನು ದೊರೆಯ ಸಮೀಪವನ್ನೈದಿ, ಮರ್ಯಾದೆಯಿಂದ ನಮಸ್ಕಾರಮಾಡಿ, 'ಭರತವಿದ್ಯೆಯಲ್ಲಿ ಸಮರ್ಥಳಾಗಿ, ಬೃಹನ್ನಳೆ ಎಂಬ ನಾಮದಿಂದ ಪ್ರಸಿದ್ಧಳಾಗಿರುವೆನು. ನೃತ್ಯ ಗೀತವಾದ್ಯಗಳಲ್ಲಿ ಯಾರನ್ನಾದರೂ ಸುಶಿಕ್ಷಿತರನ್ನಾಗಿ ಮಾಡಬಲ್ಲೆನು. ಪರಿಮಳಯುಕ್ತವಾದ ಎಣ್ಣೆಯೊತ್ತಿ ನೀರೆರೆಯುವುದಕ್ಕೂ, ಜಡೆ ಹಾಕುವುದಕ್ಕೂ, ಹೂ ಮುಡಿಸುವುದಕ್ಕೂ, ಅಲಂಕಾರ ಮಾಡುವುದಕ್ಕೂ, ಹೂ ಕಟ್ಟುವುದಕ್ಕೂ ನಿಲುಗನ್ನಡಿಗಳಿಗೆ ಮಿನುಗು ಹಾಕುವುದಕ್ಕೂ, ನನಗೆ ಚೆನ್ನಾಗಿ ಬರುವುದು. ಇವು ನನ್ನಿಂದಾಗುವ ಹಾಗೆ ಇತರ ಸ್ತ್ರೀಯರುಗಳಿಂದ ಆಗಲಾರವು' ಎಂದನು. ಆಗ ವಿರಾಟನು ನೀನು ಧನುರ್ಧಾರಿಯಾಗಿ ವಿರಾಟನಗರಿಯನ್ನು ರಕ್ಷಿಸಲು ಸಮರ್ಥನು. ಆ ಕೆಲಸ ಮಾಡು. ಇಗೋ ಇಲ್ಲಿ ನನ್ನ ಧನುಸ್ಸಿದೆ' ಎಂದು ಹೇಳಿ ಅವನ ಮುಂದೆ ತನ್ನ ಧನುಸ್ಸನ್ನು ತಂದಿರಿಸುವಂತೆ ಆಜ್ಞೆ ಮಾಡಿದನು.

ಆಗ ಅರ್ಜುನನು 'ಅದು ನನ್ನ ಕೆಲಸವಲ್ಲ, ಅಂತಃಪುರದ ಕನ್ಯಕಾಜನರಿಗೆ ನೃತ್ಯಗಾನಗಳನ್ನು ಅಭ್ಯಾಸ ಮಾಡಿಸಿ, ನನ್ನಲ್ಲಿರುವ ಭರತವಿದ್ಯೆಯ ಕೌಶಲವನ್ನು ಮೆರೆಯಿಸುವೆನು. ಅದಕ್ಕಪ್ಪಣೆಯಾಗಬೇಕು' ಎಂದನು. ಆಗ ವಿರಾಟನು ಹಾಗೆಯೇ ಆಗಲೆಂದು ಹೇಳಿ ಉತ್ತರೆಯನ್ನು ಕರೆಯಿಸಿ ಬೃಹನ್ನಳೆಯನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗುವಂತೆ ಕಟ್ಟುಮಾಡಿದನು. ಉತ್ತರೆಯು ಬಹಳ ಆನಂದದಿಂದ ಬೃಹನ್ನಳೆಯನ್ನು ಅಂತಃಪುರಕ್ಕೆ ಕರೆದುಕೊಂಡು ಹೋದಳು.

ಹೀಗೆಯೇ ಒಂದು ದಿನ ವಿರಾಟನು ಕುದುರೆಗಳನ್ನು ಪರೀಕ್ಷೆ ಮಾಡುತ್ತಿರುವ ಸಮಯದಲ್ಲಿ ನಕುಲನು ದೊರೆಯನ್ನು ಕಾಣಿಸಿಕೊಂಡನು. ಅರಸಿಗೆ ನಮಸ್ಕಾರವನ್ನು ಮಾಡಿ, 'ಅಶ್ವವಿದ್ಯಾವಿಶಾರದನಾದ ನಾನು ಜೀವನಾರ್ಥವಾಗಿ ತಮ್ಮಲ್ಲಿ ಬಂದಿದ್ದೇನೆ. ಕುದುರೆ ಲಾಯದ ಅಧಿಕಾರವನ್ನು ಕೊಟ್ಟು ಕಾಪಾಡಬೇಕು. ನಾನು ದುಷ್ಟಾಶ್ವಗಳ ಮನಸ್ಸನ್ನು ತಿಳಿಯಬಲ್ಲೆನು. ಕುದುರೆಗಳಿಗೆ ಪ್ರಾಪ್ತವಾಗುವ ರೋಗಗಳನ್ನು ತಿಳಿದು ಚಿಕಿತ್ಸೆ ಮಾಡಬಲ್ಲೆನು. ನಾನು ಧರ್ಮರಾಯನ ಕುದುರೆ ಲಾಯದ ಪಾರುಪತ್ಯವನ್ನು ಮಾಡುತ್ತ, ದಾಮಗ್ರಂಥಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿ, ಆತನಿಂದ ಬಹುಮಾನವನ್ನು ಪಡೆದು ಇದ್ದೆನು' ಎಂದು ನುಡಿದನು.

ಆಗ ವಿರಾಟನು ದಾಮಗ್ರಂಥಿಯನ್ನು ನೋಡಿ ಅನುಮಾನಿತನಾಗಿ ನೀನು ಏಕೆ ನನ್ನ ಸಾರಥಿಯಾಗಿರಬಾರದು? ಎಂದನು. ಆಗ ನಕುಲನು 'ಅಷ್ಟು ಯೋಗ್ಯತೆ ನನಗೆಲ್ಲಿ ಬಂತು? ಇಲ್ಲೇನಾದರೂ ಒಂದು ಕೆಲಸ ಅಪ್ಪಣೆಯಾಗಬೇಕು' ಎಂದನು. ದೊರೆಯು ಸಂತೋಷದಿಂದ ಅವನನ್ನು ಕುದುರೆ ಲಾಯಕ್ಕೆ ಯಜಮಾನನನ್ನಾಗಿ ಮಾಡಿ 'ನಿನ್ನ ಇಷ್ಟಾನುಸಾರ ನಡೆ' ಎಂದು ಹೇಳಿ, ಹೊರಟು ಹೋದನು.

ಇತ್ತ ಸಹದೇವನು ದೊರೆಯನ್ನು ಕಾಣಿಸಿಕೊಳ್ಳಲು ಸಮಯವನ್ನು ನಿರೀಕ್ಷಿಸುತ್ತಿದ್ದನು. ಒಂದು ದಿನ ದೊರೆಯು ಗೋಶಾಲೆಯನ್ನು ಪರೀಕ್ಷಿಸುತ್ತಿರುವಾಗ ಸಹದೇವನು ಗೋವುಗಳ ಕೂದಲುಗಳಿಂದ ಮಾಡಲ್ಪಟ್ಟ ಹಣೆ ಹಗ್ಗವನ್ನೂ, ಹುರಿ ಹಗ್ಗಗಳನ್ನೂ, ಮುಳ್ಳಿನ ಕೋಲನ್ನೂ, ಹಾಲು ಕರೆಯುವ ಪಾತ್ರೆಯನ್ನೂ, ಬೆನ್ನಿನಲ್ಲಿಯೂ ಭುಜಗಳಲ್ಲಿಯೂ ತಲೆಯಲ್ಲಿಯೂ ಇಟ್ಟುಕೊಂಡು, ಅತ್ಯುನ್ನತವಾದ ಒಂದು ಬಿದಿರು ಕೋಲನ್ನು ಕೈಯಲ್ಲಿ ಹಿಡಿದುಕೊಂಡು, ದೊರೆಯನ್ನು ಕಾಣಿಸಿಕೊಂಡನು. ದೂರದಿಂದಲೆ ನಮಸ್ಕಾರ ಮಾಡಿ, ದೊರೆಯ ಸಮೀಪವನ್ನೈದಿ,

' ನಾನು ಗೋಪಾಲಕನು ; ನಿನ್ನ ಗೋಸಮೂಹಕ್ಕೆ ಚೋರವ್ಯಾಘ್ರಾದಿಗಳ ಭಯವಿಲ್ಲದಂತೆ ಮಾಡಿ, ಜಾಗರೂಕತೆಯಿಂದ ನೋಡಿಕೊಳ್ಳುವೆನು. ರೋಗಗಳನ್ನು ಚಿಕಿತ್ಸೆಗಳಿಂದ ಹೋಗಲಾಡಿಸಬಲ್ಲೆನು. ಹಸುಗಳು ಅಪರಿಮಿತವಾದ ಹಾಲು ಕರೆಯುವಂತೆ ಮಾಡಬಲ್ಲೆನು ' ಎಂದನು. ದೊರೆಯು ಅನುಮಾನದಿಂದ ಸಹದೇವನನ್ನು ಎವೆಯಿಕ್ಕದೆ ಸ್ವಲ್ಪ ಕಾಲ ನೋಡಿ ' ನೀನು ಕೌರವಶ್ರೇಷ್ಠನಾಗಿ ಕಾಣುವಿ. ನನ್ನ ಮಂತ್ರಾಲೋಚನಾ ಸಭೆಯಲ್ಲಿ ನೀನೊಬ್ಬ ಸಚಿವನಾಗು ' ಎಂದನು. ಆಗ ಸಹದೇವನು ' ಹಸು ಕಾಯುವುದು ನಮ್ಮ ಮನೆಗೆ ಬಂದುದು. ನಾನು ಸಚಿವನಾಗುವದೆಂತು ?' ಪಾಂಡವರ ಹಸುಗಳನ್ನು ನೋಡಿಕೊಂಡು, ತಂತ್ರಿಪಾಲನೆಂಬ ಹೆಸರಿನಿಂದ ಪ್ರಸಿದ್ಧನಾಗಿ, ನನ್ನ ಜೀವನಯಾತ್ರೆಯನ್ನು ಕಳೆಯುತ್ತಿದ್ದೆನು. ಈಗ ಅವರಿಗೆ ಅಜ್ಞಾತವಾಸ ಪ್ರಾಪ್ತವಾದುದರಿಂದ ನಿನ್ನಲ್ಲಿಗೆ ಬಂದೆನು. ನನ್ನಲ್ಲಿ ದಯಮಾಡಿ, ಈ ಗೋಶಾಲೆಯಲ್ಲಿ ಯಾವುದಾದರೊಂದು ಕೆಲಸವನ್ನು ಕರುಣಿಸು ' ಎಂದನು. ಆಗ ವಿರಾಟನು ಅವನನ್ನು ಬೇರೆ ಹೋಗಲು ಬಿಡಲಾರದೆ ಗೋಶಾಲಾಧ್ಯಕ್ಷನನ್ನಾಗಿ ಮಾಡಿ ತನ್ನರಮನೆಗೆ ಹೋದನು.

ಕೊನೆಗೆ ದ್ರೌಪದಿಯು ಮಾಸಿದ ವಸ್ತ್ರಗಳನ್ನುಟ್ಟು, ನಾರು ಸೀರೆಯನ್ನು ಹೊದ್ದುಕೊಂಡು, ಕಪ್ಪಾದ ಮಂಡೆ ಕೂದಲುಗಳನ್ನು ಎಡಬಲಪಾರ್ಶ್ವಗಳಲ್ಲಿ ನೇತಾಡುವ ಹಾಗೆ ಮಾಡಿಕೊಂಡು, ಸೈರಂಧ್ರೀವೇಷವನ್ನು ತಾಳಿ, ದೈನ್ಯವನ್ನೈದಿ, ಕಳಂಕ ರಹಿತವಾಗಿರುವ ಅಂತಃಕರಣದಿಂದ, ವಿರಾಟನಗರದ ರಾಜಮಾರ್ಗದಲ್ಲಿ ಹೊರಟಳು. ಆಗ ಆ ನಗರವಾಸಿಗಳು ದ್ರೌಪದಿಯ ನೇತ್ರಾನಂದಕರವಾದ ರೂಪವನ್ನು ನೋಡಿ, ಸಂತೋಷಪಟ್ಟು, ಸಂಭ್ರಮದಿಂದ ಸುತ್ತ ಮುತ್ತಿಕೊಂಡು, ' ನೀನಾರು ; ಎಲ್ಲಿಂದ ಬಂದೆ ?' ಎಂದು ಕೇಳಲು, ದ್ರೌಪದಿಯು ಅವರನ್ನು ಕುರಿತು, ' ನಾನು ಸೈರಂಧ್ರೀಧರ್ಮದಿಂದ ಸಂಚರಿಸುವವಳು. ಮರ್ಯಾದೆ

ಯನ್ನು ತಪ್ಪದೆ ಪೋಷಿಸುವ ನಾರೀಶಿರೋಮಣಿಯು ಸಮೀಪವನ್ನು ಸೇರಿ, ಉಚಿತವಾದ ವ್ಯಾಪಾರದಿಂದ ಸೇವೆಯನ್ನು ಮಾಡುವುದಕ್ಕೆ ಬಂದಿರುವೆನು, ಎಂದಳು. ' ಇಂಥಾ ಯೌವನ ರೂಪವತಿಯು ಈ ಕೆಲಸಕ್ಕೆ ಬರುವುದುಂಟೆ ? ಎಂದು ಎಲ್ಲರೂ ಚಮತ್ಕೃತರಾಗಿ, ದ್ರೌಪದಿಯನ್ನು ಸುತ್ತು ಕಟ್ಟಿಕೊಂಡು, ನೋಡುತ್ತಿದ್ದರು. ಆಗ ಉಪ್ಪರಿಗೆಯ ಮೇಲೆ ಕೆಳದಿಯರೊಡನೆ ಇದ್ದ ವಿರಾಟನ ಪಟ್ಟಮಹಿಷಿಯಾದ ಸುಧೇಷ್ಣೆಯ ದೃಷ್ಟಿಯು ಅಕಸ್ಮಾತ್ತಾಗಿ ದ್ರೌಪದಿಯ ಕಡೆ ಬಿತ್ತು. ಆಗ ಅವಳು ಜನಸಂದಣಿಯಲ್ಲಿ ಸಿಕ್ಕಿ ಬಿದ್ದಿರುವ, ಏಕ ವಸ್ತ್ರಧಾರಿಣಿಯಾದ ಆ ಹೆಂಗಸನ್ನು ಕರೆದುಕೊಂಡು ಬರುವಂತೆ, ತನ್ನ ಕೆಳದಿಯರಿಗೆ ಆಜ್ಞಾಪಿಸಿದಳು. ಅವಳಲ್ಲಿ ಒಬ್ಬಳು. ಬೇಗನೆ ಬಂದು, ದ್ರೌಪದಿಯಿದ್ದ ಸ್ಥಳವನ್ನು ಸೇರಿ, ಜನರನ್ನು ದೂರಮಾಡಿ, ಅವಳನ್ನು ಅಂತಃಪುರಕ್ಕೆ ಕರೆದುಕೊಂಡು ಹೋದಳು. ದ್ರೌಪದಿಯು ರಾಣಿಯ ಸಮೀಪವನ್ನೈದಿ, ನಮಸ್ಕಾರವನ್ನು ಮಾಡಿ, ' ನಾನು ವನದಲ್ಲಿ ಹುಟ್ಟಿ, ಕಂದಮೂಲಗಳನ್ನು ಭಕ್ಷಿಸಿ, ಜೀವಿಸುತ್ತಿರುವ ಸೈರಂಧ್ರಿಯು. ಅನ್ನವಸ್ತ್ರಗಳನ್ನು ಕೊಟ್ಟು, ಮರ್ಯಾದೆಯಿಂದ ಕಾಪಾಡುವವರಿಗೆ, ಶುಶ್ರೂಷೆಯನ್ನು ಮಾಡಿಕೊಂಡು ಇರತಕ್ಕವಳು. ಮಂಡೆಯ ಸಿಕ್ಕನ್ನು ಬಿಡಿಸಿ ತುರುಬನ್ನಿಕ್ಕುವುದಕ್ಕೂ, ನವರತ್ನವನ್ನು ಚಿತ್ರವಿಚಿತ್ರವಾಗಿ ಪೋಣಿಸುವುದಕ್ಕೂ, ತಾವರೆ ನೈದಿಲೆ ಮಲ್ಲಿಗೆ ಮುಂತಾದ ಪುಷ್ಪಗಳನ್ನು ಆಶ್ಚರ್ಯಕರವಾಗಿ ಮಾಲೆಗಳಾಗುವ ಹಾಗೆ ಕಟ್ಟುವದಕ್ಕೂ, ಜಾಜಿ ಮಲ್ಲಿಗೆ ಇರುವಂತಿಗೆ ಹೂವುಗಳಿಂದಲೂ ಬಗೆಬಗೆಯ ಪುಷ್ಪದ ಗೊಂಚಲುಗಳಿಂದಲೂ ಕರ್ಣಾವತಂಸಗಳನ್ನು ಸಮನಿಸುವುದಕ್ಕೂ, ರಕ್ತಚಂದನ ಅಗರು ಕಸ್ತೂರಿ ಕುಂಕುಮದ ಹೂವು ಮೊದಲಾದ ಪರಿಮಳ ದ್ರವ್ಯಗಳನ್ನು ಕೂಡಿಸಿ ತಿಲಕಗಳನ್ನು ತಿದ್ದುವುದಕ್ಕೂ, ಮಕರಿಕಾಪತ್ರಗಳನ್ನು ರಚಿಸುವುದಕ್ಕೂ. ಸಮರ್ಥಳಾಗಿ ಕೃಷ್ಣನಿಗೆ ಪ್ರಾಣಕಾಂತೆಯಾದ ಸತ್ಯಭಾಮೆಗೂ, ಆಮೇಲೆ

ಪಾಂಡವರಿಗೆ ಪತ್ನಿಯಾದ ದ್ರೌಪದಿಗೂ, ಸಂತೋಷವಾಗುವ ಹಾಗೆ, ಮಾಲಿನಿ ಎಂಬ ಹೆಸರಿನಿಂದ ಸೇವೆಯನ್ನು ಮಾಡಿ, ಅವರಿಂದ ಸನ್ಮಾನ ಪಡೆದಿರುವೆನು. ಈಗ ಪಾಂಡವರಿಗೆ ಅಜ್ಞಾತವಾಸ ಪ್ರಾಪ್ತವಾದುದರಿಂದ, ನಿರಾಲಂಬಳಾಗಿ ನಿನ್ನ ಸಮೀಪದಲ್ಲಿರಬೇಕೆಂದು, ಬಂದಿರುವೆನು, ಎಂದಳು.

ಆಗ ಸುಧೇಷ್ಣೆಯು ಅವಳ ರೂಪಲಾವಣ್ಯಗಳನ್ನು ನೋಡಿ ಅವಳನ್ನಿಟ್ಟುಕೊಳ್ಳಲು ಬಹಳ ಹೆದರಿದಳು. ಅವಳ ರೂಪಕ್ಕೆ ತನ್ನ ಗಂಡನ ಮನಸ್ಸು ಎಲ್ಲಿ ಬೇರೆಯಾಗುವದೋ ಎಂಬ ಭೀತಿಯು, ಅಂದು ಅವಳಲ್ಲಿ ಹೊಳೆಯಿತು. ಮರದ ಮೇಲೆ ಹತ್ತಿ ಬುಡಕಡಿಯುವ ಮೂರ್ಖನಂತಾಗುವೆನೆಂದು ಯೋಚಿಸಿ ತನ್ನ ಅಂತಃಪುರದಲ್ಲಿಟ್ಟುಕೊಳ್ಳಲಾಗುವುದಿಲ್ಲವೆಂದು ಹೇಳಿ ಬಿಟ್ಟಳು.

ರಾಣಿಯ ಮನಸ್ಸಿನ ಸಂಶಯವನ್ನರಿತು, ದ್ರೌಪದಿಯು 'ನನ್ನನ್ನು ಯಾವ ಗಂಡಸೂ ಮುಟ್ಟಲಾರನು. ಧರ್ಮ, ಅನಿಲ, ಇಂದ್ರ, ಅಶ್ವಿನೀ ದೇವತೆಗಳೇ ನನ್ನ ಮಾವಂದಿರು. ನನ್ನನ್ನು ಕಣ್ಣೆತ್ತಿ ನೋಡಲು ಯಾರೂ ಸಮರ್ಥರಾಗಲಾರರು. ಹಾಗೆ ಕೆಟ್ಟಭಾವನೆಯಿಂದ ಯಾರಾದರೂ ನೋಡಿದರೆ ಅವರು ಖಂಡಿತ ಬದುಕುವ ಹಾಗಿಲ್ಲ. ನೀನು ಈ ವಿಷಯದಲ್ಲಿ ಗಾಬರಿಪಡಬೇಕಾಗಿಲ್ಲ. ಪಾದಪ್ರಕ್ಷಾಳನ ಉಚ್ಛಿಷ್ಟಾನ್ನ ಭೋಜನ ಮೊದಲಾದ ನೀಚಕೃತ್ಯಗಳಿಗೆ ನಿಯೋಗಿಸದೆ ಮರ್ಯಾದೆಯಿಂದ ಸಮೀಪದಲ್ಲಿರಿಸಿಕೊಂಡರೆ ಅವರಿಗೆ ನನ್ನ ಪ್ರಿಯರಾದ ಗಂಧರ್ವರೈವರೂ ಸಂತೋಷವನ್ನುಂಟುಮಾಡುವರು' ಎಂದಳು. ಆಗ ಸುಧೇಷ್ಣೆಯು ಹಿಂದೂ ಮುಂದೂ ಬಹಳ ನೋಡಿ, ಕೊನೆಗೆ, ಅವಳನ್ನು ತನ್ನ ಸಮೀಪದಲ್ಲಿರಿಸಿಕೊಳ್ಳಲು ಒಪ್ಪಿದಳು.

ಹೀಗೆ ಪಾಂಡವರು ಪಾಂಚಾಲಿಯೊಡನೆ, ಯಮನ ವರಪ್ರಸಾದದಿಂದಲೂ, ದುರ್ಗಾದೇವಿಯ ಕೃಪಾಕಟಾಕ್ಷದಿಂದಲೂ, ಧೌಮ್ಯರ

ಆಶೀರ್ವಾದ ಬಲದಿಂದಲೂ, ಯಾರಿಗೂ ಅರಿಯದಂತೆ ವಿರಾಟನ ಅರಮನೆಯನ್ನು ಸೇರಿ, ಎಲ್ಲರ ಮನಸ್ಸನ್ನೂ ಸಂತೋಷಪಡಿಸುತ್ತ, ಬೂದಿಮುಚ್ಚಿದ ಕೆಂಡದ ಹಾಗೆ, ತಮ್ಮ ಜೀವನಯಾತ್ರೆಯನ್ನು ಸಾಗಿಸುತ್ತಿದ್ದರು. ಹೀಗಿರಲು ದೊರೆಯ ಮೆಚ್ಚಿಗೆಯನ್ನು ಪಡೆಯಲು ಭೀಮಸೇನನಿಗೆ ಒಂದು ಜಟ್ಟಿಕಾಳಗದ ಸನ್ನಿವೇಶವು ದೊರಕಿತು. ಒಂದು ದಿನ ಒಬ್ಬ ಜಟ್ಟಿಯು ತನ್ನನ್ನು ಗೆಲ್ಲುವವರೇ ಇಲ್ಲವೆಂದು ಬಹಳವಾಗಿ ವಿರಾಟರಾಯನ ಮುಂದೆ ಪಟಾಟೋಪಮಾಡಿದನು. ಕಂಕನಿಂದ ಪ್ರೇರಿತನಾದ ವಿರಾಟನು ವಲಲನನ್ನು ಅವನ ಮೇಲೆ ಕುಸ್ತಿಗೆ ಬಿಟ್ಟನು. ಭೀಮಸೇನನು ಲೀಲಾಮಾತ್ರದಿಂದ ಅವನನ್ನು ಹೊಸಕಿಹಾಕಿಬಿಟ್ಟನು. ವಿರಾಟನು ಆನಂದಭರಿತನಾಗಿ ವಲಲನಿಗೆ ಬಹುವಾಗಿ ಬಹುಮಾನಮಾಡಿದನು.



|| ಶ್ರೀ ||

### ಮೂರನೆಯ ಅಧ್ಯಾಯ

# ದ್ರೌಪದಿಯ ಕೋಪಾಗ್ನಿಗೆ ಆಹುತಿ

ಹೀಗೆ ಕೌರವರ ದೃಷ್ಟಿಗೆ ತಾಕದೆ, ಆನಂದದಿಂದ ವಿರಾಟನಗರಿಯಲ್ಲಿ ತಮ್ಮ ಜೀವನಯಾತ್ರೆಯನ್ನು ಸಾಗಿಸಿಕೊಂಡು ಹೋಗುತ್ತಿರುವಾಗ, ಒಂದು ದಿವಸ ಸುಧೇಷ್ಣೆಯ ಸಹೋದರನಾದ ಮತ್ತು ವಿರಾಟನ ಮುಖ್ಯ ಸೇನಾಪತಿಯಾದ ಕೀಚಕನು ದ್ರೌಪದಿಯನ್ನು ಅಂತಃಪುರದಲ್ಲಿ ಕಂಡನು. ನೋಡಿದೊಡನೆಯೇ ಮೋಹಪರವಶನಾದನು. ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆಯು ಅಂಕುರಿಸಿತು. ಆಹಾರ ನಿದ್ರೆಗಳು ಬಿಟ್ಟು ಹೋದುವು, 'ಸೈರಂಧ್ರಿಯನ್ನು ವಶಮಾಡಿಕೊಳ್ಳುವುದೆಂತು?' ಎಂಬ ಆಲೋಚನೆಯು ಅವನ ಮನಸ್ಸನ್ನೆಲ್ಲ ಆವರಿಸಿಬಿಟ್ಟಿತು. ಮದನತಾಪವನ್ನು ತಾಳಲಾರದವನಾಗಿ ಒಂದು ದಿನ ಅವಳೊಬ್ಬಳೆ ಇರುವಾಗ ಅಂತಃಪುರವನ್ನು ಪ್ರವೇಶಿಸಿ. 'ಎಲೌ ಸುಂದರಿಯೆ, ನೀನಾರು? ನಿನ್ನ ರೂಪಲಾವಣ್ಯಗಳಿಗೆ ಮೆಚ್ಚಿರುವೆನು. ವಸಂತಕಾಲದಲ್ಲಿ ಪುಷ್ಪಗಳ ವಾಸನೆಯಿಂದ ಪುಷ್ಪಗಳನ್ನು ಹೊಕ್ಕು ಸಿಕ್ಕಿಕೊಂಡ ತುಂಬಿಗಳಂತೆ ಆಗಿರುವೆನು. ನೀನು ನನ್ನನ್ನು ಕರುಣಿಸು. ಈ ಸೇವಾವೃತ್ತಿಯನ್ನು ಬಿಟ್ಟು, ನನ್ನ ಪ್ರಾಣಕಾಂತೆಯಾಗಿ ನನ್ನ ಅಂತಃಪುರವನ್ನು ಪ್ರಕಾಶಗೊಳಿಸು. ನನ್ನಿಂದ ಸಂಪಾದಿಸಲ್ಪಟ್ಟ ಸಕಲ ಭೋಗ್ಯವಸ್ತುಗಳನ್ನು ಅನುಭವಿಸಿ ತಣಿ. ನಿನ್ನ ದಾಸಾನುದಾಸನಾಗಿರುವೆನು. ನೀನು ನಿರಾಕರಿಸಿದುದೇ ಆದರೆ, ಈ ಶರೀರವನ್ನು ಧರಿಸಿರಲಾರೆನು. ನನ್ನ

ಪುತ್ರಕಳತ್ರಗಳೂ, ಧನಗಳೂ, ಕೀರ್ತಿಸುಕೃತಗಳೂ, ನಿನ್ನ ಅಧೀನವಾಗಿವೆ. ದುಃಖಸಮುದ್ರದಲ್ಲಿ ಮುಳುಗಿ ತೇಲಾಡುತ್ತಿರುವ ನನ್ನನ್ನು ಎತ್ತಿ ರಕ್ಷಿಸು. ರಕ್ಷಿಸು.' ಎಂದು ಬಹುವಾಗಿ ಬೇಡಿಕೊಂಡನು.

ಆಗ ಸೈರಂಧ್ರಿಯು ಕೋಪಕ್ಕೀಡಾಗದೆ, ತಾಳ್ಮೆಯಿಂದ ಉಚಿತ ರೀತಿಯಲ್ಲಿ, ಉಪಾಧ್ಯಾಯನು ಶಿಷ್ಯನಿಗೆ ಬುದ್ಧಿಗಲಿಸುವಂತೆ, ಕೆಲವು ಅಮೂಲ್ಯವಾದ ತತ್ತ್ವಗಳನ್ನುಪದೇಶಿಸಿ, ಅಗಾಧವಾದ ಉದಕದಲ್ಲಿ ಮುಳುಗಿ ದಡವನ್ನು ಸೇರಲು ಎಣಿಸಿದ ಬಾಲಸಂತೆಯೂ, ಬೆಟ್ಟವನ್ನು ದಾಟುವದಕ್ಕೂ ಎತ್ತುವದಕ್ಕೂ ಎಣಿಸಿದ ಬಲಹೀನನಾದ ಪುರುಷನಂತೆಯೂ, ಅಂತರಿಕ್ಷದಲ್ಲಿರುವ ಚಂದ್ರಬಿಂಬವನ್ನು ಕೈಯಿಂದ ಹಿಡಿದುಕೊಳ್ಳಲು ಯತ್ನಿಸುವ ಅಜ್ಞಾನಿಯಾದ ಪುರುಷನಂತೆಯೂ, ವರ್ತಿಸಬೇಡ; ಹೋಗು, ಚಾಪಲ್ಯದಿಂದ ಏನಾದರೂ ನೀನು ನನ್ನನ್ನು ಕೆಣಕಿದುದೇ ಆದರೆ, ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ ಎಲ್ಲಿ ಹೊಕ್ಕರೂ, ನನ್ನ ಗಂಡಂದಿರು ನಿನ್ನನ್ನು ಬೇರೆ ಜೀವಸಹಿತ ಬಿಡುವುದಿಲ್ಲ. ಮಹಾತ್ಮರಿಗೆ ಹೆಂಡತಿಯಾದ ನನ್ನನ್ನು ಕೆಣಕಿ, ಯಮಪಾಶಕ್ಕೆ ಒಳಗಾಗಬೇಡ. ಹಿಂದಿರುಗು. ಸ್ವಭಾರ್ಯಾಸಕ್ತನಾಗಿ ಸುಖದಿಂದ ಬಾಳು.' ಎಂದಳು.

ಮೋಹಪಾಶದಲ್ಲಿ ಸಿಕ್ಕಿಬಿದ್ದ ಕೀಚಕನಿಗೆ ತತ್ತ್ವೋಪದೇಶವೂ ಸವಿನುಡಿಗಳೂ ಹಿಡಿಯುವುವೇ! ಪ್ರಚಂಡಮಾರುತದಿಂದ ಉಲ್ಲೋಲಕಲ್ಲೋಲವಾಗಿರುವ ಸಮುದ್ರದೋಪಾದಿಯಲ್ಲಿ, ಅವನ ಮನಸ್ಸೆಲ್ಲವೂ ಕದಡಿಹೋಯಿತು. ನಾಚಿಕೆಯು ದೂರವಾಯಿತು. ಸೈರಂಧ್ರಿಯನ್ನು ತನ್ನ ವಶಮಾಡಿಕೊಂಡು, ವಿಷಯಸುಖಗಳನ್ನನುಭವಿಸಬೇಕೆಂಬ ಇಚ್ಛೆಯು ಮಿತಿಮೀರಿತು. ಮುಂದೆ ಮಾಡುವುದೇನು? ಅಕ್ಕನ ಬಳಿ ಹೋಗಿ ತನಗುಂಟಾಗಿರುವ ತಾಪವನ್ನು ಹೇಳಿಕೊಳ್ಳುವುದೊಂದೇ ಬಾಕಿ. 'ತ್ರೈಲೋಕ್ಯಸುಂದರಿಯಾದ ಸೈರಂಧ್ರಿಯು, ಸಂತೋಷದಿಂದ ನನ್ನನ್ನು ಅಂಗೀಕರಿಸದಿದ್ದರೆ, ನನ್ನ ಈ ಶರೀರದಲ್ಲಿ ಪ್ರಾಣಗಳು ನಿಲ್ಲಲಾರವು.' ಎಂದು ನಿಟ್ಟು

ಸಿರುಗಳನ್ನು ಬಿಡುತ್ತ, ಸುಧೇಷ್ಣೆಯ ಸಮೀಪವನ್ನೈದಿದನು. ಆಹಾರ ನಿದ್ರೆಗಳಿಲ್ಲದೆ ಸೊರಗಿರುವ ತಮ್ಮನ ಮುಖವನ್ನು ನೋಡಿ, ಸುಧೇಷ್ಣೆಯು ಭಯಭ್ರಾಂತಳಾದಳು. ಕೀಚಕನು ದುಃಖವನ್ನು ಹೇಳಿಕೊಂಡನು. ಸುಧೇಷ್ಣೆಯು ತಾನೆ ಏನು ಮಾಡಿಯಾಳು? ದ್ರೌಪದಿಯನ್ನು ಕೆಣಕಿದವರು ಬದುಕುವುದಿಲ್ಲವೆಂಬುದು ಸಿದ್ಧಾಂತ. ಆಗ ಅವಳು ತನ್ನ ತಮ್ಮನನ್ನು ಕುರಿತು, 'ಕಾಮುಕನಾಗಿ ಹೀಗೆ ಕಾತರಿಸಬೇಡ. ಅವಳ ಐವರು ಪತಿಯರು ಯಾವಾಗಲೂ ಅವಳನ್ನು ರಕ್ಷಿಸುತ್ತಿರುವರು. ಪಾಪಬುದ್ಧಿಯಿಂದ ಅವಳನ್ನು ಮುಟ್ಟಲು ಶಕ್ಯವಿಲ್ಲ. ನಿನ್ನ ಭಾವನಾದ ವಿರಾಟನು ಮೋಹಪರವಶನಾಗಿ, ಇವಳನ್ನಿಚ್ಛಿಸಲು ನಾನು ಇದೇ ವೃತ್ತಾಂತವನ್ನು ಅವನಿಗೆ ತಿಳುಹಿಸಿದೆನು. ಗಂಧರ್ವರ ದೆಸೆಯಿಂದ ಬರುವ ಪ್ರಾಣಹಾನಿಗೆ ಬೆದರಿ, ಏನೊಂದನ್ನೂ ಎಣಿಸದೆ, ಸುಮ್ಮನಿದ್ದಾನೆ. ನೀನು ಆಕೆಯನ್ನು ಬಯಸಿದರೆ ಗಂಧರ್ವರಿಂದ ನಿನಗೆ ಕೇಡು ತಪ್ಪದು. ರೋಗಿಗಳಿಗೆ ಔಷಧವು ಹೇಗೆ ರುಚಿಸುವುದಿಲ್ಲವೊ, ಹಾಗೆ ನನ್ನ ಹಿತೋಕ್ತಿಗಳು, ಕಾಮನ ಸಾಯಕಗಳಿಂದ ನೊಂದಿರುವ ನಿನ್ನ ಕರ್ಣಗಳಿಗೆ, ಬಹಳ ಕಟುವಾಗಿ ಕಾಣುವುವು. ದುಷ್ಕಾರ್ಯವನ್ನಾದರೂ ಮಾಡಿ, ಕಾಮನ ಬೇಗೆಯಿಂದ ತಪ್ಪಿಸಿಕೊಳ್ಳಬೇಕೆಂದು ಯೋಚಿಸಿ, ನನ್ನ ಮಾತುಗಳಿಗೆ ಕಿವಿಗೊಡದೆ, ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡಲಾರದೆ ಹೋದೆಯಾದರೆ, ನಿನಗೆ ಕೇಡು ತಪ್ಪಲಾರದು. ಈ ಕಾರ್ಯವು ಬೇಡ; ಬೇಡ; ಹೋಗು' ಎಂದಳು. ಆಗ ಕೀಚಕನು 'ಅಕ್ಕಾ ಎಷ್ಟುಮಂದಿ ಗಂಧರ್ವರನ್ನಾದರೂ ಈ ಭುಜಬಲದಿಂದ ಸಂಹರಿಸುವ ಸಾಮರ್ಥ್ಯವು ನನಗುಂಟು. ಐದು ಮಂದಿ ಗಂಧರ್ವರು ಎಷ್ಟುಮಾತ್ರದವರು. ನನ್ನ ಪ್ರಾಣಗಳು ನಿನಗೆ ಪ್ರಿಯವಾಗಿದ್ದಲ್ಲಿ, ನನ್ನಲ್ಲಿ ನಿನಗೆ ಸಹೋದರವಾತ್ಸಲ್ಯವಿದ್ದಲ್ಲಿ, ನಾನು ಇನ್ನು ಕೆಲವು ಕಾಲ ಈ ಮತ್ಸ್ಯರಾಜ್ಯದ ಸೇನಾಪತಿಯಾಗಿದ್ದುಕೊಂಡಿರಬೇಕೆಂದು ನಿನಗೆ ಇಷ್ಟವಿದ್ದಲ್ಲಿ, ಏನಾದರೂ ಮಾಡಿ ಮಾಲಿನಿಯನ್ನು ಒಡಂಬಡಿಸಿ, ನನ್ನ ಮನೆಗೆ ಕಳುಹಿಸು' ಎಂದನು.

ಸುಧೇಷ್ಣೆಯು ಕಣ್ಣಿನಲ್ಲಿ ನೀರು ಸುರಿಸುತ್ತ, 'ನನ್ನ ಹಿತವಚನಗಳು ಇವನಿಗೆ ಸಲ್ಲವು. ಕಾಮಾಂಧನಾಗಿ ತನ್ನನ್ನು ತಾನೆ ಹಗ್ಗದಲ್ಲಿ ಬಿಗಿದುಕೊಂಡು ಬೆಂಕಿಗೆ ಬೀಳಲು ಯತ್ನಿಸುತ್ತಿದ್ದಾನೆ.' ಎಂದಂದುಕೊಂಡು ತಮ್ಮನನ್ನು ಕುರಿತು, 'ಇದರಿಂದ ನಿನ್ನ ತಮ್ಮಂದಿರಿಗೂ ನಿನಗೂ ಹಾನಿಬರುತ್ತದೆ ಒಬ್ಬನು ಪಾಪಮಾಡಿದರೆ ಆತನಿಂದ ಆ ವಂಶಕ್ಕೆ ಹಾನಿಬರುವುದು. ಯುಕ್ತಾಯುಕ್ತ ವಿವೇಚನೆಯಿಲ್ಲದೆ, ಈ ನೀಚಕೆಲಸದಲ್ಲಿ ನಾನು ಪ್ರವೇಶಿಸುವಂತೆ ಮಾಡುತ್ತಿದ್ದೀಯೆ! ಈಗ ಮನೆಗೆ ಹೋಗಿ ಏನಾದರೊಂದು ನೆವದಿಂದ ಭಕ್ಷ್ಯಭೋಜ್ಯಗಳನ್ನಾದರೂ ಮಧುವನ್ನಾದರೂ ಮಾಡಿಸು. ಅದನ್ನು ತರುವುದಕ್ಕೆ ಮಾಲಿನಿಯನ್ನು ಕಳುಹಿಸುತ್ತೇನೆ. ಏಕಾಂತದಲ್ಲಿ ಸಮಾಧಾನಪೂರ್ವಕವಾಗಿ, ನಿನ್ನ ಅಭೀಷ್ಟವನ್ನು ನೆರವೇರಿಸಿಕೊ' ಎಂದಳು. ಹೀಗೆ ಸುಧೇಷ್ಣೆಯು, ತಾನುಮಾಡುತ್ತಿರುವ ಕಾರ್ಯವು ಅಕೃತ್ಯವೆಂದು ತೋರಿದರೂ, ಭ್ರಾತೃವಾತ್ಸಲ್ಯದಿಂದ ಮುರಿದವಳಾಗಿ, ಇದರಿಂದ ಕುಲಕ್ಷಯವಾಗುವದೆಂದು ತಿಳಿದೂ, ಮುಗ್ಧೆಯಾಗಿ ತಮ್ಮನನ್ನು ಸಂತೋಷಪಡಿಸಬೇಕೆಂಬ ಆಲೋಚನೆಗೆ ಮನಸೋತಳು.

ಕೀಚಕನ ಶರೀರವು ಉಬ್ಬಿತು. ದೀಪವು ನಂದಿಹೋಗುವಾಗ ದೊಡ್ಡದಾಗಿ ಉರಿಯುವುದುಂಟು. ಕೀಚಕನಿಗೆ ತನಗೆ ಕಾಲವು ಸಮೀಪಿಸಿದೆ ಎಂಬುದು ಗೊತ್ತಿಲ್ಲ. ವಿಷಯಸುಖಕ್ಕಾಗಿ ಮೃತ್ಯುವನ್ನು ತಬ್ಬಿಕೊಳ್ಳಲು ತನ್ನ ಅಕ್ಕನ ಮಾತುಗಳನ್ನು ನಿರಾಕರಿಸಿ ಮೃತ್ಯುವನ್ನು ಮನೆಗೆ ಕಳುಹಿಸುವಂತೆ ಅವಳನ್ನು ಒಡಂಬಡಿಸಿ ತನ್ನ ಮನೆಗೆ ಹೋದನು.

ಬಹಳ ಹೊತ್ತಾದರೂ ಮಾಲಿನಿಯು ಬರಲೇ ಇಲ್ಲ. ಕೀಚಕನು ಕಾಲವಿಳಂಬವನ್ನು ಸಹಿಸಲಾರದವನಾದನು. ಪುನಃ ಅಕ್ಕನನ್ನು ಕಾಣಿಸಿಕೊಂಡು 'ಸೈರಂಧ್ರಿಯನ್ನು ಬೇಗ ಕಳುಹಿಸು. ಎಲ್ಲವೂ ಸಿದ್ಧವಾಗಿದೆ. ನನ್ನ ಮನೋರಥವನ್ನು ಬೇಗ ನೆರವೇರಿಸು. ಮಾಲಿನೀ ಸಂಗಮವನ್ನಾದರೂ, ಶರೀರವಿಯೋಗವನ್ನಾದರೂ, ಉಂಟುಮಾಡೆಂದು ಪರಮೇಶ್ವರ

ನನ್ನು ಪ್ರಾರ್ಥಿಸುತ್ತಿದ್ದೇನೆ.' ಎಂದು ಹೇಳಿ, ಪುನಃ ಅಕ್ಕನಿಂದ ಭಾಷೆ ಯನ್ನು ತೆಗೆದುಕೊಂಡು, ತನ್ನ ಮನೆಗೆ ಹೋಗಿ, ಮಾಲಿನಿಯು ಬರುವು ದನ್ನೇ ಇದಿರುನೋಡುತ್ತಿದ್ದನು.

ಇತ್ತ ಸುಧೇಷ್ಣೆಯು ಮಾಲಿನಿಯನ್ನು ಕರೆಯಿಸಿ, ನೀನು ನಮ್ಮ ತಮ್ಮನ ಮನೆಗೆ ಹೋಗಿ, ಅವನ ಪಾಕಶಾಲೆಯಲ್ಲಿ ತಯಾರಾಗಿರುವ ಭಕ್ಷ್ಯಭೋಜ್ಯಾದಿಗಳನ್ನೂ ಮಧುವನ್ನೂ ತೆಗೆದುಕೊಂಡು ಕಾಲ ವಿಳಂಬಮಾಡದೆ, ಬೇಗ ಬಾ' ಎಂದು ಆಜ್ಞಾಪಿಸಿದಳು. ಆಗ ಮಾಲಿ ನಿಯು 'ಅಮ್ಮಾ ನಿಮ್ಮ ತಮ್ಮನು ನನ್ನಲ್ಲಿ ಮೋಹಿತನಾಗಿದ್ದಾನೆ. ನಾನು ಹೋದರೆ ಏನಾದರೂ ಅನರ್ಥವಾದೀತು. ನಿಮ್ಮ ಪರಿಚಾರಕರಲ್ಲಿ ಯಾ ರಾದರೊಬ್ಬಳನ್ನು ಕಳುಹಿಸಿ, ನನ್ನನ್ನು ಕಾಪಾಡಬೇಕು.' ಎಂದಳು. ಸುಧೇಷ್ಣೆಯು ಕುಪಿತಳಾಗಿ "ನನ್ನ ತಮ್ಮನು ಅಂಥಾವನಲ್ಲ. ಅವನ ಮೇಲೆ ಇಲ್ಲದ ಸಲ್ಲದ ಸಂಶಯುಗಳನ್ನು ಕಲ್ಪಿಸಬೇಡ. ಶೀಘ್ರ ವಾಗಿ ಹೋಗಿ, ಪರಿಮಳಿಸುತ್ತಿರುವ ಮಧುವನ್ನು ತಂದು ನನಗೆ ಪ್ರಿಯ ವನ್ನು ಮಾಡು' ಎಂದು ಪ್ರಭುತ್ವವನ್ನು ತೋರಿಸಿ, ಬಲಾತ್ಕಾರದಿಂದ ಕಟ್ಟುಮಾಡಲು, ಮೇಲು ಮುಸುಕುಳ್ಳ ಸುವರ್ಣಪಾತ್ರೆಯನ್ನು ತೆಗೆದು ಕೊಂಡು, ಕಂಬನಿಗಳನ್ನು ತುಂಬಿ, ತರತರನೆ ನಡುಗುತ್ತ, ತನ್ನ ಮಾವಂ ದಿರಾದ ಧರ್ಮ ಅನಿಲ ಇಂದ್ರ ಅಶ್ವಿನೀ ದೇವತೆಗಳಿಗೆ ನಮಸ್ಕಾರಮಾಡಿ, ಅಂತಃಪುರದಿಂದ ಹೊರಟಳು. ದಾರಿಯಲ್ಲಿ ಉದ್ದಕ್ಕೂ ಬ್ರಹ್ಮ ವಿಷ್ಣು ಮಹೇಶ್ವರರೇ ಮೊದಲಾದ ಸಕಲ ದೇವತೆಗಳನ್ನು ಸ್ತುತಿಸುತ್ತ, ಸಿಂಹದ ಭಯದಿಂದ ತಲ್ಲಣಿಸುವ ಹುಲ್ಲೆಯೋಪಾದಿಯಲ್ಲಿ, ಸೈರಂಧ್ರಿಯು, ಕೆಲ ವು ದೂರ ತ್ವರೆಯಾಗಿಯೂ, ಕೆಲವು ದೂರ ಚಿಂತೆಯಿಂದ ಮೆಲ್ಲ ಮೆಲ್ಲ ಗೂ, ನಡೆದು ಕೀಚಕನ ಮನೆಯನ್ನು ಸೇರಿದಳು.

ಸಮುದ್ರವನ್ನು ದಾಟಲು ಎಣಿಸುತ್ತಿರುವವನಿಗೆ ಓಡೆಯು ದೊರಕಿ ದ ಹಾಗೆ, ಮನ್ಮಥಬಾಣಗಳಿಂದ ಸಂತಪ್ತನಾದ ಕೀಚಕನಿಗೆ ಮಾಲಿನಿಯು

ಮನೆಗೆ ಬಂದುದು ಅಂದು ಹಾಗಾಯಿತು. ಸಂತೋಷದಿಂದ ತಾನು ಕುಳಿತಿದ್ದ ಆಸನವನ್ನು ಬಿಟ್ಟೆದ್ದು, 'ಬಹುಕಾಲದಿಂದ ನಿನ್ನನ್ನೆ ಇದಿರು ನೋಡುತ್ತಿದ್ದೆನು. ಈಗ ನೀನು ನನ್ನ ಮನೆಗೆ ಬಂದೆ. ಇದೇ ಸುದಿವಸ. ನನ್ನನ್ನು ನಿನ್ನಧೀನಮಾಡಿಕೊಂಡು ಕಾಪಾಡು, ನನ್ನ ಸರ್ವಸ್ವವೂ ನಿನ್ನದೇ ಆಗಿರುತ್ತದೆ' ಎಂದನು. ಆಗ ಮಾಲಿನಿಯು ಕುಪಿತಳಾಗದೆ, ಸಮಾಧಾನ ಚಿತ್ತಳಾಗಿ, ಕೀಚಕನನ್ನು ಕುರಿತು, 'ನಿನ್ನನ್ನು ನೋಡಿ ಇಂದು ಪಶ್ಚಾತ್ತಾಪ ಹೊಂದಿರುವೆನು. ಸುಂದರ ಸ್ತ್ರೀಯರನ್ನು ನೋಡಿ ಪುರುಷರು ಮೋಹಿತರಾಗುವುದು ಸಹಜ ಧರ್ಮ. ಕಾಮಾಂಧನಾಗಿ, ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಳ್ಳಲಾರದೆ, ಇಂದು ನನ್ನಲ್ಲಿ ಅಪಕಾರಮಾಡಲೆಳಸಿರುವಿ. ಇದು ನಿನಗೆ ತೆರನಲ್ಲ. ನನ್ನನ್ನು ಕೆಣಕಿ ನನ್ನ ಕೋಪಾಗ್ನಿಗೆ ಆಹುತಿಯಾಗಬೇಡ. ಬದುಕಿ ಬಾಳುವ ಯೋಚನೆಯನ್ನು ಮಾಡು. ಇಂದು ನಿನ್ನನ್ನು ಕ್ಷಮಿಸಿರುವೆನು' ಎಂದಳು. ಆಗ ಕೀಚಕನು 'ಮಾಲಿನಿ, ಇಷ್ಟು ನಿರ್ದಯಳಾಗಿ ನನ್ನನ್ನು ನಿರಾಶನನ್ನಾಗಿ ಮಾಡಬೇಡ. ನನ್ನನ್ನು ಸಂತೋಷಪಡಿಸಿ ಕಾಪಾಡು' ಎಂದನು. ಆಗ ಸೈರಂಧ್ರಿಯು ಕುಪಿತಳಾಗಿ, 'ಹುಚ್ಚನಂತೆ, ಕುಡುಕನಂತೆ, ಮಾತಾಡಬೇಡ. ಬಾಯಾರಿಕೆಯಿಂದ ಬಾಯಿಬಿಡುತ್ತಿರುವ ಸುಧೇಷ್ಣೆಗೆ ಬೇಗ ಮಧುವನ್ನು ತೆಗೆದುಕೊಂಡು ಹೋಗಬೇಕು. ತಡಮಾಡಬೇಡ. ಕೊಟ್ಟು ಬೇಗ ನನ್ನನ್ನು ಕಳುಹಿಸು' ಎಂದಳು. ಆಗ ಕೀಚಕನು 'ಮಧುವನ್ನು ನನ್ನ ಪರಿಚಾರಕರೊಡನೆ ಕಳುಹಿಸುವೆನು. ಅದಕ್ಕಾಗಿ ನೀನು ಹೋಗಬೇಕಾದುದಿಲ್ಲ. ನನ್ನ ಮನೋರಥವನ್ನೀಡೇರಿಸು' ಎಂದು ಹೇಳಿ, ಅವಳ ಬಲಗೈಯನ್ನು ಹಿಡಿದೆಳೆಯಲು, ಸೈರಂಧ್ರಿಯು ಕೈ ಬಿಡಿಸಿಕೊಂಡು, ಚಿನ್ನದ ಪಾತ್ರೆಯನ್ನು ನೆಲದ ಮೇಲೆ ಬಿಸಾಟು, ಕಂಕನಿಂದ ಶೋಭಿತವಾದ ವಿರಾಟನ ಸಭಾಮಂಟಪಕ್ಕೆ ಓಡುತ್ತ ಬಂದಳು. ಕೀಚಕನೂ ಹಿಂಬಾಲಿಸಿದನು. ಈ ದೃಶ್ಯವನ್ನು ನೋಡಲು ಎಲ್ಲರೂ ಹೊರಗೆ ಬಂದರು. ಅಧಮನೆಯು

ಮುಂಭಾಗದ ರಾಜಬೀದಿಯಲ್ಲಿ ಜನಸಂದಣಿಯು ಸೇರಿತು. ಭೀಮಸೇನನು ಜನಗಳ ಮಧ್ಯದಲ್ಲಿದ್ದುದನ್ನು ಕಂಡು, ಕಂಕನು ಮಹಡಿಯಿಂದ ಕೆಳಕ್ಕಿಳಿದು, ಭೀಮಸೇನನ ಸಮೀಪದಲ್ಲಿ ನಿಂತನು. ಅಂತಃಪುರದ ಸ್ತ್ರೀಯರೆಲ್ಲರೂ ಬೃಹನ್ನಳೆಯೊಡನೆ ಬಿಸಲುಮಚ್ಚಿನ ಮೇಲೆ ನೆರೆದರು. ನಿರಾಶನಾದ ಕೀಚಕನು ಅವಳ ತುರುಬನ್ನು ಹಿಡಿದೆಳೆಯಲು ಸೈರಂಧ್ರಿಯು ಕೆಳಗೆ ಬಿದ್ದಳು. ಮನೋರಥವು ಕೈಗೂಡದೆ ಹೋದುದರಿಂದ ಕೀಚಕನಿಗೆ ಕೋಪವು ಎಲ್ಲೆಮೀರಿ ಉಕ್ಕಿತು. ಬಾಯಿಯಲ್ಲಿ ರಕ್ತಕಾರುವ ಹಾಗೆ, ಮಾಲಿನಿಯನ್ನು ಒದ್ದನು. ಸೂರ್ಯದೇವನು ಅಂದು ಬಹುವಾಗಿ ತಪಿಸುತ್ತಿದ್ದನು. ಮದಾಂಧನಾದ ಕೀಚಕನು ನಿರಾಶೆಯಿಂದ ನಿತ್ರಾಣನಾದನು. ಬಿಸಲಿನ ತಾಪದಿಂದ ತಲೆಯು ತಿರುಗಿತು. ಕಣ್ಣುಗಳು ಕಾಣದೆ ಹೋದುವು. ಬೇರುಸಹಿತ ಕಳಚಿಬಿದ್ದ ದೊಡ್ಡ ವೃಕ್ಷದ ಹಾಗೆ ಗ್ರಾಮಸಾರದ ನೀರು ಹರಿಯುತ್ತಿದ್ದ ಚರಂಡಿಯಲ್ಲಿ ಧೊಪ್ಪನೆ ಬಿದ್ದನು.

ಗ್ರಾಮಸಾರದ ನೀರಿನ ಶೈತ್ಯೋಪಚಾರದಿಂದ ಬೇಗನೆ ಎಚ್ಚತ್ತು ತನ್ನ ಬಟ್ಟೆಗಳೆಲ್ಲ ಮಲಿನವಾದುದನ್ನು ಕಂಡು, ನಾಚಿಕೆಯಿಂದ ಅಲ್ಲಿ ನಿಲ್ಲಲಾರದೆ ಹೊರಟುಹೋದನು.

ಎಷ್ಟು ಕ್ಷಮಾಗುಣವಿದ್ದರೆ ತಾನೆ ಏನು! ತನ್ನದು ಎಂಬ ಮೋಹವು ಯಾರನ್ನು ಬಿಟ್ಟಿದೆ! ಅದರ ಪಾಶಕ್ಕೆ ಸಿಕ್ಕದ ನರನಾರು! ಅಂದು ಧರ್ಮಜನ ಹಣೆಯೆಲ್ಲವೂ ಬೆವರಿತು. ಕಟ್ಟಿಗೆ ಸಿಕ್ಕಿಬಿದ್ದು ತನ್ನ ಕೋಪವನ್ನು ತಾನೇ ನುಂಗಿಕೊಂಡನು. ಅರ್ಜುನನ ಕರುಳು ಚುರ್ ಚುರ್ ಎಂದಿತು. ಯುಧಿಷ್ಠಿರನಿಗಾಗಿ ಸುಮ್ಮನಿದ್ದನು. ನಕುಲ ಸಹದೇವರು ಏನೂ ಮಾಡಲಾರದವರಾಗಿ ಒಳಗೊಳಗೇ ಬಹುವಾಗಿ ನೊಂದು ಮೂಕರಂತಿದ್ದರು. ಆದರೆ ಧರ್ಮಜನ ಕಟ್ಟಿಗೆ ಸಿಕ್ಕಿಯೂ ಸಿಕ್ಕದೆಯೂ ಇರುವ ವೀರನಾದ ಮಾರುತಿಯು ಹಾಗಿರಲು ಸಾಧ್ಯವೆ! ಪಾದತಾಡನ ಮಾಡಿದ ಕೀಚಕನನ್ನು ಕಂಡು, ಭೀಮನು ಕಿಡಿಕಿಡಿಯಾದನು. ಕಣ್ಣು

ಗಳು ಕೆಂಪಾದವು. ರೋಮಗಳು ಎದ್ದುನಿಂತವು. ಹುಬ್ಬು ಗಂಟಿಕ್ಕಿಕೊಂಡು ಹಲ್ಲುಗಳನ್ನು ಕಟಕಟನೆ ಕಡಿಯುತ್ತ ಸಮೀಪದ ವೃಕ್ಷವನ್ನು ನೋಡಿದನು. ಧರ್ಮರಾಯನು ಆಗಲೆ ಭೀಮನ ಇಂಗಿತವನ್ನು ತಿಳಿದು 'ಅನೇಕ ಪಕ್ಷಿಗಳಿಗೆ ಆಶ್ರಯವಾಗಿರುವ ಎಲ್ಲರಿಗೂ ನೆರಳನ್ನು ಕೊಡುವ ವೃಕ್ಷವನ್ನೇಕೆ ಸೌದೆಗೆ ಉಪಯೋಗಿಸಬೇಕೆಂದು ಯೋಚಿಸುವೆ. ಹಾಗೆ ಮಾಡಬೇಡ ಇದು ಇನ್ನೂ ಹಸಿ. ನಾಟ್ಯಶಾಲೆಯ ಮುಂದಿರುವ ಮರವು ಒಣಗಿದೆ' ಎಂದನು. ಭೀಮನು ಹಾಗೆಯೇ ತಣ್ಣಗಾದನು.

ಇತ್ತ ದ್ರೌಪದಿಯು, ಸ್ವಲ್ಪ ಹೊತ್ತಾದ ಮೇಲೆ ಚೇತರಿಸಿಕೊಂಡು, ಸಭಾಪ್ರವೇಶ ಮಾಡಿದಳು. ಕಂಕನೂ ಹಿಂದೆಯೇ ಹೋದನು ಭೀಮನು ಪಾಕಶಾಲೆಯನ್ನು ಪ್ರವೇಶಿಸಿದನು. ಮಾಲಿನಿಯು ವಿರಾಟನನ್ನು ಕುರಿತು ನಿರಪರಾಧಿನಿಯಾದ ತನಗೆ ಕೀಚಕನು ಮಾಡಿದ ಅಪರಾಧದ ಪೂರ್ವೋತ್ತರಗಳನ್ನು ವಿಶದವಾಗಿ ತಿಳುಹಿಸಿ, ಅಬಲೆಯಾದ ದಿಕ್ಕಿಲ್ಲದ ತನ್ನನ್ನು ಕಾಪಾಡಬೇಕೆಂದು ಕೇಳಿಕೊಂಡಳು. ಕೀಚಕನ ಹೆದರಿಕೆಯಿಂದ ವಿರಾಟನು ಮೂಕನಂತೆ ಸುಮ್ಮನಿದ್ದನು. ಕೀಚಕನಿಗೆ ಯಾವ ವಿಧವಾದ ದಂಡನೆಯನ್ನೂ ಮಾಡಲಾರದವನಾದನು. ಆಗ ಮಾಲಿನಿಯು ಸಭಾಸ್ಥಾನವನ್ನು ಬಿಡದೆ ಧರ್ಮಾಧರ್ಮಜಿಜ್ಞಾಸೆ ಮಾಡುತ್ತ ಅಲ್ಲಿಯೇ ನಿಂತುಬಿಟ್ಟಳು. ಹಜಾರದಲ್ಲಿ ಕುಳಿತಿದ್ದವರಲ್ಲಿ ಕೆಲವರು ಮಾಲಿನಿಯು ನುಡಿದ ಮಾತುಗಳು ನ್ಯಾಯವಾದವುಗಳು ಎಂದರು. ಇನ್ನು ಕೆಲವರು ವಿರಾಟನು ನ್ಯಾಯವನ್ನು ವಿಚಾರಿಸದೆ ಹೀಗೆ ನೋಡುತ್ತ ಸುಮ್ಮನಿರಬಹುದೆ ಎಂದರು. ಮತ್ತೆ ಕೆಲವರು ಸುಧೇಷ್ಣೆಯು ತನ್ನನ್ನು ಮರೆ ಹೊಕ್ಕಿರುವ ಈ ಪತಿವ್ರತಾಶಿರೋಮಣಿಯನ್ನು ಯಾವುದೋ ಒಂದು ನೆವದಿಂದ ಪಾಪಾತ್ಮನಾದ ಕೀಚಕನ ಮನೆಗೆ ಕಳುಹಿಸಿ, ಅಪಮಾನ ಪಡಿಸಬಹುದೆ ಎಂದರು. ಆಗ ಕಂಕನು ಮಾಲಿನಿಯನ್ನು

ಕುರಿತು, ' ಧರ್ಮಶೀಲನೂ ಪರಲೋಕಭೀತನೂ ಆದ ವಿರಾಟನು ಎಲ್ಲವನ್ನೂ ವಿಚಾರಿಸಿ, ನಿನ್ನನ್ನು ಸಂರಕ್ಷಿಸುವನು. ನಿನ್ನ ಪತಿಗಳೈವರೂ, ನಿನ್ನ ಅಪಮಾನವನ್ನು ನೋಡಿ, ಖೇದವನ್ನೈದಿರುವರು ; ಕ್ರೋಧಕ್ಕೆ ಸಮಯವಿಲ್ಲದೆ, ಧರ್ಮವನ್ನಾಶ್ರಯಿಸಿ, ಸುಮ್ಮನೆ ನೋಡುತ್ತಲಿದ್ದಾರೆ. ನೀನು ಭಯಪಡಬೇಡ. ಸತ್ಯವೂ ಧರ್ಮವೂ ದಾನವೂ ತಪಸ್ಸೂ ಕ್ಷಮೆಯೂ ಇಹಪರ ಸೌಖ್ಯಗಳನ್ನುಂಟುಮಾಡುವುವು. ನೀನು ಕ್ಷಮೆಯನ್ನು ವಹಿಸಿ ಸುಧೇಷ್ಣೆಯ ಬಳಿಗೆ ಹೋಗು. ಹನ್ನೊಂದು ತಿಂಗಳು ಕಷ್ಟಪಟ್ಟವಳಿಗೆ ಇನ್ನೊಂದು ತಿಂಗಳು ಇರುವುದು ಕಷ್ಟವೆ ! ' ಎಂದು ನುಡಿದನು. ಅವಳು ಕೇಳದೆ ಇರಲು ' ನಾನೆಷ್ಟು ಹೇಳಿದರೂ ಕೇಳದೆ, ಈ ಸಭಾಸ್ಥಳದಲ್ಲಿ ನಾಚಿಕೆ ಇಲ್ಲದೆ ನುಡಿಯುವುದಕ್ಕೆ ನೀನು ನಟುವನ ಹೆಂಡತಿಯೋ ! ' ಎಂದು ಕೋಪ ಒರಿಯಿಸಿಕೊಂಡವನಂತೆ ನುಡಿಯಲು ; ಆಗ ಅವಳು ಅವನನ್ನು ಕುರಿತು, ' ನೀವು ನಿಜವಾಗಿ ಹೇಳಿದಿರಿ ; ಯಾರಲ್ಲಿ ಜ್ಯೇಷ್ಠನಾದವನು ಸಮರ್ಥನೆನ್ನಿಸಿಕೊಂಡನೋ ಅಂಥ ನಟುವನಿಗೆ ಹೆಂಡತಿ ಎಂದು ತಿಳಿದುಕೊಳ್ಳಿ ' ಎಂದು ಮರ್ಯಾದೆಯನ್ನತಿಕ್ರಮಿಸದೆ, ಒಚ್ಚವನ್ನು ಸ್ವಲ್ಪವೂ ಬಿಟ್ಟುಕೊಡದೆ, ನುಡಿದು, ತನ್ನ ಐವರು ಪತಿಯರ ಅಭಿಪ್ರಾಯವನ್ನು ತಿಳಿದು, ಕಂಬನಿಯನ್ನು ತನ್ನ ಸೆರಗಿನಿಂದ ಒರಸಿಕೊಳ್ಳುತ್ತ, ಸುಧೇಷ್ಣೆಯ ಬಳಿಗೆ ಹೋದಳು.

ಸುಧೇಷ್ಣೆಯು ' ನನ್ನ ತಮ್ಮನು ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಿಯೇ ತೀರಬೇಕು. ನಾನು ಅವನನ್ನು ಶಿಕ್ಷಿಸದೆ ಬಿಡೆನು ' ಎಂದಳು. ಆಗ ಮಾಲಿನಿಯು ' ನನ್ನ ಪತಿಗಳಲ್ಲಿ ಒಬ್ಬನು ಅಸಮಾನ ಬಲಪರಾಕ್ರಮಿಯು ; ಅಜೇಯನು ; ಅವನು ಮುನಿದರೆ ಒಂದು ದಿವಸದೊಳಗೆ ಸಕಲ ಲೋಕಗಳನ್ನೂ ಧ್ವಂಸ ಮಾಡಬಲ್ಲನು. ಈಗ ನಡೆದ ಸಂಗತಿ ಆತನಿಗೆ ತಿಳಿದರೆ ಕೀಚಕನು ಕ್ಷಣಮಾತ್ರದಲ್ಲಿ ಹತನಾಗುವನು. ಅಷ್ಟುಮಾತ್ರವಲ್ಲ. ಅವನ ಸಹೋದರರಿಗೂ ನಾಶವು

ಬರುವುದು. ಇಂದು ಮೊದಲಾಗಿ ಆಗತಕ್ಕ ಅನರ್ಥವೆಲ್ಲವನ್ನೂ ತಿಳಿದಿರು ' ಎಂದು ನುಡಿದಳು.

ಸುಧೇಷ್ಣೆಯ ಸಮೀಪವನ್ನು ಬಿಟ್ಟು, ಸ್ನಾನಮಾಡಿ ಶುದ್ಧ ವಸ್ತ್ರಗಳನ್ನುಟ್ಟು, ವಿರಾಟನ ಅರಮನೆಯಲ್ಲಿ ತನಗಾಗಿ ಕೊಟ್ಟಿದ್ದ ಕೊಠಡಿಯೊಳಕ್ಕೆ ಹೋಗಿ ಬಾಗಿಲುಗಳನ್ನು ಹಾಕಿಕೊಂಡಳು. ಧರ್ಮರಾಯನ ಕಟ್ಟಿಗೆ ಬಿದ್ದು ಅವನ ತಮ್ಮಂದಿರೆಲ್ಲರೂ ತಟಸ್ಥರಾಗಿರುವ ಆಲೋಚನೆಯು ಅವಳ ಮನಸ್ಸನ್ನು ಪೂರ್ಣವಾಗಿ ಆಕ್ರಮಿಸಿತು. ಅಂದು ಅವಳಿಗೆ ಆಹಾರ ಬೇಕಾಗಲಿಲ್ಲ. ಹಾಸಿಗೆಯನ್ನುರಳಿಸಿ ಹಾಗೆಯೇ ಮಲಗಿದಳು. ನಿದ್ರೆ ಬರಲಿಲ್ಲ. ಮನಸ್ಸಿಗೆ ಸ್ವಲ್ಪವೂ ಶಾಂತಿ ಬರದಿರಲು, ' ಏನು ಮಾಡಲಿ! ಎಲ್ಲಿಗೆ ಹೋಗಲಿ! ಯಾರನ್ನು ಶರಣು ಹೊಂದಲಿ! ದುರಾತ್ಮನಾದ ಈ ಸೂತನಂದನನು ಯಾವ ರೀತಿ ಸಂಹರಿಸಲ್ಪಡುವನೋ! ' ಎಂದು ಚಿಂತಿಸುತ್ತ, ಭೀಮಸೇನನ ಹೊರತು ಈ ಕಾರ್ಯವು ಸಾಗದೆಂದು ನಿಶ್ಚಯಿಸಿ, ಜನಸಂಚಾರವಿಲ್ಲದ ನಿಶಾಸಮಯದಲ್ಲಿ ಅಲ್ಲಿಂದ ಹೊರಟು ಮದ್ದಾನೆಯನ್ನು ಸೇರುವ ಹೆಣ್ಣಾನೆಯ ಚಂದದಿಂದ, ಅಡಿಗೆಯ ಮನೆಯಲ್ಲಿದ್ದ ಭೀಮಸೇನನ ಸಮೀಪವನ್ನು ಸೇರಿದಳು. ಭೀಮಸೇನನು ಗಾಢನಿದ್ರೆಯಲ್ಲಿದ್ದನು. ಹಂಸತೂಲಿಕಾತಲ್ಪದ ಮೇಲೆ ಪವಡಿಸುತ್ತಿದ್ದ ಭೀಮಸೇನನು ಅಂದು ಕಲ್ಲುಮಂಚದ ಮೇಲೆ ಹಾಸರಿಬಿದ್ದಿರುವುದನ್ನು ಕಂಡಳು. ದ್ರೌಪದಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಗಲ್ಲಗಳನ್ನು ತನ್ನ ಮೃದುವಾದ ಬೆರಳುಗಳಿಂದ ಮುಟ್ಟಿದಳು. ಗಾಢನಿದ್ರೆಯಲ್ಲಿರುವ ಲೋಭಿಗೆ ನಾಣ್ಯಸ್ಪರ್ಶದಿಂದ ಎಚ್ಚರವಾಗುವಂತೆ, ಅಂದು ಆ ಅಂಗುಳೀಸ್ಪರ್ಶನದಿಂದ ಭೀಮನಿಗೆ ಎಚ್ಚರವಾಯಿತು. ಹಾಗೆಯೇ ಮಂಚದ ಮೇಲೆ ದ್ರೌಪದಿಯನ್ನು ಕೂರಿಸಿಕೊಂಡು ' ಇದೇನು ಪಾಂಚಾಲಿ, ಈ ನಡುರಾತ್ರಿಯಲ್ಲಿ ಬಂದ ಕಾರ್ಯವೇನು! ' ಎಂದನು. ತಾನು ಪಾಂಡವರನ್ನು ಪಾಣಿಗ್ರಹಣ ಮಾಡಿಕೊಂಡ ಲಾಗಾಯಿತು ಅಂದಿನ

ವರೆಗೆ ತನಗಾದ ಅಪಮಾನದ ವೇದನೆಯನ್ನು ಭೀಮನ ಮನಕರಗುವಂತೆ ಬಣ್ಣಿಸುತ್ತ, ಅವನ ಮಲಗಿದ್ದ ಕೋಪವನ್ನು ಎಬ್ಬಿಸಿದಳು. "ಪಾಂಚಾಲಪುತ್ರಿಯಾಗಿ, ಪಾಂಡವರ ಪತ್ನಿಯಾಗಿ, ಇಂದು ಸುಧೇಷ್ಣೆಯ ಪರಿಚಾರಕಳಾಗಿದ್ದುಕೊಂಡು, ಸೂತನಂದನನಿಂದ 'ನನ್ನ ಭೋಗ್ಯವಸ್ತುವಾಗು' ಎಂದೆನ್ನಿಸಿಕೊಂಡು, ನಿಮ್ಮಗಳ ಕಣ್ಣೆದಿರಿಗೆ ಆ ಪಾಪಿಯ ಪಾದತಾಡಿತೆಯಾಗಿ, ಹೇಳುವವರು ಕೇಳುವವರು ಇಲ್ಲದೆ, ಈ ಜನ್ಮವನ್ನು ಹೊರೆಯುವುದಕ್ಕಿಂತಲೂ, ಸಾಯುವುದು ಮೇಲು. ಈ ರಾತ್ರಿ ನೀನು ಕೀಚಕನನ್ನು ಸಂಹರಿಸದಿದ್ದಲ್ಲಿ ನಾನು ಈ ಪ್ರಾಣವನ್ನು ಇಟ್ಟುಕೊಂಡಿರಲಾರೆನು. ಕೀಚಕನ ಸಂಹರಣಕ್ಕೆ ಧರ್ಮಜನನ್ನು ಹೋಗಿ ಬೇಡಿಕೊಳ್ಳಲಾರೆ. ಒಂದು ವೇಳೆ ಬೇಡಿಕೊಂಡರೂ ಪ್ರಯೋಜನವಿಲ್ಲ. ಆತನ ಅಪ್ಪಣೆಯಾಗಬೇಕೆಂದು ಎಣಿಸಬೇಡ. ಯುಧಿಷ್ಠಿರನ ಪಾದದಾಣೆ! ಅರ್ಜುನ ನಕುಲ ಸಹದೇವರಾಣೆ! ಇಗೋ, ನೀರೊಳಗೆ ಬಿದ್ದಾದರೂ, ಹಗ್ಗದಿಂದ ಕಂಠವನ್ನು ಬಿಗಿದಾದರೂ, ವಿಷವನ್ನು ಕುಡಿದಾದರೂ, ಅಗ್ನಿಪ್ರವೇಶಮಾಡಿಯಾದರೂ, ಯಾವದಾದರೊಂದು ಆಯುಧದಿಂದ ತಿವಿದುಕೊಂಡಾದರೂ, ಈ ದೇಹವನ್ನು ತ್ಯಜಿಸಲುಳ್ಳವಳಾಗಿದ್ದೇನೆ. ಇದು ಖಂಡಿತ. ಇದಕ್ಕೆ ಸಂಶಯಬೇಡ." ಎಂದು ಹೇಳುತ್ತ ವಿರಾಟನನ್ನೂ ಸುಧೇಷ್ಣೆಯನ್ನೂ ಸಂತೋಷಪಡಿಸುವುದಕ್ಕಾಗಿ, ಗಂಧವನ್ನು ತೇದು ತೇದು ತನ್ನ ಕೈ ಬೆರಳು ಜಡ್ಡು ಕಟ್ಟಿರುವುದನ್ನು ತೋರಿಸಿ, ಅಗ್ನಿಗೆ ಆಜ್ಯಾಹುತಿಯನ್ನು ಹಾಕಿ ಜ್ವಾಲೆಯನ್ನೆಬ್ಬಿಸುವಂತೆ, ಭೀಮನ ಕೋಪವನ್ನು ಕೆರಳಿಸಿದಳು. ಆಗ ಭೀಮನು 'ಆಕೆಯ ಕೈಗಳನ್ನು ತನ್ನ ಕಣ್ಣುಗಳಿಗೆ ಒತ್ತಿಕೊಂಡು, ಅಧಿಕವಾಗಿ ದುಃಖಪಟ್ಟು, ಕೀಚಕನನ್ನು ಕೊಂದು ನಿನ್ನ ಮನಸ್ಸನ್ನು ತೃಪ್ತಿಪಡಿಸುವೆನು' ಎಂದನು.

ಕೋಪಾಗ್ನಿಜ್ವಾಲೆಯು ಭೀಮನ ಶರೀರವನ್ನೆಲ್ಲ ವ್ಯಾಪಿಸಿತು. ಬೋನಿನಲ್ಲಿ ಕೂಡಿದ ಸಿಂಹದ ಹಾಗೆ, ಧರ್ಮಜನ ಧರ್ಮಪಾಶಕ್ಕೆ ಸಿಕ್ಕಿ,

ಪ್ರಕಟವಾಗಿ ಏನನ್ನೂ ಮಾಡಲಾರದವನಾಗಿ ಸ್ವಲ್ಪ ಹೊತ್ತು ಆಲೋಚಿಸಿ, ಸಮಾಧಾನವನ್ನು ತಂದುಕೊಂಡು, ತಾನು ಆವೇಶದಲ್ಲಿದ್ದಾಗ ಕೊಟ್ಟ ವಚನಕ್ಕೆ ಪಶ್ಚಾತ್ತಾಪಪಟ್ಟು, "ದೇವಿ, ಪತಿವ್ರತಾಶಿರೋಮಣಿಯರಿಗೆ ದುಃಖವೇ ಹೆಚ್ಚು, ಸುಖವೆಲ್ಲಿಯೋ ಸ್ವಲ್ಪ. ದುಡುಕಿ ಏನಾದರೂ ಮಾಡಿದರೆ ಅಥವಾ ನಮ್ಮಿಬ್ಬರ ಸಂಭಾಷಣೆಯು ಧರ್ಮರಾಯಾದಿಗಳ ಕಿವಿಗೆ ಬಿದ್ದರೆ ಅವರು ತಮ್ಮ ಪ್ರಾಣಗಳನ್ನು ಕಳೆದುಕೊಳ್ಳುವುದರಲ್ಲಿ ಸಂಶಯವಿಲ್ಲ. ಆಗ ನಾನು ಪ್ರಾಣಕಳೆದುಕೊಳ್ಳುವುದು ಸಿದ್ಧ. ಶಾಂತಚಿತ್ತದಿಂದ ಆಲೋಚಿಸು" ಎಂದನು.

ಆಗ ಹದಗೆಟ್ಟಿತೆಂದು ತಿಳಿದು ದ್ರೌಪದಿಯು "ನನ್ನಲ್ಲಿ ಮೋಹಿತನಾದ ಕೀಚಕನು ಎಷ್ಟು ತಿರಸ್ಕೃತನಾದರೂ ಲಕ್ಷ್ಯಮಾಡದೆ ಕಂಡಾಗಲೆಲ್ಲ 'ನನ್ನ ಪತ್ನಿಯಾಗು' ಎಂದು ನಿರ್ಬಂಧವನ್ನು ಮಾಡುತ್ತಿದ್ದಾನೆ. ಈಗ ನೀನೇನಾದರೂ ಪ್ರತಿಜ್ಞಾಭಂಗ ಬರುವುದೆಂದು ತಟಸ್ಥನಾಗಿದ್ದಲ್ಲಿ, ನನ್ನನ್ನು ಬದುಕಿಸಲಾರೆ. ನನ್ನನ್ನು ಬದುಕಿಸಿದರೆ ನಿಮ್ಮನ್ನೂ ನಿಮ್ಮ ಕುಲವನ್ನೂ ರಕ್ಷಿಸಿದ ಹಾಗೆ ಎಂದು ತಿಳಿದುಕೊ. ದುಷ್ಟನಿಗ್ರಹ ಶಿಷ್ಟಪರಿಪಾಲನೆ ಕ್ಷತ್ರಿಯಧರ್ಮ, ನೀರು ತುಂಬಿದ ಗಡಿಗೆಯನ್ನು ತಲೆಯ ಮೇಲಿಂದ ಎತ್ತಿ ಕೆಡಹುವ ಹಾಗೆ, ನಾಳೆ ಸೂರ್ಯೋದಯದೊಳಗಾಗಿ ಕೀಚಕನ ತಲೆಯನ್ನೊಡೆದು ಸಂಹರಿಸದಿದ್ದರೆ, ವಿಷಪಾನಮಾಡಿ ನಿನ್ನಿದಿರಿಗೆ ಪ್ರಾಣ ಬಿಡುತ್ತೇನೆ." ಎಂದು ಹೇಳಿ ಕಣ್ಣಿನಲ್ಲಿ ನೀರು ಸುರಿಸುತ್ತ ಕುಳಿತಳು. ಭೀಮನು ಅವಳನ್ನು ಬಾಚಿ ತಬ್ಬಿಕೊಂಡು, ಕಂಬನಿಗಳನ್ನು ತೊಡದು, ನಿಟ್ಟುಸಿರುಗಳನ್ನು ಬಿಡುತ್ತ, "ನಿನ್ನಾಣೆ! ನನ್ನಾಣೆ! ಧರ್ಮಜನ ಪಾದದಾಣೆ! ಕೀಚಕನನ್ನು ಸಂಹಾರಮಾಡುತ್ತೇನೆ" ಎಂದು ಭರವಸೆ ಕೊಟ್ಟನು.

ಭೀಮಸೇನನು ವಚನವನ್ನೇನೋ ಕೊಟ್ಟನು. ಆದರೆ ಸಂಹಾರ ಕರ್ಮ ನಡೆಯುದೆಂತು? ಎಲ್ಲವೂ ಗುಪ್ತವಾಗಿ ನಡೆಯಬೇಕು. ಆಗ

ಭೀಮಸೇನನು ದ್ರೌಪದಿಯನ್ನು ಕುರಿತು, "ನಾಟಕಶಾಲೆಯಲ್ಲಿ ರಾಜಕನ್ನಿಕೆಯರು ಹಗಲು ನೃತ್ಯ ಗೀತ ವಿದ್ಯಾಭ್ಯಾಸ ಮಾಡುವರು. ರಾತ್ರಿ ಅಲ್ಲಿ ಯಾರೂ ಇರುವದಿಲ್ಲ. ರಹಸ್ಯವಾಗಿರುವುದು. ಮನ್ಮಥಬಾಧೆಯಿಂದ ಏನೂ ತಿಳಿಯದೆ ಮುಗ್ಧನಾಗಿರುವ ಕೀಚಕನಿಗೆ ನಿನ್ನ ಒಪ್ಪಿತವನ್ನು ಕೊಟ್ಟು, ಅಲ್ಲಿಗೆ ಬರುವಂತೆ ಮಾಡು. ಮುಂದೆ ನಾನು ನೋಡಿಕೊಳ್ಳುತ್ತೇನೆ." ಎಂದು ಹೇಳಿ ದ್ರೌಪದಿಯನ್ನು ಸಂತವಿಟ್ಟು ಕಳುಹಿಸಿದನು.

ಸಂಕೇತದಂತೆ ಎಲ್ಲವೂ ಆಯಿತು. ಗೊತ್ತಾದ ದಿನ ಭೀಮನು ಸ್ತ್ರೀವೇಷಧಾರಿಯಾಗಿ, ನಾಟಕಶಾಲೆಯಲ್ಲಿದ್ದ ಮಂಚದ ಮೇಲೆ, ಮೊದಲೇ ಹೋಗಿ ಪವಡಿಸಿದ್ದನು ಆನಂದತುಂದಿಲಸ್ವಾಂತನಾದ ಕೀಚಕನು ಸರ್ವಾಲಂಕಾರಭೂಷಿತನಾಗಿ, ಹಣೆಗೆ ತಿಲಕವನ್ನಿಟ್ಟು, ನೃತ್ಯವನ್ನಪ್ಪಿಕೊಳ್ಳಲು ಹೋಗುತ್ತಿರುವ ಮದನನೋಪಾದಿಯಲ್ಲಿ, ಏಕಾಂಗಿಯಾಗಿ ಯಾರಿಗೂ ಅರಿಯದಂತೆ, ಶ್ಮಶಾನಮಾರ್ಗವಾಗಿ ಸಂಕೇತಸ್ಥಾನವನ್ನು ಸೇರಿ, ತಾನೂ ಮಂಚವನ್ನೇರಿದನು. ಮಂಚದ ಮೇಲಿರುವ ಮಹಾವ್ಯಕ್ತಿಯು ಮಾಲಿನಿ ಎಂದು ಭಾವಿಸಿ, ಮೈಯನ್ನೆಲ್ಲ ತಡವರಿಸಿದನು. ಮಾಲಿನಿಯ ಮೃದು ಶರೀರವೆಲ್ಲಿ! ವಲಲನ ವಜ್ರಶರೀರವೆಲ್ಲಿ! ಗಾಬರಿಯಿಂದ ಥಟ್ಟನೆ ಮಂಚ ಬಿಟ್ಟೆದ್ದನು. ಸುತ್ತಲೂ ನೋಡಿದನು. ಎಲ್ಲೆಲ್ಲಿಯೂ ಕತ್ತಲೆಯು ಕವಿದಿತ್ತು. ಯಾರೋ ಹೊರಗಿನ ಬಾಗಿಲನ್ನು ಹಾಕಿಕೊಂಡ ಸಪ್ಪಳವು ಕೇಳಿಸಿತು 'ಮಾಲಿನಿ!' 'ಮಾಲಿನಿ!' ಎಂದು ಎರಡಾವೃತ್ತಿ ಕೂಗಿದನು. ನಿಶ್ಶಬ್ದವಾದ ಆ ರಾತ್ರಿಯಲ್ಲಿ 'ಮಾಲಿನಿ!' ಮಾಲಿನಿ!' ಎಂಬ ಪ್ರತಿಧ್ವನಿಯು ಮಾತ್ರ ಕೇಳಿಸಿತು. 'ಮಾಲಿನಿ! ಮಾಯೆಯನ್ನು ಬಿಟ್ಟು ಮೈದೋರಿ ಸಲಹು.' ಎಂದು ಹೇಳಿ ತನ್ನ ಕೈ ನೀಡಿದನು. ಆಗ ಭೀಮನು ಮಂಚವನ್ನು ಬಿಟ್ಟೆದ್ದು, 'ಇಗೋ ಮೈದೋರುವೆನು' ಎಂದು ಹೇಳುತ್ತ, ಅವನ ಕೈ ಹಿಡಿದು ಜಗ್ಗಿದನು. ಇಬ್ಬ

ರಿಗೂ ಹಣಾಹಣಿ ಯುದ್ಧವಾಯಿತು. ಕೀಚಕನು ಸಾಮಾನ್ಯ ಬಲಸಲ್ಲ. ಭೀಮನಿಗೆ ಎಡಗೈ ಎಂದೇ ಹೇಳಬೇಕು. ಬಹಳ ಹೊತ್ತು ಕಾದಾಡಿ ಕೊನೆಗೆ ಕೀಚಕನು ಕೆಳಗೆ ಬಿದ್ದನು. ಅವನ ಶರೀರವನ್ನು ಮಣ್ಣುಮುದ್ದೆ ಯಂತೆ ವಿಕಾರ ಮಾಡಿ, ಯಾರಿಗೂ ಅರಿಯದಂತೆ ಸ್ನಾನ ಮಾಡಿ, ಹೊಸಬಟ್ಟೆಗಳನ್ನುಟ್ಟುಕೊಂಡು, ಅಡಿಗೆ ಮನೆಯಲ್ಲಿರುವ ತನ್ನ ಶಯ್ಯಾ ಗಾರವನ್ನು ಸೇರಿದನು.

ಇದನ್ನೆಲ್ಲ ನೋಡುತ್ತಿದ್ದ ಸೈರಂಧ್ರಿಯು ಬೇಗನೆ ಹೋಗಿ ಅಂತಃ ಪುರದ ಸೇವಕರನ್ನು ಎಬ್ಬಿಸಿ, ತನ್ನ ಪತಿಗಳಾದ ಗಂಧರ್ವರು ತನಗೆ ಮಾಡಿದ ಅಪಮಾನಕ್ಕಾಗಿ, ಕೀಚಕನನ್ನು ಕೊಂದು ಹಾಕಿದರೆಂಬ ಸದ್ದಿ ಯನ್ನು ತಿಳುಹಿಸಿದಳು. ಈ ಶೋಕವಾರ್ತೆಯು ಉಪಕೀಚಕರಿಗೆ ಮುಟ್ಟಿ ತು. ಎಲ್ಲರೂ ಗಾಬರಿಯಿಂದ ಓಡಿ ಬಂದು, ನಾಟ್ಯಶಾಲೆಯ ಹೊರ ಗಡೆ ಬಿದ್ದಿದ್ದ ಕೀಚಕನ ವಿಕಾರ ಶರೀರವನ್ನು ನೋಡಿ, ಬಹಳ ಸಂತಾಪ ಪಟ್ಟು, ಶವಸಂಸ್ಕಾರ ಮಾಡಲು ಹವಣಿಸುತ್ತಿದ್ದರು. 'ಸೈರಂಧ್ರಿಯಿಂ ದಲ್ಲವೇ ಇಷ್ಟೆಲ್ಲ ಅನಾಹುತ ನಡೆದುದು. ಅವಳನ್ನೂ ಈ ಶವದ ಜೊತೆ ಯಲ್ಲಿ ಕಟ್ಟಿ ಸುಟ್ಟುಬಿಟ್ಟಲ್ಲಿ, ಪರಲೋಕದಲ್ಲಾದರೂ ಕೀಚಕನು ಅವ ಳೊಡನೆ ಸುಖಪಟ್ಟಾನು' ಎಂದೆಣಿಸಿ ವಿರಾಟನ ಅಪ್ಪಣೆಯನ್ನು ಪಡೆದು, ಅವಳನ್ನು ಹಿಡಿದುಕೊಂಡು ಬರಲು ಅರಮನೆಗೆ ಹೋದರು. ರಾಯನು ತಾನು ಸಮ್ಮತಿಸದಿದ್ದರೂ, ಕೋಪದ ವೇಳೆಯಲ್ಲಿ ತನ್ನ ಮಾತನ್ನು ತಿರ ಸ್ಕರಿಸಿ, ತಮ್ಮ ಕೆಲಸವನ್ನು ಮಾಡಿಯೇ ಬಿಡುವರೆಂದೂಹಿಸಿ, 'ನಿಮಗೆ ತೋರಿದಂತೆ ಮಾಡಿ' ಎಂದು ಹೇಳಿ ಸುಮ್ಮನಾದನು

ಸೈರಂಧ್ರಿಯು ದಿಕ್ಕಿಲ್ಲದ ಪರದೇಶಿಯೆಂದು ಭಾವಿಸಿ, ಅವಳಿದ್ದ ಕೊಠಡಿಗೆ ನುಗ್ಗಿ, ಹೊರಕ್ಕೆ ಹಿಡಿದೆಳೆದು, ನಾಟ್ಯಶಾಲೆಯ ಕಡೆಗೆ ಹೊತ್ತುಕೊಂಡು ಹೋಗಿ, ಶವದೊಡನೆ ಚೆನ್ನಾಗಿ ಬಿಗಿದು ಕಟ್ಟಿದರು. ಚರಮೋತ್ಸವವು ಶ್ಮಶಾನದ ಕಡೆಗೆ ಹೊರಟಿತು. ಪಾಕಶಾಲೆಯ ಬಳಿ

ಸಂಕೇತದ ಹೆಸರುಗಳಿಂದ ತನ್ನ ಪತಿಯರನ್ನು ಕೂಗುತ್ತ, ಪರಮಾತ್ಮ ನನ್ನು ಸ್ತುತಿಸುತ್ತ, ಈ ದುಷ್ಟರು ತನ್ನನ್ನು ಈ ದಿವಸ ಸುಟ್ಟುಹಾಕದೆ ಬಿಡರೆಂದು ಬಹುವಾಗಿ ಖೇದವನ್ನೈದಿದಳು. ಭೀಮಸೇನನು ದ್ರೌಪದಿಯ ಈ ಆರ್ತನಾದವನ್ನು ಕೇಳಿ ಬೇರೆ ದಾರಿಯಿಂದ ಶ್ಮಶಾನವನ್ನು ಸೇರಿ ಎತ್ತರವಾಗಿದ್ದ ತಾಳೆ ಮರವೊಂದನ್ನು ಬೇರುಸಹಿತ ಕಿತ್ತು, ಅದನ್ನು ಕೈಯಲ್ಲಿ ಹಿಡಿದುಕೊಂಡು, ಸನ್ನದ್ಧನಾಗಿದ್ದನು. ಉಪಕೀಚಕರು ದೂರ ದಿಂದಲೇ ಭೀಮನ ಭೂತಾಕಾರವನ್ನು ನೋಡಿ, ಗಂಧರ್ವರಿಗಲ್ಲದೆ ಬೇರೆ ಯಾರಿಗೂ ಈ ಬಗೆಯ ಶಕ್ತಿ ಇಲ್ಲವೆಂದೂಹಿಸಿ, ಕೀಚಕನ ಶರೀರವನ್ನು ಮಾಲಿನಿಯೊಡನೆ ಅಲ್ಲೇ ಬಿಸುಟು, ತಮ್ಮ ಪ್ರಾಣರಕ್ಷಣೆಗಾಗಿ ದಿಕ್ಕಾ ಪಾಲಾಗಿ ಓಡಲಾರಂಭಿಸಿದರು. ಭೀಮನು ಬಿಡದೆ ಅವರನ್ನೆಲ್ಲ ಅಡ್ಡ ಗಟ್ಟಿ, ನೂರೈದು ಮಂದಿಯನ್ನೂ ಅಂತಕನ ಮನೆಗೆ ಕಳುಹಿಸಿ, ದ್ರೌಪ ದಿಯ ಬಂಧನವನ್ನು ಬಿಡಿಸಿ, ಸಾಂತ್ವವಚನಗಳಿಂದ ಅವಳ ದುಃಖವನ್ನು ಪರಿಹರಿಸಿ, ಕಂಬನಿಗಳನ್ನು ತುಂಬುತ್ತಿರುವ ಪಾಂಚಾಲಿಯ ಮುಖವನ್ನು ನೋಡಿ, 'ನಿನ್ನನ್ನು ಕೆಣಕಿದವರೆಲ್ಲರೂ ಹೀಗೆಯೇ ಆಗುವರು. ಭಯಪಡ ದೆ ಈಗ ಸುಧೇಷ್ಣೆಯ ಮನೆಗೆ ಹೋಗು; ನಾನು ಬೇರೆ ಮಾರ್ಗದಿಂದ ಯಾರೂ ಅರಿಯದಂತೆ ಪಾಕಶಾಲೆಯನ್ನು ಸೇರುವೆನು' ಎಂದು ಹೇಳಿ ಹೊರಟು ಹೋದನು.

ಮಾಲಿನಿ! ನಿನ್ನ ಇಷ್ಟಾರ್ಥವು ಕೈಗೂಡಿತು. ಕೀಚಕನು ಮಂಚದ ಮೇಲಿದ್ದ ಮೃತ್ಯುವನ್ನು ಅಪ್ಪಿಕೊಂಡನು. ಉಪಕೀಚಕರೆಲ್ಲರೂ ಅವನ ಹಿಂದೆಯೇ ಅಂತಕನ ಮನೆಗೆ ನಡೆದರು. ವಿರಾಟನ ಬೆನ್ನ ಮೂಳೆಯು ಕಳಚಿ ಬಿದ್ದು ಹೋಯಿತು. ಅರಮನೆಯಲ್ಲಿ ತರ ತರನೆ ನಡುಗುತ್ತ ಬಿದ್ದಿದ್ದಾನೆ. ನಿನ್ನೊಡನೆ ಮಾತನಾಡಲು ಬಹಳ ಹೆದರಿದ್ದಾನೆ. ನಿನ್ನನ್ನು ಮತ್ತೆಲ್ಲಿಗಾದರೂ ಕಳುಹಿಸಿ ಬಿಡಬೇಕೆಂದು ಯೋಚಿಸುತ್ತಿದ್ದಾನೆ ಅಂತಃ ಪುರದಲ್ಲಿ ಸುಧೇಷ್ಣೆಯು ಬೆಚ್ಚಿ ಬೆಚ್ಚಿ ಬೀಳುತ್ತಿದ್ದಾಳೆ. ನಗರವಾಸಿಗಳೆ

ಲ್ಲರೂ ಗಾಬರಿಯಿಂದ ಬಾಗಿಲು ತೆಗೆಯದೆ ಒಳಗಡಗಿಕೊಂಡಿದ್ದಾರೆ. ಮಾಲಿನಿ! ನಿನ್ನನ್ನು ನೋಡಿ ಮೋಹಿತರಾಗದವರೇ ಇಲ್ಲ. ಮೋಹಿತರಾಗಿ ಕೆಣಕದಿರುವವರು ಅತಿ ವಿರಳ. ಕೆಣಕಿದವರು ಬದುಕುವಂತಿಲ್ಲ. ಅತ್ಯಲ್ಪಕಾಲದಲ್ಲಿಯೇ ನಗರವೆಲ್ಲವೂ ನಿರ್ಮಾನುಷವಾಗುವುದರಲ್ಲಿ ಸಂದೇಹವಿಲ್ಲ.' ಇದೇ ನಗರವಾತಾವರಣದ ಗಭೀರಧ್ವನಿ. ಮಾಲಿನಿ! ನೀನು ಎಲ್ಲರಿಗೂ ಮಾಲಿನಿಯೋ ಮೃತ್ಯುದೇವತೆಯೋ ಎಂಬಂತೆ ಕಾಣಿಸಿಕೊಳ್ಳುತ್ತಿರುವಿ. ನಿಜದ ಅರಿವು ಬಂದೊಡನೆಯೇ ಭ್ರಾಂತಿಯು ಬಯಲಾಗುವುದು. ಮಾಲಿನಿ! ಇಂದು ಎಲ್ಲರಿಗೂ ಮೃತ್ಯುದೇವತೆಯಾಗಿರುವಿ. ನಾಳೆ ನೀನೇ ಮನೆ ದೇವತೆಯಾಗುವಿ.

---

|| ಶ್ರೀ ||

## ನಾಲ್ಕನೆಯ ಅಧ್ಯಾಯ

# ಅನುಮಾನ ಮತ್ತು ಅಣಿ

ಮೊಬ್ಬು ಹರಿಯಿತು. ಬೆಳಗಾಯಿತು. ನಗರವಾಸಿಗಳು ಒಬ್ಬೊಬ್ಬರಾಗಿ ಹೊರಗೆ ಬಂದರು. ಅಲ್ಲಲ್ಲೆ ಜನರ ಗುಂಪು ಸೇರಿತು. ಎಲ್ಲೆಲ್ಲೂ ಕೀಚಕನ ಮತ್ತು ಉಪಕೀಚಕರ ಮಾತೇ ಮಾತು. ಘಳಿಗೆ ಘಳಿಗೆಗೂ ಹೊಸ ಸುದ್ದಿಗಳು ಹರಡುತ್ತಿದ್ದುವು. ಬೇಹಿನವರಿಗೆ ಇದೇ ಸಮಯ. ಪಾಂಡವರು ಅಜ್ಞಾತವಾಸದಲ್ಲಿರುವಾಗ ಅವರನ್ನು ಪತ್ತೆ ಮಾಡಿ, ಪುನಃ ಕಾಡಿಗೆ ಕಳುಹಿಸಿ, ನಿರಾತಂಕವಾಗಿ ಹನ್ನೆರಡು ವರ್ಷ ರಾಜ್ಯಭಾರ ಮಾಡಬಹುದೆಂಬ ಉದ್ದೇಶದಿಂದ, ಕೌರವೇಶ್ವರನು, ದೇಶದೇಶಾಂತರಗಳಿಗೆಲ್ಲ ತನ್ನ ಕಡೆ ಗೂಢಚಾರರನ್ನು ಕಳುಹಿಸಿದ್ದನು. ತಮ್ಮ ತಮ್ಮ ಇಷ್ಟಾರ್ಥಸಿದ್ಧಿಯನ್ನು ಮಾಡಿಕೊಳ್ಳಬೇಕೆಂಬ ಇಚ್ಛೆಯು ಯಾರಿಗೆ ತಾನೆ ಇಲ್ಲ. ಅಂದು ವಿರಾಟನಗರದಲ್ಲಿದ್ದ ಕೌರವನ ಕಡೆ ಬೇಹಿನವರು, ನಿಜವಾದ ಸುದ್ದಿಯನ್ನು ತಮ್ಮ ದೊರೆಗೆ ಕಳುಹಿಸಬೇಕೆಂಬ ಉದ್ದೇಶದಿಂದ, ಶ್ಮಶಾನದ ಸಮೀಪದಲ್ಲಿಯೂ, ನಾಟ್ಯಶಾಲೆಯ ಬಳಿಯಲ್ಲಿಯೂ, ವಿರಾಟನ ಅಂತಃಪುರದಲ್ಲಿಯೂ, ಜನಗಳ ಸಂದಣಿಯಲ್ಲಿಯೂ, ಎಲ್ಲೆಲ್ಲೂ ಯಾರೂ ಅರಿಯದಂತೆ ವಿಷಯ ಸಂಗ್ರಹಣ ಮಾಡುವುದರಲ್ಲಿ ಜಾಗರೂಕರಾಗಿದ್ದರು.

ವಿರಾಟನು ಭಯಗ್ರಸ್ತನಾಗಿ, ಮಾಲಿನಿಯೊಡನೆ ತಾನೇ ಮಾತನಾಡಲು ಅಂಜಿ, ಅಂತಃಪುರಕ್ಕೆ ಹೋಗಿ, ತನ್ನ ಪಟ್ಟದರಸಿಯಾದ ಸುಧೇಷ್ಣೆಯನ್ನು ಕುರಿತು, " ಸೈರಂಧ್ರಿಯಿಂದ ನಮಗೆ ಉಳಿಗಾಲವಿಲ್ಲ. ಇವ

ಪತಿವ್ರತಾ ಸ್ತ್ರೀಯರ ಸಿಟ್ಟಿಗೆ ಸಿಕ್ಕಿಬೀಳುವುದರ ದುಷ್ಪರಿಣಾಮವು ದುಷ್ಟ ಕೀಚಕರಲ್ಲಿ ಫಲಿಸಿತು. ಸೈರಂಧ್ರಿಯು ಪಟ್ಟಣದಲ್ಲೆಲ್ಲ ಭಯೋತ್ಪಾದಕ ದೇವತೆಯಾದಳು. ಸೈರಂಧ್ರಿಯನ್ನು ಕೆಣಕುವುದಕ್ಕೆ ಬದಲಾಗಿ ಅವಳಿಂದ ದೂರವಾಗುವ ಯೋಚನೆಯು ಎಲ್ಲರಲ್ಲೂ ಮೂಡಿತು. ವಿರಾಟನಿಗೂ ಅವನ ಪತ್ನಿಗೂ ಸೈರಂಧ್ರಿಯಿಂದ ತಪ್ಪಿಸಿಕೊಳ್ಳುವುದು ಅತಿ ಪ್ರಮಾದವಾಯಿತು. ದೇಶದಲ್ಲಿರಿಸಿಕೊಂಡರೆ ಒಂದು ಕಷ್ಟ. ದೇಶದಿಂದ ಕಳುಹಿಸಿಕೊಟ್ಟರೆ ಒಂದು ಕಷ್ಟ. ಹೀಗಾಗಿ ಯಜಮಾನನ ಚಾವಟಿಯ ಮುಂದೆ ನಾಯಿಯು ಬಾಲ ಮುದುರಿಕೊಂಡು ತೆಪ್ಪಗಾಗುವಂತೆ ಸೈರಂಧ್ರಿಯ ಮುಂದೆ, ಎಲ್ಲರೂ ತೆಪ್ಪಗಾದರು.

ಅತ್ತ ಶ್ಮಶಾನದಲ್ಲಿ ಕೀಚಕನ ಮತ್ತು ಅವನ ನೂರೈದು ಮಂದಿ ತಮ್ಮಂದಿರ ಶವಸಂಸ್ಕಾರವು ಶ್ರೀಗಂಧ ಅಗರು ಮುಂತಾದವುಗಳಿಂದ ಯಥಾವಿಧಿಯಾಗಿ ವಿರಾಟನ ಅಪ್ಪಣೆಯಂತೆ ನಡೆಯಿತು.

ಸಂಜೆಯಾಯಿತು. ನಗರದ ವಾತಾವರಣವು ಶಾಂತಿಯನ್ನೈದಿತು. ಕೌರವನ ಕಡೆ ಬೇಹಿನವರೆಲ್ಲರೂ ಒಂದೆಡೆ ಸೇರಿದರು. ವಿಷಯ ಗರ್ಭಿತವಾದ ಒಂದು ಕಾಗದವನ್ನು ಬರೆದು, ಮಾರನೆಯ ದಿವಸ ಬೆಳಗ್ಗೆ ಅಷ್ಟು ಹೊತ್ತಿಗೇನೆ, ವೇಗವಾಗಿ ಹೋಗುವ ಕುದುರೆಗಳ ಮೇಲೆ ಹಸ್ತಿನಾಪುರಕ್ಕೆ ದೂತರನ್ನಟ್ಟಿದರು. ಮೂರು ನಾಲ್ಕು ದಿವಸಗಳಲ್ಲಿಯೇ ದೂತರು ಹಸ್ತಿನಾಪುರವನ್ನು ಸೇರಿ ಒಡ್ಡೋಲಗದಲ್ಲಿ ಭೀಷ್ಮ ದ್ರೋಣ ಕರ್ಣ ಶಕುನಿಗಳೊಡನಿರುವಾಗ ಕಾಗದವನ್ನು ದೊರೆಗೆ ಒಪ್ಪಿಸಿದರು. ದುಶ್ಶಾಸನನು ಕಾಗದವನ್ನು ಬಿಚ್ಚಿ, ಎಲ್ಲವನ್ನೂ ಓದಿ, ಕೊನೆಗೆ "ತ್ರಿಗರ್ತದೇಶಾಧೀಶ್ವರನನ್ನು ಬಹು ಪರಾಕ್ರಮದಿಂದ ಸಂಹರಿಸಿ, ಖ್ಯಾತಿಪಡೆದ ವಿರಾಟಭೂಮಿಪಾಲನ ಮೈದುನನಾಗಿಯೂ, ಸೇನಾಪತಿಯಾಗಿಯೂ, ರಾಜತಂತ್ರವಿಶಾರದನಾಗಿಯೂ, ಸಮರೋತ್ಸಾಹಸಂಪನ್ನನಾಗಿಯೂ, ವೈರಿನಿಗ್ರಹದಕ್ಷನಾಗಿಯೂ, ವೀರಾಗ್ರೇಸರನಾಗಿಯೂ ಇದ್ದ ಕೀಚ

ಕನು ಅನುಜ ಸಮೇತನಾಗಿ, ಸೈರಂಧ್ರಿಯಾದ ಒಬ್ಬ ತರುಣೀಮಣಿಯ ನಿಮಿತ್ತವಾಗಿ, ಅವಳ ಪತಿಗಳಾದ ಗಂಧರ್ವಶ್ರೇಷ್ಠರಿಂದ ನಿಶಾಸಮಯ ದಲ್ಲಿ, ಹತನಾದನು '' ಎಂಬ ಉಪಸಂಹಾರ ವಾಕ್ಯವನ್ನು ಓದಿ, ಕಾಗದ ವನ್ನು ಕೌರವನ ಕೈಗೆ ಕೊಟ್ಟನು.

ಆ ಮೇಲೆ ಕರ್ಣ ದುಶ್ಯಾಸನರು, ಆಪ್ತರಾಗಿಯೂ ಸಮರ್ಥರಾ ಗಿಯೂ ಇರುವ ಬೇರೆ ಬೇಹಿನವರನ್ನು ಅಲ್ಲಿಗೆ ಕಳುಹಿಸಿ, ಪಾಂಡವರ ಇರುವಿಕೆಯನ್ನು ತಿಳಿದು, ಮುಂದಿನ ಕಾರ್ಯ ಮಾಡಬೇಕೆಂದರು. ಆಗ ದ್ರೋಣನು ಪಾಂಡವರು ಇರುವ ದೇಶವು ಸರ್ವಸಮೃದ್ಧಿಯಿಂದ ಕೂಡಿ ರುವದೆಂದೂ, ಅಜ್ಞಾತವಾಸದ ಅವಧಿಯನ್ನು ಯಾರಿಗೂ ಅರಿಯದಂತೆ ಪೂರೈಸಿಕೊಂಡು ಬರುವರೆಂದೂ. ಅವರ ವಿಷಯದಲ್ಲಿ ಉಚಿತರೀತಿ ಯಿಂದ ನಡೆದುಕೊಳ್ಳುವುದು ಉತ್ತಮವೆಂದೂ, ನುಡಿದನು. ಅನಂತರ ಭೀಷ್ಮನು "ಪಾಂಡವರು ಬಲಹೀನರೆಂದು ಉಪೇಕ್ಷೆ ಮಾಡಬೇಡ. ಶಸ್ತ್ರಾಸ್ತ್ರವಿದ್ಯಾವಿಶಾರದರು, ಬಹು ಪರಾಕ್ರಮಿಗಳು, ಪ್ರಚ್ಛನ್ನವೇಷ ದಿಂದ ಅಜ್ಞಾತವಾಸವನ್ನು ನೆರವೇರಿಸಿಕೊಂಡು, ಯುದ್ಧಕ್ಕೆ ಸನ್ನದ್ಧ ರಾಗಿ ಬಂದೇ ಬರುವರು. ಅವರನ್ನು ಅನಾದರಣೆ ಮಾಡಬೇಡ. ನಮ ಗನುಕೂಲರಾದವರಿಗೆ ಬಹುಮಾನ ಮಾಡಿ ಸಂತೋಷ ಪಡಿಸುವಂತೆ, ನಮಗಿಂತಲೂ ಬಲವಂತರಾಗಿ ನಮಗನುಕೂಲರಲ್ಲದ ಅರಸುಗಳಿಗೆ ಕಪ್ಪ ವನ್ನು ಕೊಟ್ಟು, ನಮ್ಮ ಕಡೆ ಒಲಿಸಿಕೊಳ್ಳಬೇಕು. ಇದಿರಿಸಿದ ಶತ್ರುಗ ಳನ್ನು ಸಮಯವರಿತು ನಿಗ್ರಹಿಸಬೇಕು. ಈಗ ನೀನು ಯುದ್ಧೋನ್ಮುಖ ನಾಗಿ ಪಾಂಡವರನ್ನು ಗೆಲ್ಲಬೇಕು; ಇಲ್ಲವಾದರೆ ಅವರನ್ನು ನಿನ್ನವರ ನ್ನಾಗಿ ಮಾಡಿಕೊಳ್ಳಬೇಕು. ಪ್ರಕೃತ ಸನ್ನಿವೇಶವನ್ನು ಪರಿಶೀಲಿಸಿ ನೋಡಿ ದುದರಲ್ಲಿ ಸಮಾಧಾನವೇ ಸಾಧುವಾದುದೆಂಬ ಸೂಚನೆಯು, ತೋರಿ ಬರುತ್ತದೆ '' ಎಂದು ಮೃದು ಮಧುರವಾಣಿಯಿಂದ ಕೌರವನಿಗೆ ಹಿತೋ ಕ್ತಿಯನ್ನು ಹೇಳಿದನು.

ದುರ್ಯೋಧನನು, ಎಲ್ಲರೂ ಹೇಳಿದುದನ್ನು ಸಾವಧಾನವಾಗಿ ಕೇಳಿ, ಪ್ರಕೃತ ಸಭೆಯ ಮುಂದೆ ಇದ್ದ ವರ್ತಮಾನಕ್ಕೆ, ತನ್ನದೊಂದು ಅರ್ಥವನ್ನು ಕಲ್ಪಿಸಿದನು. "ಬಲಸೇನ, ಭೀಮಸೇನ, ಶಲ್ಯ, ಕೀಚಕ ಇವರು ಇಂದ್ರಸಮಾನಬಲವುಳ್ಳವರು. ಬಾಹುಯುದ್ಧದಲ್ಲಿ ಬಹು ಸಮರ್ಥರು. ಇವರನ್ನು ಸಂಹರಿಸುವದಕ್ಕೆ ಯಾರಿಗೂ ಶಕ್ಯವಿಲ್ಲವೆಂದು ಕೇಳಬಲ್ಲೆನು. 'ಈಗ ಮತ್ಸ್ಯರಾಯನ ಪಟ್ಟಣದಲ್ಲಿ ಒಬ್ಬ ಗಂಧರ್ವನು, ಅರ್ಧರಾತ್ರಿ ಸಮಯದಲ್ಲಿ ಸೈರಂಧ್ರಿಯ ನಿಮಿತ್ತವಾಗಿ, ಕೀಚಕನನ್ನು ಕೊಂದನು.' ಎಂದು ಬೇಹಿನವರು ಬರೆದಿರುವರು. ಪಾಕಶಾಲೆಯ ಬಳಿ ನಡೆದ ಸಂಗತಿಯನ್ನು ಇದರೊಡನೆ ಸೇರಿಸಿದರೆ, ಪಾಕಶಾಲೆಯ ಬಾಗಿಲಿನಲ್ಲಿ ನಿಂತಿದ್ದ ವ್ಯಕ್ತಿಯೇ ಏಕೆ ಪಾಂಡುಪುತ್ರನಾದ ಭೀಮಸೇನನಿರಬಾರದು? ಆ ಸೈರಂಧ್ರಿಯೇ ಏಕೆ ಪಾಂಚಾಲಪುತ್ರಿಯಾದ ದ್ರೌಪದಿಯಾಗಿರಬಾರದು? ಇದು ಹೀಗೆಯೇ ಇರಬೇಕೆಂದು ನನ್ನ ಮನಸ್ಸಿನಲ್ಲಿ ದೃಢವಾಗಿ ತೋರುತ್ತಲಿದೆ. ಆಯುಧಗಳಿಲ್ಲದೆ ಕೀಚಕನನ್ನು ಕೊಂದು, ಅವನ ಶರೀರವನ್ನು ಮಣ್ಣುಮುದ್ದೆಯಂತೆ ಮಾಡಲು ಭೀಮಸೇನನಿಗೆ ಹೊರತಾಗಿ, ಇನ್ನಾರಿಗೂ ಶಕ್ಯವಿಲ್ಲ. ದ್ರೋಣಾಚಾರ್ಯರು ಹೇಳಿದಂತೆ, ಸಕಲ ಸೌಭಾಗ್ಯಗಳೂ ವಿರಾಟರಾಜ್ಯದಲ್ಲಿ ಕಂಡು ಬರುತ್ತಿರುವುದರಿಂದ ಮತ್ಸ್ಯನಗರವು ಯುಧಿಷ್ಠಿರನ ಆವಾಸಸ್ಥಾನವಾಗಿರಬೇಕು. ಪಾಂಡವರು ಅಲ್ಲಿಯೇ ಇರುವರು. ಇದರಲ್ಲಿ ಸಂಶಯವಿಲ್ಲ" ಎಂದನು.

ಬಳಿಕ ಸುಯೋಧನನು, ಹುತ್ತದಲ್ಲಿರುವ ಹಾವನ್ನು ಹೊರಡಿಸುವದೆಂತು, ಎಂಬ ಪ್ರಶ್ನೆಯನ್ನು ತೆಗೆದು ಕೊಂಡು, "ಕೀಚಕನ ಬೆಂಬಲವಿದ್ದುದರಿಂದ ವಿರಾಟನು ಬಹಳ ಗರ್ವಿತನಾಗಿದ್ದನು. ಈಗ ಅವನಿಗೆ ಬಲಭುಜವೇ ಮುರಿದಂತಾಗಿದೆ. ಈಗ ನಾವು ಅವನ ರಾಜ್ಯಕ್ಕೆ ದಂಡೆತ್ತಿ ಹೋಗಿ ಅವನ ಗೋಸಂಕುಲವನ್ನು ಹಿಡಿದರೆ ಗೋರಕ್ಷಣಾರ್ಥವಾಗಿ ಪಾಂಡವರು ಹೊರಗೆ ಬರುವರು, ಆಗ ನಾವು ಅವರನ್ನು ತಿಳಿಧರೆ,

ಪ್ರತಿಜ್ಞಾಭಂಗವಾಯಿತೆಂದು, ತಮಗೆ ತಾವೇ ಪುನಃ ವನಪ್ರವೇಶ ಮಾಡುವರು. ನಮಗೆ ಶತ್ರುನಿಗ್ರಹವೂ ಮನಸ್ಸಂತೋಷವೂ ಉಂಟಾಗು ವವು. ನಿಮಗೆ ಇಷ್ಟವಾದರೆ ದಂಡಯಾತ್ರೆಗೆ ಸಿದ್ಧರಾಗಿ. ಇದೇ ಈಗಿನ ನಮ್ಮ ಕರ್ತವ್ಯವೆಂದು ನನಗೆ ತೋರುತ್ತದೆ" ಎಂದನು.

ಆಗ ತ್ರಿಗರ್ತದೇಶಾಧಿಪತಿಯಾದ ಸುಶರ್ಮನು, "ನಿನಗೂ ಕರ್ಣ ನಿಗೂ ಇತರರಿಗೂ ಇಷ್ಟವಾಗಿದ್ದಲ್ಲಿ, ಕೆಲವು ಕುರುಬಲಸಹಿತ ನಾಗಿ ನಾನು ಜೈತ್ರಯಾತ್ರೆಗೆ ಹೋಗಲು ಸಿದ್ಧನಾಗಿದ್ದೇನೆ. ನನ್ನನ್ನು ಕಳುಹಿಸಿದರೆ ವಿರಾಟನನ್ನು ಕೊಂದು ಅವನ ರಾಜ್ಯವನ್ನು ಅಪಹರಿಸು ತ್ತೇನೆ. ಅದು ಸಾಧ್ಯವಾಗದಿದ್ದರೆ, ಆತನನ್ನು ನಿಮ್ಮಲ್ಲಿಗೆ ತಂದು ಬಿಟ್ಟು ಸ್ನೇಹವನ್ನಾದರೂ ಮಾಡಿಸುತ್ತೇನೆ" ಎಂದನು. ಆಗ ಕರ್ಣನು "ಈ ಸುಶರ್ಮನು ಹೇಳುವ ಮಾತುಗಳು ಉಚಿತವಾಗಿರುವಂತೆ ಕಾಣಬರುತ್ತವೆ. ನಿನಗೂ ಭೀಷ್ಮದ್ರೋಣರಿಗೂ ಯುಕ್ತವಾಗಿ ಕಂಡು ಬಂದಲ್ಲಿ ಸೈನ್ಯ ವನ್ನು ವಿಂಗಡಿಸಿ, ಕೆಲವರನ್ನು ಮೊದಲೇ ಕಳುಹಿಸಿ, ಚತುರಂಗಬಲ ಸಮೇತನಾಗಿ, ಹಿಂದಿನಿಂದ ನೀನು ಹೊರಡುವದು ಉತ್ತಮ. ಮೃತ ಪ್ರಾಯರಾಗಿರುವ ಪಾಂಡವರೇನು ಮಾಡಬಲ್ಲರು?" ಎಂದನು.

ಬಳಿಕ ದುರ್ಯೋಧನನು ಎಲ್ಲರನ್ನೂ ಕುರಿತು, "ತ್ರಿಗರ್ತದೇಶಾಧಿ ಪತಿಯು ಸೈನ್ಯಸಮೇತನಾಗಿ ಹೊರಟು ದಕ್ಷಿಣಭಾಗದಲ್ಲಿ ಮೊದಲು ಗೋಗ್ರಹಣ ಮಾಡಲಿ. ವಿರಾಟನು ಸೈನ್ಯಸಮೇತನಾಗಿ ಆ ಕಡೆ ಹೊರ ಡುವನು. ಮಾರನೆ ದಿವಸ ನಾವು ಉತ್ತರದಿಗ್ಭಾಗದಲ್ಲಿ ಗೋಗ್ರಹಣ ಮಾಡೋಣ. ಗೋವುಗಳ ಸೆರೆ ಬಿಡಿಸಿದ ಹೊರತು, ಧರ್ಮಜನು ಜಲ ಪ್ರಾಶನವನ್ನೂ ಮಾಡುವನಲ್ಲವಾದುದರಿಂದ, ಸಹಿಸಲಾರದೆ, ಭೀ ಮಾರ್ಜುನರು ಗೋವುಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ, ಹೊರಗೆ ಬಂದೇ ಬರುವರು. ಆಗ ನಮ್ಮ ಮನೋರಥವು ಈಡೇರುವುದು" ಎಂದನು. ಭೀಷ್ಮ ನ ಆಜ್ಞೆಯನ್ನು ಪಡೆದು ದುಶ್ಶಾಸನನು ಸೈನ್ಯವನ್ನು ಸಿದ್ಧಪಡಿಸಿದನು.

ಕೌರವೇಶ್ವರಾ! ಯಾರೂ ಮಾಡದ ಊಹೆಯನ್ನು ನೀನು ಅಂದು ಮಾಡಿದೆ. ಎಲ್ಲರೂ ಸಮರ್ಥರಾದ ಬೇರೆ ಬೇಹಿನವರನ್ನು ಕಳುಹಿಸಿ, ಪಾಂಡವರ ಇರುವಿಕೆಯನ್ನು ತಿಳಿದು, ಮುಂದಿನ ಕೆಲಸ ಮಾಡೋಣ ವೆಂದು ಹೇಳಿದರೆ, ದಂಡಯಾತ್ರೆಗೆ ಸಿದ್ಧರಾಗಿ, ಎಂದೆ. ಇದೇ ನಿನ್ನ ರಾಜತಂತ್ರ! ಇದೇ ಪ್ರತಿಭೆ! ಇದೇ ಕಾರ್ಯತತ್ಪರತೆ!

ಆದರೆ ದಕ್ಷಿಣ ಗೋಗ್ರಹಣಕ್ಕೆ ಸುಶರ್ಮನನ್ನು ಬಿಟ್ಟು, ಉತ್ತರ ಗೋಗ್ರಹಣಕ್ಕೆ ನೀನಸುವಾದೆ ದೈವಕ್ಕಿಂತಲೂ ಪೌರುಷವೇ ಬಲವಾಗಿದ್ದರೆ ನಿನ್ನ ಮುಂದೆ ನಿಲ್ಲುವರಾರು! ಅದೇನೋ ನಿನ್ನ ಮನಸ್ಸಿಗೆ ಅಂದು ಹಾಗೆ ಅನ್ನಿಸಿತು! ಇದೇ ನಿನ್ನ ದುರ್ದೈವ!



|| ಶ್ರೀ ||

## ಐದನೆಯ ಅಧ್ಯಾಯ

# ಸಮರ ಮತ್ತು ನಿರಾಶೆ

ಎಲ್ಲವೂ ಸಿದ್ಧವಾಯಿತು. ಸುಶರ್ಮನು ಸೈನ್ಯಸಮೇತ ಹೊರಟು, ದಾರಿಯಲ್ಲಿ ಕಾಲವಿಳಂಬ ಮಾಡದೆ ಎಂಟು ದಿವಸಗಳು ಪ್ರಯಾಣ ಮಾಡಿ, ಅಷ್ಟಮಿ ದಿವಸ ದಕ್ಷಿಣ ದಿಗ್ಭಾಗದಲ್ಲಿ ಗೋಗ್ರಹಣಮಾಡಿ, ಗೋಪಾಲಕರನ್ನು ಹೊಡೆದಟ್ಟಿ, ಗೋಸಮೂಹವನ್ನು ಹಸ್ತಿನಾಪುರದ ಕಡೆ ತಿರುಗಿಸಿದನು. ಅಂದಿಗೆ ರಾತ್ರಿ ಹನ್ನೆರಡು ಘಂಟೆಗೆ ಸರಿಯಾಗಿ ಪಾಂಡವರ ಅಜ್ಞಾತವಾಸದ ಅವಧಿಯು ಮುಗಿಯುವುದರಲ್ಲಿತ್ತು. ತ್ರಿಗರ್ತರಿಂದ ಓಡಿಸಲ್ಪಟ್ಟ ಗೋಪಾಲಕರು, ವಿರಾಟನ ಆಸ್ಥಾನವನ್ನು ಸೇರಿ, ದೊರೆಗೆ ಅಡ್ಡಬಿದ್ದು, "ನಮ್ಮ ಅರುವತ್ತು ಸಾವಿರ ಗೋವುಗಳನ್ನು, ಕೌರವರ ಸಹಾಯದಿಂದ, ತ್ರಿಗರ್ತದೇಶಾಧಿಪತಿಯಾದ ಸುಶರ್ಮನು ಹೊಡೆದುಕೊಂಡು ಹೋಗುತ್ತಿದ್ದಾನೆ. ನಮ್ಮ ದೇಶದ ಗಡಿಯನ್ನು ದಾಟುವುದಕ್ಕೆ ಮುಂಚೆ ನಮ್ಮ ಗೋಸಮೂಹವನ್ನು ಹಿಂದಿರುಗಿಸಬೇಕು. ಬೇಗ ಸೈನ್ಯವನ್ನು ಕಳುಹಿಸು" ಎಂದರು.

ಕೂಡಲೆ ವಿರಾಟನು ಕೋಪದಿಂದ 'ಚತುರಂಗ ಬಲವು ಸಮರಕ್ಕೆ ಸಿದ್ಧವಾಗಲಿ' ಎಂದು ಅಪ್ಪಣೆ ಮಾಡಿ, ತಾನು ಯುದ್ಧೋನ್ಮುಖನಾಗಿ, ತನ್ನ ರತ್ನಖಚಿತವಾದ ರಥವನ್ನೇರಿದನು. ಆಗ ಕಂಕನು ವಿರಾಟನನ್ನು ಕಾಣಿಸಿಕೊಂಡು, "ನಾನು ಒಬ್ಬ ಮಹರ್ಷಿಯಿಂದ ಶಸ್ತ್ರಾಸ್ತ್ರವಿದ್ಯಾಭ್ಯಾಸಮಾಡಿದ್ದೇನೆ; ನಿನ್ನೊಡನೆ ಯುದ್ಧಕ್ಕೆ ಹೊರಡಲು ಇಚ್ಛೆಯುಳ್ಳವನಾಗಿದ್ದೇನೆ. ಬಹು ಪರಾಕ್ರಮಶಾಲಿಯಾದ ವಲಲನೂ, ಅಶ್ವಾಧ್ಯಕ್ಷ

ನಾದ ದಾಮಗ್ರಂಥಿಯೂ, ಧೇನುಪಾಲಕನಾದ ತಂತಿಪಾಲನೂ, ಯುದ್ಧ ಮಾಡುವುದರಲ್ಲಿ ಅತಿ ಕುಶಲರು. ಅದನ್ನು ನಾನು ಚೆನ್ನಾಗಿ ಬಲ್ಲೆನು. ಹಸುಗಳನ್ನು ಹೊಡೆದುಕೊಂಡು ಹೋಗುತ್ತಿದ್ದರೆ ಉಪೇಕ್ಷೆಯಿಂದ ಸುಮ್ಮನೆ ಕುಳಿತುಕೊಳ್ಳುವವರಲ್ಲವೆಂದು ನನಗೆ ತೋರುತ್ತದೆ. ಇಷ್ಟರ ಮೇಲೆ ನಿನ್ನ ಇಷ್ಟ ಬಂದಂತೆ ಮಾಡಬಹುದು. '' ಎಂದನು. ಮತ್ಸ್ಯಭೂಪಾಲನ ಇಷ್ಟದಂತೆ ನಾಲ್ಕು ರಥಗಳು ಸಿದ್ಧವಾದವು. ಅರ್ಜುನನು, ಹೊರತಾಗಿ ಉಳಿದವರೆಲ್ಲರೂ ರಥವನ್ನೇರಿ ದೊರೆಯನ್ನು ಹಿಂಬಾಲಿಸಿದರು.

ಅಪರಾಹ್ಣಸಮಯದಲ್ಲಿ ಉಭಯಸೈನ್ಯಗಳೂ ಸಂಧಿಸಿದವು. ಸಂಧ್ಯಾಕಾಲ ಪರ್ಯಂತವೂ ಖಾಡಾಖಾಡಿ ಯುದ್ಧವು ನಡೆಯಿತು ರಥಿಕರೂ, ಅಶ್ವಾರೋಹಿಗಳೂ, ಮಾವುತರೂ ಕಾಲುಬಲದವರೂ ಸಹಸ್ರಸಂಖ್ಯಾಕವಾಗಿ ನೆಲಕ್ಕುರುಳಿದರು. ವಿರಾಟನು, ಅನೇಕ ರಥಿಕಶ್ರೇಷ್ಠರನ್ನು ಅಂತಕನ ಮನೆಗೆ ಕಳುಹಿಸಿ ಸುಶರ್ಮನಿಗೆ ಇದಿರಾಗಿ ನಿಂತನು. ಸೂರ್ಯನು ಅಸ್ತಾಚಲವನ್ನೈದಿದನು ಉಭಯ ಸೈನ್ಯಗಳು ತಟಸ್ಥವಾಗಿ ಚಿತ್ರದ ಪ್ರತಿಮೆಗಳ ಹಾಗೆ ಸುಮ್ಮನೆ ನಿಂತವು.

ಸ್ವಲ್ಪ ಹೊತ್ತಾದ ಮೇಲೆ ನಾಲ್ಕು ದಿಕ್ಕುಗಳಲ್ಲಿಯೂ ತನ್ನ ಶೀತಳಕಿರಣಗಳನ್ನು ಪ್ರಸರಿಸುತ್ತ ಚಂದ್ರನು ಉದಯಿಸಲು ಪುನಃ ಯುದ್ಧವು ಪ್ರಾರಂಭವಾಯಿತು. ವಿರಾಟನು ಸುಶರ್ಮನ ಗದಾಪ್ರಹಾರದಿಂದ ನೊಂದು ಮೂರ್ಛಿತನಾಗಲು, ಅವನನ್ನು ಸೆರೆ ಹಿಡಿದು, ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು, ಯುದ್ಧರಂಗವನ್ನು ಬಿಟ್ಟು ಬೇಗನೆ ಹೋಗುತ್ತಿದ್ದ ಸುಶರ್ಮನನ್ನು ಧರ್ಮಜನು ಕಂಡು, ವಿರಾಟನನ್ನು ಬಿಡಿಸಿಕೊಂಡು ಬರುವಂತೆ ಭೀಮನಿಗೆ ಅಪ್ಪಣೆ ಮಾಡಿದನು. ಭೀಮನು ಹೆಬ್ಬುಲಿಯಂತೆ ಶತ್ರುಪಡೆಯ ಮೇಲೆ ಕಾಣಿಸಿಕೊಂಡು, ಎಲ್ಲರನ್ನೂ ಸಂಹರಿಸುತ್ತ, ವಿರಾಟ ಸಮೇತನಾದ ಸುಶರ್ಮನನ್ನು ಹಿಡಿದು, ಧರ್ಮರಾಯನಲ್ಲಿ ತಂದು ಬಿಟ್ಟನು. ತ್ರಿಗರ್ತಸೇನೆಯು ದಿಕ್ಕಾಪಾಲಾಗಿ ಓಡಿಹೋಯಿತು.

ಕಂಕನು ತನಗೆ ಮಾಡಿದ ಮಹೋಪಕಾರಕ್ಕಾಗಿ ವಿರಾಟನು ಬಹು ಹರ್ಷಿತನಾಗಿ, 'ನಿನಗೆ ಬೇಕಾದುದನ್ನು ಕೊಡುವೆನು! ಕೇಳಿಕೊ' ಎಂದನು. ಆಗ ಕಂಕನು ವಿರಾಟನನ್ನು ಕುರಿತು, "ಸುಶರ್ಮನನ್ನು ವಸ್ತು ವಾಹನ ಭೃತ್ಯಸಮೇತವಾಗಿ ಸ್ವೇಚ್ಛೆಯಾಗಿ ಬಿಟ್ಟುಬಿಡು. ಎಲ್ಲರಿಗೂ ಮನಸ್ಸಂತೋಷವಾಗುವುದಕ್ಕಾಗಿ ಈ ವಿಜಯದ ಸುದ್ದಿಯನ್ನು ನಗರದಲ್ಲೆಲ್ಲ ಮೊದಲೇ ಸಾರಿಸುವಂತೆ ಮಾಡು. ಪುರವನ್ನು ಅಟ್ಟಹಾಸದಿಂದ ಪ್ರವೇಶಿಸು. ಇವೇ ಈಗ ನನಗೆ ಬೇಕಾದವುಗಳು" ಎಂದನು. ವಿರಾಟನು ಕಂಕನ ಅಪ್ಪಣೆಯಂತೆ ಸುಶರ್ಮನನ್ನು ಬಿಟ್ಟು, ಸೂರ್ಯೋದಯದೊಳಗಾಗಿ ತೋರಣ ಪತಾಕೆಗಳಿಂದ ನಗರಾಲಂಕಾರವಾಗಬೇಕೆಂದೂ, ಈ ವಿಜಯದ ಸಂಗತಿಯನ್ನು ನಗರದಲ್ಲೆಲ್ಲ ಡಂಗುರ ಹೊಡಿಸಬೇಕೆಂದೂ ಕಟ್ಟು ಮಾಡಿದನು.

ಇತ್ತ ನವಮಿ ದಿವಸ ಸೂರ್ಯೋದಯಕಾಲಕ್ಕೆ ಸರಿಯಾಗಿ, ದುರ್ಯೋಧನನು ಭೀಷ್ಮ ದ್ರೋಣ ಕೃಪ ಕರ್ಣಾದಿಗಳೊಡನೆ, ಉತ್ತರ ದಿಗ್ಭಾಗದಲ್ಲಿ ಬಂದಿಳಿದನು. ಗೋಗ್ರಹಣವೂ ಆಯಿತು. ಗೋಪಾಲಕರು ಓಡಿ ಬಂದು ವಿರಾಟನನ್ನು ಕಾಣದೆ, ಅಂತಃಪುರದಲ್ಲಿ ಸ್ತ್ರೀಕೇಳಿಯಲ್ಲಿದ್ದ ವಿರಾಟಪುತ್ರನಾದ ಉತ್ತರನಿಗೆ ಕೌರವರಿಂದಾದ ಗೋಗ್ರಹಣದ ಸಮಾಚಾರವನ್ನು ಬಿನ್ನಹ ಮಾಡಿಕೊಂಡರು ಆಗ ಉತ್ತರನು "ಅಶ್ವಹೃದಯಜ್ಞನಾದ ಸಾರಥಿಯೊಬ್ಬನಿದ್ದಿದ್ದರೆ, ಕೌರವನ ಪಡೆಯನ್ನು ಶಸ್ತ್ರಾಸ್ತ್ರಪ್ರಯೋಗದಿಂದ, ಅರ್ಜುನನೋ ಎಂಬಂತೆ, ಮುಹೂರ್ತಮಾತ್ರದಲ್ಲಿ ಯಮಪುರಿಗೆ ಕಳುಹಿಸಿ, ಗೋವುಗಳನ್ನು ಹಿಂದಿರುಗಿಸುತ್ತಿದ್ದೆನು. ಏನು ಮಾಡಲಿ! ಇದ್ದ ಒಬ್ಬ ಸಾರಥಿಯು ಒಂದು ತಿಂಗಳ ಹಿಂದೆಯೇ ಕಾಲಾಧೀನನಾದನು" ಎಂದು ತನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಿದ್ದನು. ಅರ್ಜುನನಿಂದ ಪ್ರೇರಿತಳಾದ ಸೈರಂಧ್ರಿಯು ಉತ್ತರೆಯ ಬಳಿಗೆ ಹೋಗಿ, "ಬೃಹನ್ನಳೆಯು ಅಶ್ವಹೃದಯಜ್ಞಳು. ಖಾಂಡವವನ ದಹನ

ಕಾಲದಲ್ಲಿ, ಅರ್ಜುನನಿಗೆ ಸಾರಥ್ಯವನ್ನು ಮಾಡಿ, ಅವನಿಗೆ ಜಯವನ್ನುಂಟುಮಾಡಿಕೊಟ್ಟಳು. ನೀನು ಹೋಗಿ ಬೃಹನ್ನಳೆಯನ್ನು ನಿನ್ನ ಸಹೋದರನಾದ ಉತ್ತರನಿಗೆ ಸಾರಥಿಯಾಗಿ ಗೋವುಗಳನ್ನು ಕಾಪಾಡಬೇಕೆಂದು ಕೇಳಿದರೆ, ನಿನ್ನ ಮಾತಿಗೆ ಕಟ್ಟುಬಿದ್ದು, ಮೀರಲಾರದೆ, ಒಪ್ಪಿಕೊಳ್ಳುವನು. ಕಿರೀಟಿಗೆ ಶಿಷ್ಯಭಾವವನ್ನು ವಹಿಸಿದ್ದ ಈತನನ್ನು ಧನುರ್ವಿದ್ಯೆಯಲ್ಲಿ ಆತನಿಗೆ ಸಮಾನನೆಂದು ಹೇಳಬಹುದು. ಬೃಹನ್ನಳೆಯು ಉತ್ತರನಿಗೆ ಸಾರಥ್ಯವನ್ನು ಮಾಡಿದರೆ, ಹಸುಗಳನ್ನು ತೆಗೆದುಕೊಂಡು ಹೋಗುವುದಕ್ಕೆ, ಕೌರವರು ಎಷ್ಟುಮಾತ್ರದವರು! ಬೃಹನ್ನಳೆಯ ಸಾರಥ್ಯದಿಂದ ದೇವದಾನವರನ್ನಾದರೂ ಜಯಿಸಬಹುದು" ಎಂದಳು. ಕೂಡಲೆ ಉತ್ತರೆಯು, ಸೈರಂಧ್ರಿಯೊಡನೆ ಉತ್ತರನ ಬಳಿಗೆ ಹೋಗಿ, 'ಬೃಹನ್ನಳೆಯನ್ನು ಸಾರಥಿಯಾಗುವಂತೆ ಕೇಳಿಕೊ' ಎಂದಳು. ಆಗ ಉತ್ತರನು "ನಾನು ಆ ಕೆಲಸ ಮಾಡಲಾರೆ. ಪುರುಷಶ್ರೇಷ್ಠನಾದ ನಾನು ನಪುಂಸಕನೊಡನೆ ಮಾತಾಡುವುದಿಲ್ಲವೆಂಬುದು ನನ್ನ ವ್ರತವೆಂಬುದನ್ನು ನೀನು ಬಲ್ಲೆಯಷ್ಟೆ. ಬೃಹನ್ನಳೆಯ ಸಾರಥ್ಯವನ್ನು ನಾನೊಡಂಬಡುವೆನೆ?" ಎಂದನು. ಆಗ ಸೈರಂಧ್ರಿಯು ರಾಜಕುಮಾರನನ್ನು ನೋಡಿ, "ಭಯವು ಬಂದ ಸಮಯದಲ್ಲಿ ವ್ರತವನ್ನು ಎಣಿಸದೆ ಆಪತ್ತನ್ನು ಪರಿಹರಿಸಿಕೊಳ್ಳುವದು ಧರ್ಮಶಾಸ್ತ್ರಸಂಗತವಾದುದು. ನೀನು ಬೃಹನ್ನಳೆಯೊಡನೆ ಮಾತನಾಡದಿದ್ದರೆ, ನಿನ್ನ ಸಹೋದರಿಯ ಮೂಲಕ ಹೇಳಿ ಕಳುಹಿಸು. ಬೃಹನ್ನಳೆಯು ಒಡಂಬಡುವನು. ಅವನು ಸಾರಥಿಯಾದರೆ ನೀನು ಕೌರವರನ್ನು ಸದೆಬಡಿದು ಗೋವುಗಳನ್ನು ತಿರುಗಿಸಿಕೊಂಡು ಬರಬಹುದು. ಇದರಲ್ಲಿ ಸಂಶಯವಿಲ್ಲ" ಎಂದಳು.

ಆಗ ಉತ್ತರನು ಬೃಹನ್ನಳೆಯನ್ನು ಕರೆದುಕೊಂಡು ಬರುವಂತೆ ಉತ್ತರೆಯನ್ನು ಕಳುಹಿಸಿದನು. ಉತ್ತರೆಯು ಬೃಹನ್ನಳೆಯನ್ನು ಕಂಡು, "ಕೌರವಾದಿಗಳು ಉತ್ತರದಿಗ್ಭಾಗದಲ್ಲಿ ಗೋಗ್ರಹಣ ಮಾಡಿದ್ದಾರೆ.

ನನ್ನ ಅಣ್ಣನಾದ ಉತ್ತರನಿಗೆ ಸರಿಯಾದ ಸಾರಥಿಗಳಿಲ್ಲ. ನೀನು ಅವ ನಿಗೆ ಸಾರಥಿಯಾಗಬೇಕು. ನೀನು ಅದಕ್ಕೆ ಒಡಂಬಡದಿದ್ದರೆ. ಇಗೋ ! ನಿನ್ನ ಮುಂದೆ ಇಲ್ಲೀ ಪ್ರಾಣ ಬಿಡುತ್ತೇನೆ '' ಎಂದಳು. ಈ ಮಾತುಗ ಳನ್ನು ಕೇಳಿ ಬೃಹನ್ನಳೆಯು " ನಿನಗೆ ಪ್ರಿಯವನ್ನು ಮಾಡದಿರುವ ಈ ನನ್ನ ಶರೀರವೂ ಜೀವನವೂ ಏತಕ್ಕೆ ! ನೀನು ಎಲ್ಲಿಗೆ ಹೋಗೆಂದರೂ ಅಲ್ಲಿಗೆ ಹೋಗುತ್ತೇನೆ. ಅಷ್ಟುಮಾತ್ರವಲ್ಲ ಅಗ್ನಿಪ್ರವೇಶ ಮಾಡೆಂದರೂ ಸಿದ್ಧ ನಾಗಿದ್ದೇನೆ. ನೀನು ಪ್ರಾಣತ್ಯಾಗ ಮಾಡುವ ಕಾರ್ಯವೇನಿದೆ " ಎಂದು ಹಿಂದೆಯೇ ಹೋದನು.

ಕುಮಾರಿಯೊಡನೆ ಬಂದ ಬೃಹನ್ನಳೆಯನ್ನು ನೋಡಿ, ವಿರಾಟ ಪುತ್ರನು. " ಕೌರವರೊಡನೆ ಯುದ್ಧಮಾಡುವ ಸನ್ನಿವೇಶವು ಒದಗಿದೆ. ನಮ್ಮ ದೇಶದ ಗಡಿಯನ್ನು ಅವರು ದಾಟುವದರೊಳಗಾಗಿ ಅವರೊಡನೆ ಯುದ್ಧಮಾಡಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ ನೀನು ನನಗೆ ಸಾರ ಥ್ಯವನ್ನು ಮಾಡಬೇಕು. ಇದೇ ನನ್ನ ಬೇಡಿಕೆ. " ಎಂದನು. " ನೃತ್ಯ ಗೀತ ವಾದ್ಯಗಳನ್ನು ತಿಳಿದಿರುವ ನನಗೆ ರಣದಲ್ಲಿ ಸಾರಥ್ಯ ಮಾಡುವ ಚಮತ್ಕಾರವೆಲ್ಲಿ ಬಂತು ?" ಎಂದನು. ಆಗ ಉತ್ತರನು " ಅಂತಃಪುರದ ಸ್ತ್ರೀಸಮೂಹವೆಲ್ಲವೂ ನಿನ್ನನ್ನು ಹೊಗಳುತ್ತಲಿದೆ. ಪಾಂಡವರನ್ನು ಚೆನ್ನಾ ಗಿ ಬಲ್ಲ ಈ ಸೈರಂಧ್ರಿಯು ನಿನ್ನ ವಿಷಯವಾಗಿ ಬಹಳ ಹೇಳುತ್ತಲಿ ದ್ದಾಳೆ. ಕವಚಗಳನ್ನು ತೊಟ್ಟು ಸಿದ್ಧನಾಗು. ತಡಮಾಡಿದರೆ ಕಾರ್ಯ ಕೆಟ್ಟೀತು. " ಎಂದನು. ಕೌರವ ಪಡೆಯೊಡನೆ ತಾನೇ ಯುದ್ಧ ಮಾಡಬೇ ಕೆಂದು ಚೆನ್ನಾಗಿ ಬಲ್ಲ ಸವ್ಯಸಾಚಿಯು, ಏನೂ ಅರಿಯದವನಂತೆ, ಅಂಗಿಯನ್ನು ತಳಕೆಳಕಾಗಿಯೂ, ಮೇಲುಮುಖನಾಗಿಯೂ, ತೊಟ್ಟು ಕೊಳ್ಳುತ್ತ, ರಾಜಕನ್ನಿಕೆಯರು ಕೇಕೇ ಹಾಕುವಂತೆ ಮಾಡಿದನು. ಇ ದನ್ನು ನೋಡಿ ರಾಜಪುತ್ರನು ತಾನೇ ಬೃಹನ್ನಳೆಗೆ ಕವಚವನ್ನು ಧರಿಸಿ ದನು. ಸುವರ್ಣಮಯವಾದ ರಥವು ಸಿದ್ಧವಾಯಿತು. ಆಗ ಉತ್ತರೆಯು

ಬೃಹನ್ನಳೆಯನ್ನು ಕುರಿತು "ಎಲೈ ಬೃಹನ್ನಳೆಯೇ, ದ್ರೋಣ ಭೀಷ್ಮ ಕರ್ಣಾದಿಗಳನ್ನು ಯುದ್ಧದಲ್ಲಿ ನಮ್ಮಣ್ಣನು ಜಯಿಸುವನು. ಆಗ ನೀನು ವಿವಿಧ ರತ್ನಗಳನ್ನೂ, ಮನೋಹರಗಳಾದ ವಸ್ತ್ರಗಳನ್ನೂ, ಬೊಂಬೆಗೆ ತರಬೇಕು." ಎಂದಳು. "ಮಹಾರಥಿಕರಾದ ಶತ್ರುಗಳನ್ನು ನಿಮ್ಮಣ್ಣನು ಜಯಿಸುವದಾದರೆ ನಿನ್ನ ಮನಸ್ಸಿಗೆ ಪ್ರಿಯವಾದ ವಸ್ತುಗಳನ್ನು ತಂದು ಕೊಡುವೆನು." ಎಂದು ಮಂದಹಾಸದಿಂದ ನುಡಿದನು. ಇಬ್ಬರೂ ರಥವನ್ನೇರಿದರು. ಎಲ್ಲರೂ ಜಯಘೋಷ ಮಾಡಿದರು.

ಮೊದಮೊದಲು ಉತ್ಸಾಹದಿಂದ ಉಬ್ಬಿದವನಾಗಿ ಉತ್ತರನು ಬೃಹನ್ನಳೆಯನ್ನು ಕುರಿತು, "ಶೀಘ್ರಗತಿಯಿಂದ ರಥವನ್ನು ಕೌರವ ಬಲವಿರುವಲ್ಲಿಗೆ ನಡೆಯಿಸು." ಎಂದನು. ಕುರುಸೇನೆಯು ಉತ್ತರ ಕುಮಾರನ ದೃಷ್ಟಿಗೆ ಬಿತ್ತು. ಎದೆಯೊಡೆಯಿತು. ಮುಖವು ವಿವರ್ಣವಾಯಿತು. ಗಂಟಲು ಒಣಗಿತು. ರೋಮಗಳು ನೆಟ್ಟಗಾದವು. ಶರೀರಾದ್ಯಂತವೆಲ್ಲವೂ ನಡುಗುವುದಕ್ಕೆ ಮೊದಲಾಯಿತು. ಅತಿರಥಮಹಾರಥರಾದ ಭೀಷ್ಮ ದ್ರೋಣ ಕರ್ಣರ ಮುಂದೆ ತಾನೊಬ್ಬ 'ಒಂದು ಒಣ ಹುಲ್ಲು ಕಡ್ಡಿ'. ಎಂಬ ಭಾವನೆಯು ಅವನ ಮನಸ್ಸಿನಲ್ಲಿ ಉದಯಿಸಿತು. ಪ್ರಾಣವನ್ನುಳುಹಿಸಿಕೊಳ್ಳಬೇಕೆಂಬ ಇಚ್ಛೆಯು ಪ್ರಬಲವಾಯಿತು. ಮಾಡುವದೇನು! ಎದೆಗಿಚ್ಚಿಲ್ಲದವರ ಬಾಳೆಲ್ಲಾ ಇಷ್ಟೆ! ಪ್ರಲಾಪಕ್ಕೆ ಪ್ರಾರಂಭಿಸಿದನು. ಬೃಹನ್ನಳೆಯು ಧೈರ್ಯ ಹೇಳುವುದಕ್ಕಾರಂಭಿಸಿದಳು. ರಥವು ಮುಂದೆ ಮುಂದೆ ನಡೆಯುತ್ತಲೇ ಇತ್ತು. ಮುಂದೆ ಮುಂದೆ ಹೋದಷ್ಟು ಪ್ರಾಣ ಭಯವು ಬಲವಾಗುತ್ತಾ ಬಂತು. "ಬೃಹನ್ನಳೆ ನೀನು ನನ್ನ ಸಾರಥಿಯಲ್ಲ. ಅಂತಕನ ಮನೆಗೊಯ್ಯುವ ಯಮಕಿಂಕರನು." ಎಂದು ಹೇಳಿ ರಥದಿಂದ ಧುಮ್ಮಿಕ್ಕಿ ಓಡುವದಕ್ಕೆ ಮೊದಲು ಮಾಡಿದನು. ಬೃಹನ್ನಳೆಯು ರಥವನ್ನು ನಿಲ್ಲಿಸಿ, ಉತ್ತರ ಕುಮಾರನನ್ನು ಬೆನ್ನಟ್ಟಿ ಹೋಗಿ, ಅವನನ್ನು ಹಿಡಿದುಕೊಂಡು, "ಎಲೈ ಕುಮಾರನೆ, ಇದು ಕ್ಷತ್ರಿಯನಿಗೆ ತರವಲ್ಲ.

ನೋಡಿದವರು ನಗುವರು. ಜೀವಗಳ್ಳನಾಗಿ ಶತ್ರುಗಳನ್ನು ನೋಡಿ ಓಡು ವದು ಶೌರ್ಯದ ಕುರುಹಲ್ಲ. ನಾನಿದ್ದೇನೆ ಹೆದರಬೇಡ. ಬಾ " ಎಂದು ಹೇಳಿ ಅವನನ್ನು ಕರದುಕೊಂಡು ಹೋಗಿ ಪುನಃ ರಥದ ಮೇಲೆ ಕುಳ್ಳಿ ರಿಸಿದನು. ಪುನಃ ಉತ್ತರನು ತನ್ನ ಸಾರಥಿಯನ್ನು ಕುರಿತು " ಎಲೈ ಬೃಹ ನ್ನಳೆಯೇ, ನೀನು ಏನು ಹೇಳಿದರೂ ನನ್ನ ಜೀವವು ತರತರನೆ ನಡುಗುತ್ತ ಲಿದೆ. ನಿನಗೆ ಬೇಕಾದುದನ್ನು ಕೊಡುವೆನು. ನನ್ನ ರಾಜ್ಯವನ್ನೆಲ್ಲಾ ಒಪ್ಪಿ ಸುವೆನು. ನನ್ನನ್ನು ಬಿಡು. ನನ್ನ ಸ್ನಗಲಿ ತಪಿಸುತ್ತಲಿರುವ ಸುಧೇಷ್ಣೆಯಲ್ಲಿಗೆ ನನ್ನನ್ನು ಕಳುಹಿಸಿಬಿಡು " ಎಂದು ಬಹುವಾಗಿ ಬೇಡಿಕೊಂಡನು.

ಆಗ ಅರ್ಜುನನು ನಸುನಗುತ್ತಾ " ಹೆದರಬೇಡ ನೀನು ಸಾರಥ್ಯ ವನ್ನು ಮಾಡಿದರೆ ಯುದ್ಧದಲ್ಲಿ ಜಯವು ಸಿದ್ಧ. ಗೆದ್ದರೆ, ಹಸುಗಳನ್ನು ತಿರುಗಿಸಿಕೊಂಡು ಹೋಗೋಣ ಒಾದು ವೇಳೆ ಸತ್ತರೆ, ವೀರಸ್ವರ್ಗವು ಪ್ರಾಪ್ತವಾಗುವುದು. ಇದಕ್ಕೇಕಿಷ್ಟು ಅಂಜಿಕೆ, ನಿನಗೆ ಯುದ್ಧಮಾಡ ಲಾಗದಿದ್ದರೆ, ಸಾರಥ್ಯಮಾಡು. ನಾನು ಯುದ್ಧಮಾಡಿ, ಶತ್ರುಗಳನ್ನು ಗೆದ್ದು, ಗೋವುಗಳನ್ನು ತಿರುಗಿಸುವೆನು. ಇದರಲ್ಲಿ ಸಂಶಯ ಬೇಡ " ಎಂದನು.

ಇತ್ತ ಕೌರವ ಮಧ್ಯದಲ್ಲಿದ್ದ ದ್ರೋಣನು ' ಸ್ತ್ರೀವೇಷಧಾರಿ ಯಾಗಿ ಉತ್ತರನನ್ನು ಬೆನ್ನಟ್ಟಿ ಹೋಗುತ್ತಿರುವ ಮಹಾವ್ಯಕ್ತಿಯೇ ಸವ್ಯಸಾಚಿ ' ಎಂದನು. ಆಗ ಕರ್ಣನು " ಬಾಲಭಾವದಿಂದ ಸಾರಥಿಗ ಳಿಲ್ಲದೆ, ನಪುಂಸಕನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಉತ್ತರನು ಬಂದಿರುವನು. ಅವನು ಅರ್ಜುನನೆಂದು ಎಣಿಸಬೇಡಿ. ಪ್ರಚ್ಛನ್ನರಾಗಿ ರುವ ಪಾಂಡವರು ಈಗ ಹೊರಗೆ ಬರುವರೆ, " ಎಂದನು. ಆಗ ಸುಯೋ ಧನನು " ಅವನು ಅರ್ಜುನನಾದರೆ ನಮಗನುಕೂಲವೇ ಆಯಿತು. ಆ ಸ್ತ್ರೀವೇಷಧಾರಿಯಾದ ವ್ಯಕ್ತಿಯು ಅರ್ಜುನನಾಗಲಿ, ಬಲಭದ್ರನಾಗಲಿ, ಪ್ರದ್ಯುಮ್ನನಾಗಲಿ, ಇಂದ್ರನಾಗಲಿ, ಯಾರೇ ಆಗಲಿ ನನ್ನ ಮುಂದೆ

ನಿಲ್ಲಲಾರರು ಈ ನಪುಂಸಕನು ಹೇಗೆ ನಿಂತಾನು ಯುದ್ಧ ಮಾಡಿದರೆ ತೀಕ್ಷ್ಣವಾದ ಬಾಣಗಳಿಂದ ಹೊಡೆದು ಕೆಡಹುವೆನು '' ಎಂದನು.

ಅಜ್ಞಾತವಾಸದ ವಾಯಿದೆ ಮುಗಿಯುವುದರೊಳಗಾಗಿ, ಅರ್ಜುನನು ಹೀಗೆ ಕಾಣಿಸಿಕೊಳ್ಳಬಹುದೆ, ಎಂದು ಬಹುವಾಗಿ ಪಶ್ಚಾತ್ತಾಪ ಪಡುತ್ತಾ, ದ್ರೋಣನು ಭೀಷ್ಮನನ್ನು ಕುರಿತು, '' ಎಲೈ ನದೀಪುತ್ರನೆ, ಪರ್ವತವೈರಿಯ ದೆಸೆಯಿಂದ ಹುಟ್ಟಿ, ವೃಕ್ಷದ ಹೆಸರುಳ್ಳವನಾಗಿ, ಲಂಕೇಶ್ವರನ ಉದ್ಯಾನಕ್ಕೆ ಶತೃವಾದವನೇ ಧ್ವಜದಲ್ಲಿ ಉಳ್ಳವನು, ಸ್ತ್ರೀರೂಪಧಾರಿಯಾಗಿ, ಯಾವನನ್ನು ಜೈಸಿ, ಗೋವುಗಳನ್ನು ತಿರುಗಿಸಿಕೊಂಡು ಹೋಗುವನೋ, ಅಂಥಾವನನ್ನು ರಕ್ಷಿಸಬೇಕು. '' ಎಂದನು. ಈ ಸಂಕೇತದ ಮಾತನ್ನು ಭೀಷ್ಮನು ಅರಿತು '' ಅವಧಿಯು ನಿನ್ನೆಗೆ ಆಗಿಹೋಯಿತು. ಪಾಂಡವರಿಗೆ ಪರರ ದೆಸೆಯಿಂದ ಭಯವನ್ನು ಶಂಕಿಸಲು ಕೆಲಸವಿಲ್ಲ '' ಎಂದನು.

ಇತ್ತ ಅರ್ಜುನನು ಸ್ಮಶಾನಸಮೀಪದಲ್ಲಿದ್ದ ಶಮೀವೃಕ್ಷವನ್ನು ಸೇರಿ, ಉತ್ತರನನ್ನು ಮರಕ್ಕೆ ಹತ್ತಿಸಿ, ಪುರುಷಾಕಾರವಾಗಿ ಕಟ್ಟಿರುವ ಆಯುಧಗಳ ಮೂಟೆಯನ್ನು ತರುವಂತೆ ಹೇಳಿದನು. ಉತ್ತರನು ಹಾಗೆಯೇ ಮರವನ್ನು ಹತ್ತಿ ಆಯುಧಗಳಿಂದ ಕೂಡಿದ ಚಕ್ಕಳದ ಗಂಟನ್ನು ಕೆಳಕ್ಕಿಳುಹಿಸಿ, ಗಂಟುಗಳನ್ನು ಸಡಲಿಸಿದನು. ದಿವ್ಯಾಸ್ತ್ರಗಳ ಜ್ಯೋತಿಯಿಂದ ಅವನ ಕಣ್ಣುಗಳು ಕೋರೈಸಿ ಹೋದವು. ರಪ್ಪೆಗಳು ತಾನಾಗಿಯೇ ಮುಚ್ಚಿಕೊಂಡವು. ಶರೀರವೆಲ್ಲವೂ ಅಶ್ವತ್ಥವೃಕ್ಷದ ಎಲೆಯಂತೆ ನಡುಗುವುದಕ್ಕೆ ಮೊದಲಾಯಿತು. ದಿಗ್ಭ್ರಾಂತನಾಗಿ, ಏನೂ ತೋಚದವನಾಗಿ, ಸುಮ್ಮನೆ ನೆಲದಮೇಲೆ ಕುಳಿತುಬಿಟ್ಟನು. ರಾಜ ಪುತ್ರನ ಈ ಸ್ಥಿತಿಯನ್ನು ನೋಡಿ, ಅರ್ಜುನನು, ' ಹೆದರದೆ ಗಾಂಡೀವವನ್ನು ಬೇಗ ಕೊಡು ' ಎಂದನು. ಗಾಂಡೀವ ಎಂಬ ಶಬ್ದವನ್ನು ಕೇಳಿದೊಡನೆಯೇ ಸ್ವಲ್ಪಧೈರ್ಯಬಂತು. ಎದುರಿಗಿರುವ ವ್ಯಕ್ತಿಯು ಸಾಮಾನ್ಯವ್ಯಕ್ತಿಯು

ಲ್ಲವೆಂದಾಯಿತು. ಹಾಗೆಯೇ ಕಣ್ಣುಮುಚ್ಚಿ, ಕಣ್ಣುಬಿಡುತ್ತಾ, ಮಹಾ ಜ್ವಾಲಾ ಸಮೂಹಗಳಿಂದ ಕೂಡಿರುವ ಧನುಸ್ಸುಗಳನ್ನು ನೋಡುತ್ತ, ಕುತೂಹಲ ಉಂಟಾಗಲು, ಆಯುಧಗಳ ಮತ್ತು ಅವುಗಳನ್ನು ಧರಿಸುವ ನರ ಪೂರ್ವೋತ್ತರಗಳನ್ನು ತಿಳಿದುಕೊಳ್ಳಲು ಪ್ರಶ್ನೆಮಾಡಿದನು. ಆಗ ಅರ್ಜುನನು, 'ಕಂಕ ವಲಲ ಬೃಹನ್ನಳೆ ದಾಮಗ್ರಂಥಿ ತಂತಿಪಾಲ ಕರಾದ ನಾವೇ ಪಾಂಡವರು' ಎಂದು ಹೇಳಿ ತನಗೆ ಹತ್ತು ಹೆಸರು ಗಳು ಬರಲು ಕಾರಣವನ್ನು ತಿಳಿಸಿ ಉತ್ತರಕುಮಾರನ ವಿಶ್ವಾಸವನ್ನು ಸಂಪಾದಿಸಿದನು.

ಪಾಂಡವರು ನನಗೆ ಸೋದರ ಮಾವಂದಿರಾಗಬೇಕು. ಎಂದು ಹೇಳುತ್ತ, ಉತ್ತರಕುಮಾರನು ಅರ್ಜುನನಿಗೆ ಸಾಷ್ಟಾಂಗನಮಸ್ಕಾರ ಮಾಡಿ, "ನೀನು ಹೇಳಿದಂತೆ ಕೇಳಿಕೊಂಡು ನಿನ್ನ ಭೃತ್ಯನಾಗಿರುವೆನು. ಮಾತಲಿಯು ಇಂದ್ರನಿಗೆ ಸಾರಥ್ಯ ಮಾಡಿದಂತೆ ಇಂದು ನಿನಗೆ ನಾನು ಸಾರಥ್ಯವನ್ನು ಮಾಡುವೆನು" ಎಂದು ಹೇಳುತ್ತ ಗಾಂಡೀವ ಧನುಸ್ಸನ್ನು ತೆಗೆದು ಅರ್ಜುನನ ಕೈಗೆ ಕೊಟ್ಟನು. ಉಳಿದ ಆಯುಧಗಳನ್ನು ಹಾಗೆ ಯೆ ಕಟ್ಟಿರಿಸಿ ರಥವನ್ನೇರಲು ಸಿದ್ಧನಾದನು.

ರಥದಿಂದ ಧುಮ್ಮಿಕ್ಕಿ ರಣಹೇಡಿಯಂತೆ, ಜೀವಗಳ್ಳನಂತೆ, ಓಡಿ ಹೋಗುತ್ತಿದ್ದ ಉತ್ತರನು, ಬೃಹನ್ನಳೆಯ ನಿಜಸ್ವರೂಪವನ್ನು ತಿಳಿದೊಡ ನೆಯೇ, ಬದಲಾದನು. ಹೇಡಿಯು ವೀರನಾದನು. ಷಂಡನು ಪುರುಷ ನಾದನು. ಕುರುಸೈನ್ಯವನ್ನು ನೋಡಿ ಮಾತಾಡಲು ಗಂಟಲು ಒಣಗಿ ಹೋಗಿದ್ದ ಉತ್ತರನು ಅಂದು ತನ್ನನ್ನು ಮಾತಲಿಗೆ ಹೋಲಿಸಿಕೊಳ್ಳು ವಷ್ಟು ಧೈರ್ಯಶಾಲಿಯಾದನು. ಇದು ಯಾವುದರ ಪ್ರಭಾವ! ಬೃಹನ್ನ ಳೆಯು ಅರ್ಜುನನಾದುದರ ಪ್ರಭಾವವಲ್ಲವೆ!

ಬೃಹನ್ನಳೆಯು ಬಳೆಗಳನ್ನು ಬಿಸಾಟು, ಸಮರದ ಉಡಿಗೆ ತೊಡಿಗೆ ಗಳನ್ನು ತೊಟ್ಟು, ಗಾಂಡೀವಧನುರ್ಧಾರಿಯಾಗಿ, ಹೆದೆಯನ್ನೇರಿಸಿ, ಧನು

ಷ್ಟಂಕಾರ ಮಾಡುತ್ತ, ಸಮಸ್ತ ದೇವತೆಗಳಿಗೂ ನಮಸ್ಕಾರ ಮಾಡಿ ಸಮರಕ್ಕನುವಾದನು.

ರಥದಲ್ಲಿ ಕುಳಿತು, ಎದುರಾಳಾಗಿ ಬರುತ್ತಿರುವ ಮಹಾವ್ಯಕ್ತಿಯು ಸವ್ಯಸಾಚಿ ಎಂದು, ಎಲ್ಲರಿಗೂ ದೃಢಪಟ್ಟಿತು. ಆಗ ಕೌರವೇಶ್ವರನು, ಭೀಷ್ಮಾದಿಗಳನ್ನು ಕುರಿತು, "ಸುಶರ್ಮನ ಸಂಗತಿಯು ಇದುವರೆಗೂ ತಿಳಿಯಲೇ ಇಲ್ಲ. ತ್ರಿಗರ್ತರು, ವಿರಾಟರಾಯನ ಪಶುಸಮೂಹವನ್ನು ಕಾಣದೆ ಹೋದರೊ, ಪರಾಜಿತರಾದರೊ, ಅಥವಾ ನಮ್ಮನ್ನು ವಂಚಿಸಿ ವಿರಾಟನೊಡನೆ ಬೆರತರೊ, ಯಾವುದೂ ತಿಳಿಯಲಿಲ್ಲ. ಈಗ ಯುದ್ಧ ಮಾಡಿಯೇ ತೀರಬೇಕೆಂಬುದು, ನನ್ನ ನಿಶ್ಚಯ. ಅರ್ಜುನನು ಬಂದುದನ್ನು ನೋಡಿ, ಆಯುಧೋಪಜೀವಿಗಳಿಗೆ, ಯುದ್ಧ ಮಾಡುವದಕ್ಕಿಂತಲೂ ಬೇರೊಂದು ಲೇಸಲ್ಲೆಂದು ಎಣಿಸದೆ, ಎಲ್ಲರೂ ಭಯಪಟ್ಟಿದ್ದಾರೆ. ಬಂದ ಕೆಲಸವನ್ನು ಸಾಧಿಸದೆ, ಹಿಂದಿರುಗುವುದಿಲ್ಲವೆಂಬ ದೃಢಮನ ನಿಮಗಿದ್ದಲ್ಲಿ, ಕಾಳಗಕ್ಕೆ ಅನುವಾಗಿ; ಇಲ್ಲವಾದರೆ ತಪಸ್ಸಿಗೆ ನಡೆಯಿರಿ. ದುರ್ನಿಮಿತ್ತಗಳನ್ನು ಮುಂದಿಟ್ಟುಕೊಂಡು ಅರಮನಸ್ಸಿನಿಂದ ಯುದ್ಧ ಮಾಡಬೇಡಿ. ಎಲ್ಲರೂ ನನ್ನೊಡನೆ ಸಹಕಾರ ಮಾಡಿ, ಅಪಕೀರ್ತಿ ಬರದಂತೆಯೂ, ಅಪಜಯವು ಆಗದಂತೆಯೂ, ಉಚಿತವಾದ ಯತ್ನವನ್ನು ಯೋಚಿಸಿ, ಒಳತೋಟಿಗಳಿಗೆ ಅವಕಾಶ ಕೊಡದೆ, ನನ್ನನ್ನುದ್ಧರಿಸಬೇಕು" ಎಂದನು.

ದ್ರೋಣರ ಸಲಹೆಯಂತೆ ದುರ್ಯೋಧನನು ಹಸುಗಳನ್ನು ಮುಂದು ಮಾಡಿಕೊಂಡು ಶೀಘ್ರಗತಿಯಿಂದ ಹಸ್ತಿನಾಪುರಾಭಿಮುಖನಾದನು. ಇತ್ತ ಅರ್ಜುನನು ದೇವದತ್ತವೆಂಬ ಶಂಖವನ್ನು ಊದುತ್ತ, ಗಾಂಡೀವ ಗುಣಧ್ವನಿ ಮಾಡುತ್ತ ಎದುರಿಗಿರುವ ಸೈನ್ಯಮಧ್ಯದಲ್ಲಿ ಕೌರವೇಶ್ವರನನ್ನು ಕಾಣದೆ, ಉಳಿದವರನ್ನು ಬಿಟ್ಟು, ರಥವನ್ನು ಪೂರ್ವಾಭಿಮುಖವಾಗಿ ನಡಸುವಂತೆ ಹೇಳಿ, ಅಲ್ಪಕಾಲದಲ್ಲಿಯೇ, ಗೋಸಮೂಹಕ್ಕೂ ದುರ್ಯೋಧನನಿಗೂ ನಡುವೆ ನಿಂತನು.

ಸುಯೋಧನನನ್ನು ರಕ್ಷಿಸಲು ಕರ್ಣಾದಿಗಳು ಅವನ ಬೆನ್ನಟ್ಟಿ ಹೋದರು. ಪ್ರಳಯಕಾಲದ ಕಾರ್ಮುಗಿಲಂತೆ ಕುರುಸೇನೆಯು ಅರ್ಜುನನ ಮೇಲೆ ಕಾಣಿಸಿಕೊಳ್ಳಲು, ಪ್ರಳಯಕಾಲದ ವಾಯುವಿನೋಪಾದಿಯಲ್ಲಿ ಅರ್ಜುನನು ಶತ್ರುಗಳ ಮೇಲೆ ಬಿದ್ದನು. ಗಾಂಡೀವಧನುಸ್ಸಿನಿಂದ ಹೊರಡುತ್ತಿರುವ ಶಸ್ತ್ರಾಸ್ತ್ರಗಳ ವೇಗವನ್ನೂ, ಪೆಟ್ಟನ್ನೂ, ತಾಳಲಾರದೆ, ಅತಿರಥಮಹಾರಥರಾದ ಭೀಷ್ಮ, ದ್ರೋಣ, ಕೃಪ, ಕರ್ಣರು ಒಬ್ಬೊಬ್ಬರಾಗಿ, ಹಿಮ್ಮೆಟ್ಟಿದರು. ಕೊನೆಗೆ ಎಲ್ಲರೂ ಒಟ್ಟಾಗಿ ಅರ್ಜುನನನ್ನು ಮುತ್ತಿದರು. ಉತ್ತರನು ಘಾಸಿಯಾಗಿ ನಡುಗಿದನು. ಅರ್ಜುನನಿಗೂ ಸ್ವಲ್ಪ ಎದೆ ಹಾರಿತು. ಕೂಡಲೆ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ, ಎಲ್ಲರನ್ನೂ ನಿಶ್ಚೇತನರನ್ನಾಗಿಯೂ, ಮರೆವುಳ್ಳವರನ್ನಾಗಿಯೂ ಮಾಡಿ ಉತ್ತರೆಯ ಮಾತುಗಳನ್ನು ಸ್ಮರಿಸಿಕೊಂಡು, ಉತ್ತರನಿಂದ ಉತ್ತಮವಾದ ಚೀನಾಂಬರಗಳನ್ನೂ ವಜ್ರ ವೈಡೂರ್ಯಗಳನ್ನೂ ಕೊಳ್ಳೆಹೊಡೆಯಿಸಿ, ಎಲ್ಲವನ್ನೂ ರಥದ ಮೇಲಿರಿಸಿಕೊಂಡು, ಇದಿರಾಳುಗಳಿಲ್ಲದೆ, ತಾನೇ ತಾನಾಗಿ ಯುದ್ಧರಂಗದಲ್ಲಿ ಸಂಚರಿಸುತ್ತಿದ್ದನು.

ಎಚ್ಚತ್ತ ಬಳಿಕ ಕೌರವೇಶ್ವರನು ಭೀಷ್ಮನಲ್ಲಿ ಹೋಗಿ ಪುನಃ ಯುದ್ಧಪ್ರಸ್ತಾವ ಮಾಡಿದನು. ಆಗ ಭೀಷ್ಮನು, "ನೀವುಗಳೆಲ್ಲರೂ ಎಚ್ಚರ ತಪ್ಪಿ ಬಿದ್ದಿರುವಾಗ ನಿಮ್ಮ ಮಣಿಮಕುಟಗಳನ್ನು ಕೊಳ್ಳೆ ಹೊಡೆದು, ರಣರಂಗದಲ್ಲಿ ಇದಿರಾಳುಗಳಿಲ್ಲದೆ ತಾನೇ ತಾನಾಗಿ ಓಡಾಡುತ್ತಿರುವ ಅತಿ ಭಯಂಕರನಾದ ಪಾರ್ಥನ ಕೂಡೆ ತಿರುಗಿ ಬವರವೆ? ಸಾಕು. ಯುದ್ಧದ ಮಾತನ್ನು ಬಿಟ್ಟು, ಕಳೆದುಳಿದ ಸೈನ್ಯದೊಡನೆ ಹಸ್ತಿನಾಪುರಕ್ಕೆ ಹಿಂದಿರುಗು; ಬೇರೆ ದುರಾಲೋಚನೆ ಮಾಡಬೇಡ" ಎಂದನು. ವಿಫಲ ಮನೋರಥನಾಗಿ, ಕೌರವನು, ಭೀಷ್ಮವಾಕ್ಯದಂತೆ ಹಸುಗಳನ್ನು ಬಿಟ್ಟು ಬಂದ ದಾರಿ ಹಿಡಿದನು

ಹಸ್ತಿನಾಪುರವನ್ನು ಸೇರಿ, ದುರ್ಯೋಧನನು ಭೀಷ್ಮನನ್ನು ಕುರಿತು, ಗಡುವು ಮುಗಿಯುವುದರೊಳಗಾಗಿ, ಪಾಂಡುತನಯರಲ್ಲೊಬ್ಬನಾದ ಅರ್ಜುನನು ನಮಗೆ ಕಾಣಿಸಿಕೊಂಡುದರಿಂದ, ಮರಳಿ ಪ್ರತಿಜ್ಞಾಪಾಲನೆಗಾಗಿ, ಅವರು ಅಡವಿಗೆ ಹೋಗಬೇಕಲ್ಲವೆ?" ಎಂದನು. ಆಗ ಭೀಷ್ಮನು "ಸೌರಮಾನದಂತೆ ಪಾರ್ಥನು ಕಾಣಿಸಿಕೊಂಡ ಹಿಂದಿನ ದಿವಸಕ್ಕೆ ಅವಧಿಯು ಕಳೆದು ಹೋಯಿತು. ಚಾಂದ್ರಮಾನರೀತಿಯಿಂದ ಕಳೆದು ಎರಡು ತಿಂಗಳುಗಳಾದವು" ಎಂದು ನುಡಿದನು.

ಇತ್ತ ಅರ್ಜುನನು, ಗೋಸಮೂಹವನ್ನು ವಿರಾಟನಗರಿಯ ಕಡೆ ತಿರುಗಿಸಿ, ಉತ್ತರನೊಡನೆ ಪುನಃ ಬನ್ನಿಯ ಮರವನ್ನು ಸೇರಿ, ತನ್ನ ಆಯುಧಗಳನ್ನು ಮೊದಲಿದ್ದಂತೆ ಇರಿಸಿ, ಪುನಃ ಬೃಹನ್ನಳೆಯ ವೇಷಧಾರಿಯಾಗಿ, ಯಾರಿಗೂ ಈ ಗುಟ್ಟನ್ನು ತಿಳುಹಿಸಕೂಡದೆಂದು ಉತ್ತರಕುಮಾರನಿಗೆ ಕಟ್ಟುಮಾಡಿ, ದೊರೆಗೆ ದಿಗ್ವಿಜಯ ಸಮಾಚಾರ ಕಳುಹಿಸಲು ಶೀಘ್ರಗಾಮಿಗಳಾದ ದೂತರನ್ನಟ್ಟಿ, ಸಂಧ್ಯಾಕಾಲಸಮಯದಲ್ಲಿ ನಗರ ಪ್ರವೇಶ ಮಾಡಬೇಕೆಂಬ ಉದ್ದೇಶದಿಂದ, ಉತ್ತರಕುಮಾರನೊಡನೆ ಅಲ್ಲಿಯೇ ನಿಂತನು.

ಕೌರವೇಶ್ವರಾ! ನೀನೊಂದೆಣಿಸಿದೆ; ದೈವವು ಬೇರೊಂದೆಣಿಸಿತು. ಕಿರೀಟಿಯು ಮಾತಲಿಯ ಸಾರಥ್ಯದಿಂದ ದೇವತೆಗಳಿಗಸಾಧ್ಯವಾದ ರಾಕ್ಷಸಶ್ರೇಷ್ಠರನ್ನು ಧ್ವಂಸ ಮಾಡಿದನು. ಉತ್ತರನ ಸಾರಥ್ಯದಿಂದ. ಅತಿರಥ ಮಹಾರಥರಾದ ಭೀಷ್ಮ ದ್ರೋಣ ಕೃಪ ಕರ್ಣರನ್ನು, ಲೀಲಾಮಾತ್ರದಿಂದ, ನಿಮಿಷಮಾತ್ರದಲ್ಲಿ, ನಿಶ್ಚೇತನರನ್ನಾಗಿ, ಮಾಡಿದನು. ಮುಂದೆ ಕೃಷ್ಣನ ಸಾರಥ್ಯದಿಂದ ಏನು ಮಾಡಬಲ್ಲನೋ ಹೇಳುವರಾರು!

|| ಶ್ರೀ ||

## ಆರನೆಯ ಅಧ್ಯಾಯ

# ಅರಿಷ್ಟ ಮತ್ತು ಶುಭೋದಯ

---

ತ್ರಿಗರ್ತರನ್ನು ಯುದ್ಧದಲ್ಲಿ ಸದೆಬಡಿದು, ಧರ್ಮರಾಯನ ಇಷ್ಟಾನುಸಾರ ಸೆರೆಯಾಳಾಗಿದ್ದ ಸುಶರ್ಮನನ್ನು ಯಥೇಷ್ಟವಾಗಿ ಹೋಗುವಂತೆ ಬಿಟ್ಟು, ಗೋವುಗಳನ್ನು ತಿರುಗಿಸಿಕೊಂಡು, ಕಂಕ ವಲಲ ದಾಮಗ್ರಂಥಿ ತಂತಿಪಾಲರೊಡನೆ, ಅತ್ಯಂತ ಅಟ್ಟಹಾಸದಿಂದ ವಿರಾಟನು ಪುರಪ್ರವೇಶ ಮಾಡಿದನು. ಉತ್ತರಕುಮಾರನು ಇದಿರುಗೊಳ್ಳಲು ಬರಲೇ ಇಲ್ಲ. ಏನೋ ಬರಲಿಲ್ಲವೆಂದಂದುಕೊಂಡನು.

ಮಧ್ಯಾಹ್ನ ಊಟವಾದ ಬಳಿಕ, ಸ್ವಲ್ಪ ವಿಶ್ರಾಂತಿಸುಖವನ್ನನುಭವಿಸಿ, ಹೊತ್ತು ಹೋಗಲು ಕಂಕನೊಡನೆ ಪಗಡೆಯಾಟಕ್ಕೆ ಕುಳಿತನು. ಈ ಪಗಡೆಯಾಟದಿಂದಲೆ ನಳನು ರಾಜ್ಯ ಕಳೆದುಕೊಂಡು ಕಾಡುಪಾಲಾದನು. ಪಾಂಡವರು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಪಡಬಾರದ ಬವಣೆಗಳನ್ನು ಅನುಭವಿಸಿದರು. ವಿರಾಟ! ಮುಂದೆ ನೀನೇನನುಭವಿಸುವಿಯೋ ಯಾರು ಹೇಳಬಲ್ಲರು!

ಸಂಧ್ಯಾಕಾಲಸಮಯವಾಗುತ್ತ ಬಂತು. ಪಗಡೆಯಾಟದಲ್ಲಿ ಬಹಳವಾಗಿ ಅಭಿರುಚಿಯುಳ್ಳ ಉತ್ತರಕುಮಾರನ ಸುಳಿವನ್ನೇ ಕಾಣದೆ, ಬಹು ಆತಂಕದಿಂದ, ಸುಧೇಷ್ಣೆಯನ್ನು ಕರೆಕಳುಹಿಸಿ ಕೇಳಲು, ಅವಳು 'ಉತ್ತರಗೋಗ್ರಹಣದ ವೃತ್ತಾಂತವನ್ನು ಗೋಪಾಲಕರಿಂದ ಕೇಳಿ, ಕೌರವಪಡೆಯನ್ನು ನಾಶಮಾಡಿ, ಗೋವುಗಳನ್ನು ಹಿಂದಿರುಗಿಸಿಕೊಂಡು

ಬರುವುದಕ್ಕಾಗಿ, ಬೃಹನ್ನಳೆಯನ್ನು ಸಾರಥಿಯನ್ನಾಗಿ ಮಾಡಿಕೊಂಡು, ಸಮರೋತ್ಸುಕನಾಗಿ, ಹೋಗಿರುವನು " ಎಂದಳು.

ಇದನ್ನು ಕೇಳಿ ವಿರಾಟನು ಮೂರ್ಛಾಕ್ರಾಂತನಾದವನಂತೆ, ಒಂದು ಘಳಿಗೆ ಸ್ತಂಭೀಭೂತನಾಗಿ ಕುಳಿತು ಹಾಗೆಯೇ " ಹಸುಗೂಸಿನಂತೆ, ಯುದ್ಧವೆಂಬುದನ್ನೇ ಅರಿಯದ ಉತ್ತರಕುಮಾರನು ಅತಿರಥ ಮಹಾರಥರಾದ ಭೀಷ್ಮ ದ್ರೋಣ ಕೃಪ ಕರ್ಣರೊಡನೆ ಕಾಳಗವಾಡಿ ಗೆಲ್ಲುವ ಪಾಪವುಂಟೆ! ಮಗನನ್ನು ಮನೆಯಲ್ಲಿಟ್ಟುಕೊಳ್ಳಲಾರದೆ, ನಪುಂಸಕನೊಡನೆ ರಣದೇವತೆಗೆ ಬಲಿ ಕೊಡಲು ಕಳುಹಿಸಿದೆ" ಎಂದು ಹಂಬಲಿಸುತ್ತ, " ಸೈನ್ಯವು ಯುದ್ಧಕ್ಕೆ ಹೊರಡಲು ಸಿದ್ಧವಾಗಲಿ " ಎಂದನು ಆಗ ಕಂಕನು " ಬೃಹನ್ನಳೆಯು ಸಾಮಾನ್ಯ ನಪುಂಸಕನೆಂದು ತಿಳಿಯಬೇಡ. ಅವನನ್ನು ಸಾರಥಿಯನ್ನಾಗಿ ಮಾಡಿಕೊಂಡು ಹೋಗಿರುವುದರಿಂದ ಯುದ್ಧದಲ್ಲಿ ಜಯವು ಸಿದ್ಧ. ಹಸುಗಳನ್ನೂ ತಿರುಗಿಸಿಕೊಂಡು ಬರುವುದರಲ್ಲಿ ಸಂಶಯವಿಲ್ಲ. ಬೃಹನ್ನಳೆಯು ಅರ್ಜುನನಲ್ಲಿ ಶಿಕ್ಷಿತನಾದವನು. ಅರ್ಜುನನು ಅವನಿಗೆ ಅನೇಕ ಶಸ್ತ್ರಾಸ್ತ್ರಪ್ರಯೋಗಗಳನ್ನು ಕಲಿಸಿಕೊಟ್ಟಿರುವನು ನೀನು ಭಯಪಡಬೇಕಾದ ಕೆಲಸವಿಲ್ಲ. ಸಮಾಧಾನಚಿತ್ತನಾಗು " ಎಂದನು.

ಆದರೂ ದೊರೆಗೆ ಧೈರ್ಯವುಂಟಾಗಲಿಲ್ಲ. ಎದೆ ಹೊಡೆದುಕೊಳ್ಳುವುದು ತಪ್ಪಲೇ ಇಲ್ಲ. ಆ ವೇಳೆಗೆ ಸರಿಯಾಗಿ ಗೋಪಾಲಕರು ಬಂದು, ಉತ್ತರಕುಮಾರನು ದಿಗ್ವಿಜಯ ಮಾಡಿಕೊಂಡು ಬಿಜಯಮಾಡುತ್ತಿರುವ ಸಮಾಚಾರವನ್ನು, ದೊರೆಗೆ ಬಿನ್ನಹ ಮಾಡಿಕೊಂಡರು. ಅದನ್ನು ಕೇಳಿ ದೊರೆಯು, ಆನಂದಾಬ್ಧಿಯಲ್ಲಿ ಮುಳುಗಿ ತೇಲಾಡುತ್ತ, ಮಗನ ಪರಾಕ್ರಮಕ್ಕೆ ತಲೆದೂಗುತ್ತ, ಕಂಕನೊಡನೆ ಹೆಮ್ಮೆ ಕೊಚ್ಚಿಕೊಂಡನು. ಕಂಕನು ತನ್ನಷ್ಟಕ್ಕೆ ತಾನು ಸುಮ್ಮನಿರದೆ " ಯುದ್ಧದಲ್ಲಿ ಶತ್ರುಗಳನ್ನು ಹಿಮ್ಮೆಟ್ಟಿಸಿ, ಗೋವುಗಳನ್ನು ತಿರುಗಿಸಿಕೊಂಡು ಬರುವಂತೆ ಮಾಡಿದ

ವನು, ನಿನ್ನ ಪುತ್ರನಲ್ಲ. ಸಾರಥಿಯಾಗಿ ಹೋಗಿದ್ದ ಬೃಹನ್ನಳೆ ಎಂದು ತಿಳಿ ಎಂದನು. ವಿರಾಟನು ಕಂಕನ ಮಾತುಗಳನ್ನು ಕೇಳಿ ಸಹಿಸಲಾರದೆ, ಕೋಪೋದ್ರಿಕ್ತನಾಗಿ ಹಲ್ಲು ಮುರಿ ಕಡಿಯುತ್ತ, ತನ್ನ ಕೈಯಲ್ಲಿದ್ದ ಪಗಡೆ ದಾಳಗಳಿಂದ ಕಂಕನ ನೆತ್ತಿಗೆ, ಬಲವಾದ ಪೆಟ್ಟಿಕ್ಕಿದನು. ಕೂಡಲೆ ರಕ್ತ ಧಾರೆಯು ಹೊರಟಿತು. ರಕ್ತದ ತೊಟ್ಟುಗಳನ್ನು ತನ್ನ ಬೊಗಸೆಯಲ್ಲಿ ಅಂತುಕೊಳ್ಳುತ್ತ, ನೋವನ್ನು ಸಹಿಸಿಕೊಂಡು, ಮರುಮಾತಾಡದೆ ಮೌನದಿಂದ ಮಾಲಿನಿ ಕಡೆ ತಿರುಗಿದನು. ' ಧರ್ಮಜನ ಶರೀರದಿಂದ ಒಂದು ತೊಟ್ಟು ರಕ್ತ ಭೂಪತನವಾದಲ್ಲಿ ಅದಕ್ಕೆ ಕಾರಣಭೂತರು ಯಾರೋ ಅವರ ವಂಶವನ್ನು ನಿರ್ಮೂಲ ಮಾಡಿಬಿಡುವೆನು ' ಎಂಬ ಅರ್ಜುನನ ಪ್ರತಿಜ್ಞೆಯೂ, ತಾನು ಸುಧೇಷ್ಣೆಗೆ ಕೊಟ್ಟ ವಚನವೂ, ಕೂಡಲೆ ಅವಳ ಮನಸ್ಸಿಗೆ ಹೊಳೆಯಿತು. ಆ ಕ್ಷಣ ತನ್ನ ಸೆರಗಿನಿಂದ ಧರ್ಮಜನ ಕೈಯಲ್ಲಿದ್ದ ರಕ್ತವನ್ನು ಚೆನ್ನಾಗಿ ತೊಡೆದು, ಗಾಯದಿಂದ ರಕ್ತವು ಬಾರದಂತೆ ಬಲವಾಗಿ ಒತ್ತಿ, ಅದು ಗಟ್ಟಿಯಾಗುವ ವರೆಗೂ ಹಿಡಿದು ನಿಂತಿದ್ದಳು. ಮಾಲಿನಿಯ ಈ ಕೆಲಸವನ್ನು ನೋಡಿ ದಿಗ್ಭ್ರಾಂತನಾದ ವಿರಾಟನು " ಎಲೌ ನಾರೀ ಶಿರೋಮಣಿಯೆ, ಹೀಗೇಕೆ ಮಾಡಿದೆ " ಎಂದನು. 'ಯತಿಶ್ರೇಷ್ಠರ ಶರೀರದಿಂದ ರಕ್ತಧಾರೆಗಳು ಬಿದ್ದು, ಎಷ್ಟು ಧೂಳೀಕಣಗಳು ನೆನೆವವೋ, ಅಷ್ಟು ತಲೆಯ ವರೆಗೂ ವಳೆಗೆಯಿಲ್ಲ. ಇದನ್ನು ತಿಳಿದೇ ನಿನ್ನ ಹಿತಕ್ಕಾಗಿ ಹೀಗೆ ಮಾಡಿದೆನು' ಎಂದಳು. ತಾನು ಮಾಡಿದುದು ತಪ್ಪೆಂದು ಮನಗಂಡು ಭಯಗ್ರಸ್ತನಾಗಿ ಏನಾಗುವದೋ ಎಂದು ಚಿಂತಿಸುತ್ತ ಸುಮ್ಮನಾದನು.

ಧರ್ಮಜ ! ಧೌಮ್ಯರ ಉಪದೇಶ ಮರತೆ. ಕ್ಷಮೆಯು ನಿನ್ನ ಕೈ ಬಿಟ್ಟಿತು. ಕೆಲಸವಿಲ್ಲದೆ ವಿರಾಟನ ಕೋಪವನ್ನೆಬ್ಬಿಸಿದೆ. ಘಾಯವಡೆದೆ, ಮುಂದೇನು ಮಾಡುವಿ, ತಮ್ಮಂದಿರನ್ನು ಹೇಗೆ ತಡೆಯುವಿ. ವಿರಾಟನನ್ನು ಭಿನ್ನು ಹಾಕಿಕೊಂಡು ನಿನ್ನ ಅಮಳಕೀರ್ತಿಯನ್ನು ಕಾಯುವೆಯೋ !

ತಮ್ಮಂದಿರಕೋಪಕ್ಕೆ ಅವನನ್ನು ತುತ್ತು ಮಾಡಿ ಕುಲಕ್ಕೆ ಕಳಂಕ ತರುವೆಯೋ !

ಸಂಧ್ಯಾಕಾಲ ಸಮಯವಾಯಿತು. ಮಂದಮಾರುತವು ಬೀಸತೊಡಗಿತು. ಪಕ್ಷಿಗಳು ತಮ್ಮ ತಮ್ಮ ಗೂಡುಗಳನ್ನು ಕಟ್ಟಿಕೊಂಡಿರುವ ವೃಕ್ಷಗಳ ಕಡೆ ಹೊರಟವು. ವಿರಾಟನ ಗೋಸಮೂಹವೆಲ್ಲವೂ ನಗರಪ್ರವೇಶ ಮಾಡಿತು. ಇತ್ತ ಅರ್ಜುನನು ಉತ್ತರನನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಪುರಾಭಿಮುಖನಾದನು. ಪುರಜನರೆಲ್ಲರೂ ದೊರೆಯು ಮೊದಲೆ ಕಟ್ಟುಮಾಡಿದ್ದಂತೆ ವಿರಾಟಗರದ ಗಡಿಯಲ್ಲಿ ಉತ್ತರನ ಆಗಮನವನ್ನೇ ಕಾಯುತ್ತಿದ್ದರು. ರಥವು ಸಮೀಪಿಸಿತು. ಎಲ್ಲರೂ ಸಂತೋಷಪ್ರದವಾದ ಜಯಘೋಷಮಾಡಿದರು. ಪುರಪ್ರವೇಶವಾಯಿತು. ಉತ್ತರಕುಮಾರನು ಅಂತಃಪುರಕ್ಕೆ ಹೋಗಿ ತಾನು ಕುರುಸೇನೆಯನ್ನು ನೋಡಿ ಎದೆಯೊಡೆದು ರಥದಿಂದ ಧುಮ್ಮಿಕ್ಕಿ ಓಡಿಬಂದುದನ್ನೂ, ಒಬ್ಬ ದೇವತಾಪುರುಷನು ಹಿಂದೆ ಬಂದು ತನ್ನನ್ನು ಎಳೆದುಕೊಂಡು ಹೋಗಿ ರಥದ ಮೇಲೆ ಕುಳ್ಳಿರಿಸಿ, ಸಾರಥ್ಯಮಾಡಲು ನಿಯೋಗಿಸಿ, ಸಮಸ್ತ ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸಿ, ಗೋವುಗಳನ್ನು ಹಿಂದಿರುಗಿಸಿದ ಕಥೆಯನ್ನೂ, ವಿಸ್ತಾರವಾಗಿ ಹೇಳಿದನು. ಬೃಹನ್ನಳೆಯು ತಾನು ತಂದ ಒಡವೆವಸ್ತುಗಳನ್ನು ಉತ್ತರಕುಮಾರಿಗೆ ಕೊಟ್ಟು ಮನಸ್ಸಂತೋಷಪಡಿಸಿದನು.

ಅಂದಿನ ರಾತ್ರಿ ಧರ್ಮಜನು ಅರ್ಜುನನನ್ನು ಕಾಣಿಸಿಕೊಳ್ಳಲೇ ಇಲ್ಲ. ಮಾರನೆ ದಿವಸ ಎಲ್ಲರೂ ಒಂದೆಡೆ ಸೇರಿದರು. ಸೈರಂಧ್ರಿಯೂ ಅವರದ್ದಲ್ಲಿಗೆ ಹೋದಳು. ಧರ್ಮರಾಯನು ತಲೆಗೆ ಮುಸುಕು ಹಾಕಿದ್ದನು. ಕಂಕನ ನೆತ್ತಿಯಿಂದ ಸೋರುತ್ತಿದ್ದ ಕೆನ್ನೀರು ಅರ್ಜುನನ ದೃಷ್ಟಿಗೆ ಬಿತ್ತು. ಧರ್ಮರಾಯನು ಏನೂ ಇಲ್ಲವೆಂದು ಒರಸಿಬಿಟ್ಟನು. ಆಗ ಅರ್ಜುನನು ಪಾಂಚಾಲಿಯ ಕಡೆ ತಿರುಗಿದನು. ಅವಳ ಮುಖದಿಂದ ವಿರಾಟನ

ಧೂರ್ತತನವು ಹೊರಬಿತ್ತು. ಭೀಮಾರ್ಜುನ ನಕುಲ ಸಹದೇವರು ವಿರಾಟನ ವಂಶವನ್ನು ತೊಡೆದು ಹಾಕಲು ನಿಶ್ಚಯಿಸಿದರು. ದ್ರೌಪದಿಯು ನಡುಗಿದಳು. ಧರ್ಮಜನು ಬೆಚ್ಚಿಬಿದ್ದನು. ಪಾಂಡವರಿದ್ದೆಡೆಯಲ್ಲಿ ಸರ್ವ ಸುಖವೆಂಬುದು ಹೋಗಿ ಸರ್ವನಾಶವೆಂದಾಯಿತು. ಧರ್ಮಜನು ಮುಂದೆ ಮಾಡುವದೇನು? ಸುಖವಾಗಿ ಯಾರಿಗೂ ತಿಳಿಯದಂತೆ ಒಂದು ವರ್ಷ ಕಾಲ ವಿರಾಟನ ಅರಮನೆಯಲ್ಲಿದ್ದು, ಅವನ ಉಪ್ಪುತಿಂದು, ಈಗ ಅವನಿಗೆ ಎರಡು ಬಗೆವುದೆಂತು? ಯಾರ ಭುಜಬಲಪರಾಕ್ರಮವೆಂಬ ಸಂಪತ್ತಿನಿಂದ ವಿರಾಟನು ಮೆರೆಯುತ್ತಿದ್ದನೋ ಅಂಥಾ ಕೀಚಕನಿಂದ ಎಂದೂ ಕೂಡದ ಅಗಲಿಕೆಯು ಅಂದು ತಮ್ಮಿಂದಾಯಿತು. ಗೋಗ್ರಹಣನಿಮಿತ್ತವಾಗಿ ತ್ರಿಗರ್ತರೊಡನೆಯೂ ಕೌರವರೊಡನೆಯೂ ಯುದ್ಧವಾದುದು ತಮ್ಮಿಂದಲೇ. ಈಗ ತಮ್ಮಿಂದ ಅವನ ವಂಶನಾಶವಾಗುವದೊಂದು ಮಾತ್ರ ಉಳಿದಿದೆ ಧರ್ಮಜನಿಗೆ ಕಷ್ಟಕ್ಕೆ ಬಂತು. ಆಗ ತಮ್ಮಂದಿರನ್ನು ಕುರಿತು ಯುಧಿಷ್ಠಿರನು "ನಾವು ಪಾಂಡವರೆಂದು ತಿಳಿದ ಮೇಲೆ ನಮ್ಮನ್ನು ತನ್ನ ಆಸ್ಥಾನದಲ್ಲಿ ತಿರಸ್ಕಾರಬುದ್ಧಿಯಿಂದ ಕಂಡರೆ ಆಗ ನೋಡೋಣ. ದುಡುಕಿ ಯಾವುದನ್ನೂ ಮಾಡಕೂಡದು. ವಿರಾಟನು ನಮ್ಮ ರಕ್ಷಣೆಗೆ ಪಾತ್ರನು. ನಿರಪರಾಧಿಯಾದ ವಿರಾಟನನ್ನು ನಿರ್ನಿಮಿತ್ತವಾಗಿ ಕೊಲ್ಲಬಾರದು. ನಿನಗೆ ಸಾರಥ್ಯವನ್ನು ಮಾಡಿದ ಉತ್ತರಕುಮಾರನು ನಮಪಗರಾಧಿಯಲ್ಲ. ಹಸುಮಗುವಿನಂತಿರುವ ಉತ್ತರೆಯು ನಮ್ಮೆಲ್ಲರ ಪ್ರೀತಿಗೆ ಪಾತ್ರಳು" ಎಂದನು. ಎಲ್ಲರ ಕಣ್ಣುಗಳಲ್ಲಿಯೂ ನೀರು ತುಂಬಿಕೊಂಡಿತು. ಕೋಪವೆಲ್ಲೋ ಹೋಯಿತು. ಎಲ್ಲರೂ ಧರ್ಮಜನ ಸಮ್ಮುಖವನ್ನು ಬಿಟ್ಟು ಹೊರಟು ಹೋದರು. ಮಾರನೆಯ ದಿವಸ ಸೂರ್ಯೋದಯ ಸಮಯದಲ್ಲಿ ಪಾಂಡವರು ಮಂಗಳಸ್ನಾನವನ್ನು ಮಾಡಿ ಅನರ್ಘ್ಯವಾದ ಶುಭ್ರವಸ್ತ್ರಗಳನ್ನು ಧರಿಸಿ, ಗಂಧಮಾಲ್ಯಾಂಬರಗಳಿಂದಲಂಕೃತರಾಗಿ, ಮದ್ದಾನೆಗಳ ಹಾಗೆ ಗಂಭೀರಗಮನದಿಂದ ವಿರಾಟನ

ಓಲಗದ ಹಜಾರವನ್ನು ಸೇರಿ, ರಾಜಯೋಗ್ಯವಾದ ರತ್ನಸಿಂಹಾಸನಗಳಲ್ಲಿ ಕುಳಿತುಕೊಂಡು ತಮ್ಮ ತಮ್ಮ ಸ್ಥಾನಗಳಲ್ಲಿ ಪ್ರಜ್ವಲಿಸುವ ಪಂಚಾಗ್ನಿಗಳೋಪಾದಿಯಲ್ಲಿ ಪ್ರಕಾಶಿಸುತ್ತಿದ್ದರು. ಇತ್ತ ವಿರಾಟನು, ಯಥೋಚಿತ ನಿತ್ಯಕರ್ಮಗಳನ್ನು ಮಾಡಿಕೊಂಡು, ಉತ್ತರಕುಮಾರನೊಡನೆ ಸಭಾಭವನವನ್ನು ಪ್ರವೇಶ ಮಾಡಿದನು. ಪಂಚಾಗ್ನಿಗಳೋಪಾದಿಯಲ್ಲಿ ಪ್ರಕಾಶಿಸುತ್ತಿದ್ದ ಈ ಐವರನ್ನೂ ನೋಡಿ, ವಿರಾಟನು ಬಾಗಿಲ ಬಳಿಯಲ್ಲಿಯೇ, ಸ್ತಂಭೀಭೂತನಾಗಿ ನಿಂತುಕೊಂಡು ಬಿಟ್ಟನು. ಪಾಂಡವರು ಎಂಬುದನ್ನು ಬಲ್ಲ ಉತ್ತರಕುಮಾರನು ತನ್ನ ತಂದೆಯ ಕೈಹಿಡುಕೊಂಡು ಧರ್ಮರಾಜಾದಿಗಳನ್ನು ಪರಿಚಯ ಮಾಡಿಸಿಕೊಟ್ಟನು. ಪಗಡೆಯಾಟದ ಕಂಕನು ಧರ್ಮಜನೆಂದು ತಿಳಿದೊಡನೆಯೇ ಅವನ ಪಾದಗಳಿಗೆ ನಮಸ್ಕಾರ ಮಾಡಿ, ಭೀಮಾರ್ಜುನ ನಕುಲ ಸಹದೇವರನ್ನು ಪುತ್ರವಾತ್ಸಲ್ಯದಿಂದ ಬಾಚಿ ತಬ್ಬಿಕೊಂಡು, ತಣಿವು ತೀರದೆ ಬಾರಿಬಾರಿಗೂ ಅವರನ್ನೇ ನೋಡುತ್ತ, "ನೀವು ಸುಖವಾಗಿ ಅಜ್ಞಾತವಾಸವನ್ನು ಕಳೆದು ಸಂತೋಷದಿಂದಿರುವುದು ನಮ್ಮ ಭಾಗ್ಯೋದಯ. ಈ ಮತ್ಸ್ಯರಾಜ್ಯವೆಲ್ಲವೂ ನಿಮ್ಮದು. ಭೇದವನ್ನೆಣಿಸಬೇಡಿ" ಎಂದನು.

ತಾನು ಕಂಕನಿಗೆ ಹೊಸದಾಗಿ ಮಾಡಿದ ಇಸ್ನೂ ಗಾಯವಾರದ ಅಕ್ಷಮ್ಯವಾದ ಅಪರಾಧವು ವಿರಾಟನ ಸ್ಮೃತಿಪಥಕ್ಕೆ ಬಂತು. ಕೂಡಲೆ ಕ್ಷಮೆಯನ್ನು ಬೇಡಿ ತನ್ನನ್ನುದ್ಧಾರಮಾಡಬೇಕೆಂದನು. ದೇವತಾಸ್ವರೂಪನಾದ ಧರ್ಮಜನು, ಆತನನ್ನು ಉಚಿತಪ್ರಕಾರದಿಂದ ಆದರಿಸಿ, "ಈ ಸಮಯದಲ್ಲಿ ಹೇಗೆ ನಡೆದುಕೊಳ್ಳಬೇಕೋ ಹಾಗೆ ನಡೆದುಕೊಂಡದ್ದರಿಂದ ನಿನಗೇನೂ ಭಯವಿಲ್ಲ. ನೀನು ನನಗೇನೂ ಅಪರಾಧಮಾಡಿದವನಲ್ಲ." ಎಂದನು.

ಬಳಿಕ ವಿರಾಟನು "ಸಮಸ್ತ ಭೋಗಗಳನ್ನೂ ಅನುಭವಿಸಿ ತಣಿವು ತೀರಿದವನಾದುದರಿಂದ, ಉತ್ತರಕುಮಾರಿಗೆ ತಕ್ಕವನಾದ ಈ ಪಾರ್ಥ

ನಿಗೆ ಅವಳನ್ನು ಕೊಟ್ಟು, ಮತ್ಸ್ಯರಾಜ್ಯವನ್ನು ಅವನಿಗೊಪ್ಪಿಸಿ, ತಪೋವನಕ್ಕೆ ಹೋಗಲು ಇಚ್ಛೆಯುಳ್ಳವನಾಗಿದ್ದೇನೆ. ಇದಕ್ಕೆ ನಿನ್ನ ಅನುಜ್ಞೆಯಾಗಬೇಕು.'' ಎಂದನು. ಆಗ ಧರ್ಮಜನು ಅರ್ಜುನನ ಮುಖವನ್ನು ನೋಡಿದನು.

ಆಗ ಅರ್ಜುನನು ಎದ್ದು, ''ನಾವು ಕೌರವರ ಕೊಬ್ಬನ್ನಡಗಿಸಿ, ಅವರ ರಾಜ್ಯವನ್ನು ವಶಮಾಡಿಕೊಳ್ಳುವುದೇ ಹೊರತು, ನಿಮ್ಮ ಐಶ್ವರ್ಯವನ್ನು ಅಪೇಕ್ಷಿಸುವವರಲ್ಲ. ಒಂದು ವರ್ಷದಿಂದ ಭೇದಭಾವವಿಲ್ಲದೆ ನಿಮ್ಮ ಮಗಳಿಗೆ ನೃತ್ಯ ಗೀತ ವಾದ್ಯಗಳನ್ನು ಪುತ್ರೀಭಾವದಿಂದ ಕಲಿಸಿ ಕೊಟ್ಟೆನು ನನ್ನನ್ನು ತಂದೆಯೋಪಾದಿಯಲ್ಲಿ ಕಾಣುತ್ತ ಬಹಳ ಸ್ನೇಹದಿಂದಿದ್ದಳು ಆದುದರಿಂದ ಅವಳನ್ನು ಪಾಣಿಗ್ರಹಣ ಮಾಡಿಕೊಳ್ಳಲಾರೆ. ಚಂದ್ರವಂಶದವರು ಮತ್ಸ್ಯವಂಶದವರೊಡನೆ ಸಂಬಂಧ ಬೆಳೆಸಬಹುದಾದುದರಿಂದ ನಿಮ್ಮ ಮಗಳಾದ ಉತ್ತರೆಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಬಹುದು'' ಎಂದನು. ''ದೊಡ್ಡವರನಿಗಿಂತಲೂ ಚಿಕ್ಕವರನು ನಮ್ಮ ಉತ್ತರೆಗೆ ಸಿಕ್ಕುವದು ನಮಗೆ ಹೆಚ್ಚು ಸಂತೋಷಪ್ರದವಾದುದು. ಕೃಷ್ಣನ ಸೋದರಳಿಯನಾದ ಶಸ್ತ್ರಾಸ್ತ್ರಪ್ರವೀಣನಾದ ಅಭಿಮನ್ಯುವಿಗೆ ಕೊಡುವುದರಲ್ಲಿ ನಮಗೆ ಬಹು ಇಷ್ಟ'' ಎಂದು ಉತ್ತರಕುಮಾರನು ನುಡಿದನು.

ಕೂಡಲೆ ನಿಶ್ಚಯತಾಂಬೂಲ ಕೊಡಲು ವಿರಾಟನು ಸಿದ್ಧನಾಗಿ ಧರ್ಮಜನ ಬಳಿಗೆ ಹೋದನು. ಅದನ್ನು ಸ್ವೀಕಾರ ಮಾಡದೆ ಧರ್ಮಜನು, ''ಈ ಸಂಬಂಧ ಬೆಳೆಸುವದು ನಮ್ಮ ಇಷ್ಟದ ಮೇಲೆ ನಿಂತಿಲ್ಲ. ನಮಗೊಡೆಯನಾದ ಕೃಷ್ಣನ ಕೈಯ್ಯಲ್ಲಿದೆ. ಅವನೊಡಂಬಡಿಕೆಯಾದರೆ ಆಯಿತು.'' ಎಂದನು. ಆಗ ವಿರಾಟನು ''ಸಂಬಂಧವಾಗಲಿ, ಬಿಡಲಿ; ಕೃಷ್ಣಪರಮಾತ್ಮನನ್ನು ನಮ್ಮ ಮನೆಗೆ ಬರುವಂತೆ ಮಾಡಿದರೆ ನಾನು ಧನ್ಯನಾದೆನು. ಅರ್ಜುನನು ಉತ್ತರೆಯನ್ನು ಮದುವೆಯಾಗುವುದು, ನಮಗೆ ಸಂತೋಷಪ್ರದವಾದುದು. ಅಭಿಮನ್ಯುವಿಗೆ ಮಾಡಿಕೊಳ್ಳುವ

ದಂತು. ಅದಕ್ಕಿಂತಲೂ ಹೆಚ್ಚು ಸಂತೋಷಪ್ರದವಾದುದು. ಕೃಷ್ಣಸ್ವಾಮಿಯು ನಮ್ಮ ಮನೆಗೆ ಬರುವಂತೆ ಮಾಡುವದು, ಎಲ್ಲಕ್ಕಿಂತಲೂ ಅಧಿಕ ಸಂತೋಷಪ್ರದವು '' ಎಂದನು.

ಕೃಷ್ಣಸ್ವಾಮಿಗೊಪ್ಪಿಸಲು ನಜರುಗಳು ಸಿದ್ಧವಾದುವು. ದ್ವಾರಕಿಗೆ ಹೊರಡಲು ದೂತರು ವೇಗವಾಗಿ ಹೋಗುವ ತಮ್ಮ ತಮ್ಮ ಕುದುರೆಗಳೊಡನೆ ಸಿದ್ಧರಾದರು. ಧರ್ಮರಾಯನು ಕೃಷ್ಣಸ್ವಾಮಿಗೆ ಕಾಗದವನ್ನು ಬರೆದು ವಿರಾಟನ ಕೈಯಲ್ಲಿ ಕೊಟ್ಟನು. ದೂತರು ದ್ವಾರಕಿಗೆ ಪ್ರಯಾಣ ಬೆಳೆಸಿದರು.

ಇತ್ತ ದುರ್ಯೋಧನನು ಯುದ್ಧದಲ್ಲಿ ಸೋತು, ನಿರಾಶನಾಗಿ, ಹಸ್ತಿನಾಪುರವನ್ನು ಸೇರಿ, ಅರ್ಜುನನು ಕಾಣಿಸಿಕೊಂಡ ವಿಷಯದಲ್ಲಿ ಭೀಷ್ಮನು ಹೇಳಿದ ಉತ್ತರಕ್ಕೆ ಸಂತುಷ್ಟನಾಗಿ ಸುಮ್ಮನಿರದೆ, ಧರ್ಮರಾಜಾದಿಗಳಿಂದ ಒಪ್ಪುತ್ತಿದ್ದ ವಿರಾಟನ ಆಸ್ಥಾನಕ್ಕೆ. ತನ್ನ ಕಡೆ ದೂತರನ್ನು ಕಳುಹಿಸಿಕೊಟ್ಟನು. ದೂತರು ವಿರಾಟನ ಆಸ್ಥಾನದಲ್ಲಿದ್ದ ಧರ್ಮರಾಯನ ಸಮೀಪವನ್ನೈದಿ, ಅಡ್ಡಬಿದ್ದು. ಕೈಮುಗಿದುಕೊಂಡು, ದುರ್ಯೋಧನನು ಕಳುಹಿಸಿದ ಪತ್ರವನ್ನು ಕೊಟ್ಟರು. ಅರ್ಜುನನು ಕಾಗದವನ್ನು ಬಿಚ್ಚಿ '' ನಿನ್ನ ತಮ್ಮನಾದ ಪಾರ್ಥನು ಅಜ್ಞಾತವಾಸದ ಗಡುವು ಮುಗಿಯುವುದರೊಳಗಾಗಿ, ಕೌರವಾದಿಗಳಾದ ನಮಗೆ ಕಾಣಿಸಿಕೊಂಡುದರಿಂದ, ನಿಮ್ಮ ಪ್ರತಿಜ್ಞಾಪರಿಪಾಲನಕ್ಕಾಗಿ ಪುನಃ ಹನ್ನೆರಡು ವರುಷ ವನವಾಸ ಮಾಡಿಕೊಂಡು, ಒಂದು ವರುಷ ಅಜ್ಞಾತವಾಸವನ್ನು ನೀಗಬೇಕು '' ಎಂದು ಓದಿದನು. ಧರ್ಮಜನು ನಸುನಗುತ್ತ, 'ಭೀಷ್ಮನ ಅಪ್ಪಣೆಯಂತೆ ನಡೆದುಕೊಳ್ಳಲು ಸಿದ್ಧನಾಗಿದ್ದೇನೆ' ಎಂದು ಹೇಳಿ ದೂತರನ್ನು ಕಳುಹಿಸಿಕೊಟ್ಟನು.

ಅತ್ತ ಕೃಷ್ಣಸ್ವಾಮಿಯನ್ನು ಕಾಣಲು ದ್ವಾರಕಿಗೆ ಹೋದ ದೂತರು ಕೃಷ್ಣನ ಸಭಾಭವನವನ್ನು ಪ್ರವೇಶಿಸಿ, ತೆಗೆದುಕೊಂಡು ಹೋಗಿದ್ದ

ಬಹುಮಾನವಸ್ತುಗಳನ್ನು ಮುಂದಿರಿಸಿ, ಅಡ್ಡಬಿದ್ದು, ಕಾಗದವನ್ನೊಪ್ಪಿಸಿದರು. ಆಗ ಸಂಧಿವಿಗ್ರಹಿಯಾದ ಉದ್ಧವನು ಕೃಷ್ಣನ ಕೈಯಿಂದ ಕಾಗದವನ್ನು ತೆಗೆದುಕೊಂಡು,

"ಎಲೈ ಮುರಧ್ವಂಸಿಯೇ, ನಿನ್ನ ದಯೆಯಿಂದ ಬದುಕಿದ್ದೇವೆ. ಅರಣ್ಯವಾಸವಾಯಿತು. ಅಜ್ಞಾತವಾಸದ ಅವಧಿಯೂ ಮುಗಿಯಿತು. ಇನ್ನು ನಿನ್ನ ದರ್ಶನವಾಗಬೇಕು. ನಮ್ಮ ಮಾತಿನಂತೆ ನಡೆದುಕೊಂಡಿರುವೆವು. ನಮ್ಮನ್ನು ಪತ್ತೆ ಮಾಡಲು ಗೋಗ್ರಹಣದ ನೆಪದಿಂದ ಬಂದಿದ್ದ ಕುರುಸೇನೆಯು ವಿರಾಟನಗರದ ಬಳಿ ಹತವಾಯಿತು. ನಮ್ಮ ನಿಜವನ್ನು ತಿಳಿದು ವಿರಾಟನು ನಮ್ಮನ್ನು ಬಹುವಾಗಿ ಮನ್ನಣೆ ಮಾಡಿ ತನ್ನ ಪುತ್ರಿಯಾದ ಉತ್ತರಾಕುಮಾರಿಯನ್ನು ಅಭಿಮನ್ಯುವಿಗೆ ಕೊಡಬೇಕೆಂದು ನಿಶ್ಚಯ ಮಾಡಿಕೊಂಡಿದ್ದಾನೆ. ವಿವಾಹ ನೆಪದಿಂದ ನಿನ್ನ ದರ್ಶನವನ್ನು ಕೊಟ್ಟು, ನಮ್ಮನ್ನು ಕಾಯಬೇಕು. ತಾಯಿ ಕರುವನ್ನರಸುವಂತೆ ನೀನು ನಮ್ಮನ್ನರಸುತ್ತಿರುವೆಯಾದುದರಿಂದ ನಾನು ನಿನ್ನನ್ನು ಬೇಡಿಕೊಳ್ಳಬೇಕಾದುದೇನೂ ಇಲ್ಲ." ಎಂದು ಬರೆದಿರುವ ಧರ್ಮಜನ ಬಿಕ್ಕಣೆಯನ್ನು ಓದಿದನು.

ಕೃಷ್ಣನಿಗೆ ರೋಮಾಂಚವಾಯಿತು. ಪಾಂಡವರ ಇರುವಿಕೆಯನ್ನು ಕೇಳಿ ಬಹು ಸಂತೋಷವಾಯಿತು. "ಇದೇ ಸುದಿವಸ; ಎಲ್ಲರೂ ವಿವಾಹಾರ್ಥವಾಗಿ ವಿರಾಟನಗರಿಗೆ ಹೊರಡಲು ಸಿದ್ಧರಾಗಿ" ಎಂದನು.

ದ್ವಾರಕಿಯಿಂದ ಕೃಷ್ಣಸ್ವಾಮಿಯ ಪ್ರಯಾಣ ಅಂದೇ ಬೆಳೆಯಿತು. ಒಂದು ವಾರದೊಳಗಾಗಿ ವಿರಾಟನಗರದ ಗಡಿಯನ್ನು ಸೇರಿದರು. ಕೃಷ್ಣಸ್ವಾಮಿಯ ಆಗಮನವನ್ನೇ ನಿರೀಕ್ಷಿಸುತ್ತಿದ್ದ ವಿರಾಟನು ಅವನು ಬಂದ ವರ್ತಮಾನವನ್ನು ಕೇಳಿ ಪತ್ನೀ ಪುತ್ರ ಸಮೇತನಾಗಿ ಅವನನ್ನು ಇದಿರುಗೊಂಡು, ಬಹು ವಿಜೃಂಭಣೆಯಿಂದ ಪುರಪ್ರವೇಶ ಮಾಡಿದನು. ಅಂದು ವಿರಾಟನಗರದಲ್ಲಿ ಎಲ್ಲೆಲ್ಲೂ ಸಂಭ್ರಮ. ಎಲ್ಲೆಲ್ಲೂ ಸಡಗರ. ಎಲ್ಲೆಲ್ಲೂ ಶೃಂಗಾರ. ಎಲ್ಲೆಲ್ಲೂ ಜನಸಂದಣಿ. ಎಲ್ಲೆಲ್ಲೂ ಆನಂದ ಒಂದು ಕಡೆ

ವೇದಘೋಷ. ಇನ್ನೊಂದು ಕಡೆ ಮಂಗಳವಾದ್ಯರವ ಮತ್ತೊಂದು ಕಡೆ ಸುವಾಸಿನಿಯರ ಮಂಗಳಗೀತಗಳ ಮಧುರಧ್ವನಿ. ಚಿತ್ರವಿಚಿತ್ರವಾದ ಕೆತ್ತನೆ ಕೆಲಸಗಳಿಂದಲೂ, ಕದಲೀಸ್ತಂಭಗಳಿಂದಲೂ, ತಳಿರುತೋರಣಗಳಿಂದಲೂ, ವಿವಾಹ ಮಂಟಪವು ಶೋಭಿಸುತ್ತಿತ್ತು. ಶುಭದಿವಸ ಶುಭ ಮುಹೂರ್ತದಲ್ಲಿ, ಕೃಷ್ಣನ ಸಮಕ್ಷ ವಿರಾಟನು ಉತ್ತರಾಕುಮಾರಿಯನ್ನು ಅಭಿಮನ್ಯುವಿಗೆ ಧಾರೆಯೆರೆದು ಕೊಟ್ಟನು; ಭೂರಿ ಭೋಜನಗಳಿಂದ ಬ್ರಾಹ್ಮಣರನ್ನೂ, ಊಟ ಉಪಚಾರಗಳಿಂದ ತನ್ನ ಸಮಸ್ತ ಪ್ರಜೆಗಳನ್ನೂ ಸಂತೋಷಪಡಿಸಿ, ಆನಂದಾಬ್ಧಿಯಲ್ಲಿ ಮುಳುಗಿ ತೇಲಾಡುತ್ತಿದ್ದನು.

ವಿರಾಟ! ಲೋಕಪ್ರಸಿದ್ಧರಾದ ಪಾಂಡವರು ಇಂದು ನಿನ್ನ ಸಮಬೀಗರಾದರು. ಶ್ರೀಕೃಷ್ಣನ ಸೋದರಳಿಯನಾದ ಅಭಿಮನ್ಯುವು ಇಂದು ನಿನ್ನ ಅಳಿಯನಾದನು. ಕೃಷ್ಣಪರಮಾತ್ಮನು ನಿನ್ನ ಸಮೀಪ ಬಂಧುವಾದನು. ವಿರಾಟ! ನೀನೇ ಧನ್ಯ! ನೀನೇ ಧನ್ಯ!

## ವಿರಾಟಪರ್ವವು ಮುಗಿದುದು.





ಕೀರ್ತಿಶೇಷರಾದ ದಯಾಸಾಗರ ವೃದ್ಧಪಿತಾಮಹ

**ಶ್ರೀ। ಎಂ. ವೆಂಕಟಕೃಷ್ಣಯ್ಯನವರು**

ಹತೋ ವಾ ಪ್ರಾಪ್ಸ್ಯಸೆ ಸ್ವರ್ಗಂ ।
ಜಿತ್ವಾ ವಾ ಭೋಕ್ಷ್ಯಸೆ ಮಹೀಂ ॥
ತಸ್ಮಾದುತ್ತಿಷ್ಠ ಕೌಂತೇಯ ।
ಯುದ್ಧಾಯ ಕೃತನಿಶ್ಚಯಃ ॥

|| ಶ್ರೀ ||

# ಉದ್ಯೋಗಪರ್ವವು

## ಒಂದನೆಯ ಅಧ್ಯಾಯ

## ಸಮರಸನ್ನಾಹ ಮತ್ತು ಸಂಧಿಪ್ರಸ್ತಾವ

ಧರ್ಮರಾಜ! ಇತರರ ಕುಟಿಲದ ಮುಂದೆ ನಿನ್ನ ಸರಳ ಭಾವವು ಎಂದಿಗೂ ನಿಲ್ಲಲಾರದು. ಶಕುನಿಯ ಮೋಸದ ಜಾಲದಲ್ಲಿ ಬಿದ್ದು ರಾಜ್ಯ ಕೋಶಗಳನ್ನು ಕೌರವನಿಗೊಪ್ಪಿಸಿದೆ. ವನವಾಸ ಮತ್ತು ಅಜ್ಞಾತವಾಸ ಗಳ ಅವಧಿಯು ಮುಗಿದನಂತರ, ನಿನ್ನ ರಾಜ್ಯವನ್ನು ನಿನಗೆ ಬಿಟ್ಟುಕೊಡುತ್ತೇನೆಂದು, ಧೃತರಾಷ್ಟ್ರನು ಎಲ್ಲರಿದಿರಿಗೂ ನಿನಗೆ ವಚನ ಕೊಟ್ಟಿದ್ದನು. ಪಾಪ! ಪಡಬಾರದ ಕಷ್ಟಗಳನ್ನು ಪಟ್ಟೆ; ಸಹಿಸಲಾರದ ಅಪಮಾನಗಳನ್ನು ಸಹಿಸಿದೆ; ಬಂದ ಕೋಪಗಳನ್ನೆಲ್ಲ ನುಂಗಿ, ದುಡುಕದೆ ಶಾಂತಿಯನ್ನು ವಹಿಸಿದೆ. ಅಂದು ಕಾಡಿಗೆ ಹೋದಾಗ. ನೀನೇನಾದರೂ ಸ್ವಲ್ಪ ಅವಕಾಶ ಕೊಟ್ಟಿದ್ದರೆ ಇಡೀ ರಾಷ್ಟ್ರದಲ್ಲಿ ರಾಜಕೀಯ ಪ್ರಳಯವಾಗಿ ಹಸ್ತಿನಾಪುರವೇ ಅಗ್ನಿಗೆ ಆಹುತಿಯಾಗುತ್ತಿತ್ತು. ನಿನ್ನ ಸತ್ಯವ್ರತವೂ, ಶಾಂತಸ್ವಭಾವವೂ, ಎಲ್ಲರ ಕೋಪವನ್ನೂ ತಣ್ಣಗೆ ಮಾಡಿತು. ರಾಜ್ಯಲಕ್ಷ್ಮಿಯನ್ನು ಪರರಿಗೊಪ್ಪಿಸಿ ವಿರಾಟನ ದಾಸನಾದೆ; ತಮ್ಮಂದಿರನ್ನೂ ಪಟ್ಟಮಹಿಷಿಯಾದ ದ್ರೌಪದಿಯನ್ನೂ ದಾಸದಾಸಿಯರನ್ನಾಗಿ ಮಾಡಿದೆ. ನಿನ್ನ ತಮ್ಮಂದಿರನ್ನು ಹುಂದಿದು ನಿನ್ನ ಶತ್ರುವಿಗೆ ಕ್ಷಮೆ ತೋರಿದೆ. ನಿನ್ನ ರಾಜ್ಯವನ್ನು ನುಂಗಿದ ಶತ್ರುವು ನಿನ್ನನ್ನು ಮಟ್ಟಹಾಕಬೇಕೆಂದು, ಕತ್ತಲೆಯಲ್ಲೂ, ಪ್ರಕಟವಾಗಿಯೂ, ಏನೇನೋ ಸಾಹಸ ಮಾಡಿದನು. ನಿನಗೆ

ದೈವಬಲವಿದ್ದುದರಿಂದ ಯಾವುದೊಂದೂ ಸಾಗಲಿಲ್ಲ. ಅದೊಂದೇ ನಿನ್ನನ್ನು ಕಾಪಾಡುತ್ತಿರುವುದು. ಮಾತಿನಂತೆ ರಾಜ್ಯವನ್ನು ಹಿಂದಕ್ಕೆ ಕೊಡುವರೆಂಬ ಆಸೆಯನ್ನು ಮಾತ್ರ ಇನ್ನೂ ಇಟ್ಟುಕೊಂಡಿರುವೆ. ಕ್ಷಮಾದಮಾದಿ ಗುಣಗಳಿಷ್ಟಿದ್ದರೆ ತಾನೆ ಏನು? 'ಮನುಷ್ಯನಲ್ಲಿ ದೇವತ್ವಕ್ಕಿಂತಲೂ, ಮೃಗತ್ವವೇ ಹೆಚ್ಚು; ಎಂಬುದನ್ನು ನೀನರಿಯೆ 'ಕೊಟ್ಟ ಒಡವೆಯನ್ನು ಕೊಡುವುದೆಂತು?' ಎಂಬುದೇ ಅದರ ಲಕ್ಷಣ. ಅಖಂಡವಾಗಿ ಬಹಳ ಕಾಲ ಅನುಭವಿಸಿದ ರಾಜ್ಯಲಕ್ಷ್ಮಿಯನ್ನು ಏಕಾಏಕಿ ಕೊಡುವುದೆಂತು? ಇದರ ಯೋಚನೆಯೇ ಹೃದಯವಿಚ್ಛೇದಕವು. 'ಪ್ರಾಣಹೋದರೂ ಚಿಂತೆಯಿಲ್ಲ; ಕೊಡಲಾರೆ' ಎಂಬುದೆ, ಅದರ ಕೊನೆಯ ನಿರ್ಣಯ. ಆದರೂ ಯುದ್ಧವೆಂದರೆ ಎಲ್ಲರಿಗೂ ಭಯ. ಅದನ್ನು ತಪ್ಪಿಸಿ ಕಾರ್ಯಸಾಧನೆ ಮಾಡಿಕೊಳ್ಳುವುದೆಂತು? ಬರಿಯ ಒಣ ಮಾತುಗಳಿಂದ ವೃಥಾ ಕಾಲಯಾಪನೆ ಮಾಡುವುದೇ ಅದಕ್ಕೆ ಸರಿಯಾದ ಮಂತ್ರ. ಇದನ್ನೆಲ್ಲ ನೀನರಿಯೆ. ಬೆಳ್ಳಗಿರುವುದೆಲ್ಲ ನಿನಗೆ ಹಾಲು. ನಿನ್ನಂತೆ ಇತರರು ಮಾತಿಗೆ ತಪ್ಪುವುದಿಲ್ಲವೆಂದೂ ಶಾಂತಿಯಿಂದ ರಾಜ್ಯ ಸಿಕ್ಕುವುದೆಂದೂ ನಂಬಿರುವಿ. ಮುಂದೆ ನೀನೇ ನೋಡುವಿ!

ಶಾಂತಿಪರನೂ, ಸ್ವಾರ್ಥತ್ಯಾಗಿಯೂ, ಆದ ಧರ್ಮಜನು ಧರ್ಮಕ್ಕೆ ಕಟ್ಟುಬಿದ್ದು ಹನ್ನೆರಡು ವರ್ಷ ವನವಾಸವನ್ನನುಭವಿಸಿ, ಯಮನ ವರಪ್ರಸಾದದಿಂದ ಒಂದು ವರ್ಷ ಅಜ್ಞಾತವಾಸವನ್ನು, ಯಾರಿಗೂ ಅರಿಯದಂತೆ, ವಿರಾಟನಗರದಲ್ಲಿ ಕಳೆದನು. 'ಸಾಮದಿಂದ ರಾಜ್ಯವನ್ನು ಪಡೆಯುವುದು; ಅದು ಅಸಾಧ್ಯವಾದಲ್ಲಿ ದಂಡವನ್ನು ಪ್ರಯೋಗಿಸಿ ಶತ್ರುನಾಶಮಾಡಿ, ರಾಜ್ಯಸುಖವನ್ನನುಭವಿಸುವುದು' ಇವೆರಡರಲ್ಲಿ ಒಂದು ಮಾತ್ರ ಅವನಿಗೆ ಉಳಿಯಿತು. ಸಾಮವೊ, ದಂಡವೊ, ಎಂಬುದನ್ನು ನಿಶ್ಚಯಿಸುವುದು ಹೇಗೆ? ಕೌರವನ ಅಭಿಪ್ರಾಯವನ್ನು ತಿಳಿದ ಹೊರತು ಯಾವ ತೀರ್ಮಾನಕ್ಕೂ ಬರುವಂತಿಲ್ಲ. ಅಭಿಮನ್ಯುವಿನ ಕಲ್ಯಾಣಕ್ಕಾಗಿ ವಿರಾಟನ

ಗರಿಗೆ ಬಂದಿದ್ದ ಕೃಷ್ಣನೇ ಮೊದಲಾದವರೊಡನೆ ಆಲೋಚನೆ ಮಾಡಲು ಯುಧಿಷ್ಠಿರನು ಒಂದು ಸಭೆಯನ್ನೇರ್ಪಡಿಸಿದನು. ಕೌರವನ ಅಭಿಪ್ರಾಯ ವನ್ನು ತಿಳಿಯಲು ಒಬ್ಬ ಚತುರನಾದ ಸಂಧಿವಿಗ್ರಹಿಯನ್ನು ಅವನ ಆಸ್ಥಾ ನಕ್ಕೆ ಕಳುಹಿಸಿಕೊಡಬೇಕೆಂದೂ, ಸಹಾಯಮಾಡಲು ಸಿದ್ಧರಾಗುವ ರಾಜ ರುಗಳು ಕೌರವರ ಪಾಲಾಗುವುದಕ್ಕೆ ಮೊದಲೆ ತಮ್ಮ ಕಡೆಯವರನ್ನಾಗಿ ಮಾಡಿಕೊಳ್ಳಲು ತಕ್ಕ ಯತ್ನಗಳನ್ನು ನಡೆಸಬೇಕೆಂದೂ, ತೀರ್ಮಾನವಾ ಯಿತು. ಈ ಎರಡು ಕಾರ್ಯಗಳನ್ನು ನಿರ್ವಹಿಸಲು ದ್ರುಪದನು ಧರ್ಮ ರಾಯನ ಸಮೀಪದಲ್ಲಿಯೇ ಇರಬೇಕೆಂದು ಗೊತ್ತಾಯಿತು. ಪಾಂಡವ ರಿಗೆ ನೆರವಾಗಲು ಸಿದ್ಧರಾಗಿರುವ ರಾಜರುಗಳ ಬಳಿಗೆ ದ್ರುಪದನು ತನ್ನ ಕಡೆಯದೂತರನ್ನಟ್ಟಿ, ಸಂಧಿಪ್ರಸ್ತಾವಕ್ಕಾಗಿ ತನ್ನ ಪುರೋಹಿತನನ್ನು ಕೌರವನ ಬಳಿಗೆ ಕಳುಹಿಸಿಕೊಟ್ಟನು.

ಹೀಗೆ ಪಾಂಡವರು ಯುದ್ಧಾಭಿಲಾಷೆಯಿಂದ ತಕ್ಕ ತರದೂದುಗ ಳನ್ನು ನಡೆಯಿಸುತ್ತಿರುವರೆಂಬುದನ್ನೂ, ಕೃಷ್ಣನು ದ್ವಾರಕಿಗೆ ಹೋದ ಸಮಾಚಾರವನ್ನೂ ಕೌರವನು ತನ್ನ ಬೇಹಿನವರಿಂದ ತಿಳಿದು ಕೃಷ್ಣನ ಸಹಾಯವನ್ನಪೇಕ್ಷಿಸಿ ತಾನೇ ದ್ವಾರಕಿಗೆ ಹೋದನು. ಅವನು ಕೃಷ್ಣನ ಅರಮನೆಯನ್ನು ಸೇರಿದಾಗ ಮುರಾರಿಯು ಇನ್ನೂ ಮಲಗಿಯೇ ಇದ್ದ ನು. ತನ್ನ ರಾಜಮರ್ಯಾದೆಗನುಸಾರವಾಗಿ, ಕೃಷ್ಣನ ಹಾಸಿಗೆ ತಲೆದಿಂಬಿನ ಬಳಿಯಿದ್ದ ಒಂದು ಮಣೆಯ ಮೇಲೆ ಕುಳಿತನು. ಸ್ವಲ್ಪ ಹೊತ್ತಾದ ಮೇಲೆ ಅರ್ಜುನನೂ, ಕೃಷ್ಣನ ಸಹಾಯ ಬಯಸಿ ಅಲ್ಲಿಗೆ ಹೋದನು. ಮುರಾರಿಯು ಇನ್ನೂ ಮಲಗಿರುವುದನ್ನು ಕಂಡು, ಅವನ ಕಾಲು ಕಡೆ ಕೈ ಜೋಡಿಸಿಕೊಂಡು ನಿಂತನು. ಕೃಷ್ಣನು ಎದ್ದು ಅರ್ಜುನನನ್ನು ನೋಡಿ, ಹಾಗೆಯೇ ಮೈ ಮುರಿಯುವಾಗ ತಲೆದಿಂಬಿನ ಬಳಿ ಪೀಠದ ಮೇಲೆ ಕುಳಿತಿದ್ದ ಕೌರವನನ್ನು ಕಂಡು, ಬಂದ ಕಾರ್ಯದ ವಿವರವೇ ನೆಂದು ಕೇಳಿದನು. ಆಗ ಕೌರವನು "ನಿನ್ನ ಸಹಾಯವನ್ನಪೇಕ್ಷಿಸಿ

ಇಲ್ಲಿಗೆ ಬಂದಿರುವೆನು. ಪಾಂಡವರಿಗೂ, ನನಗೂ ಬಂಧುತ್ವದಲ್ಲಿಯೂ, ಸ್ನೇಹದಲ್ಲಿಯೂ, ನೀನು ಸಮ. ಮುಂದೆ ಪಾಂಡವರಿಗೂ, ನಮಗೂ, ನಡೆಯುವುದಕ್ಕಿರುವ ಮಹಾಯುದ್ಧದಲ್ಲಿ ನೀನು ನನ್ನವನಾಗಿ ಕಾದ ಬೇಕು." ಎಂದನು. ಕೃಷ್ಣನು ಅರ್ಜುನನ ಕಡೆ ತಿರುಗಿದನು. ಆಗ "ನಿನ್ನ ಸಹಾಯವನ್ನು ಯಾಚಿಸಿ ನಿನ್ನಲ್ಲಿಗೆ ಬಂದಿರುವೆನು" ಎಂದು ಅರ್ಜುನ ನೂ ಹೇಳಿದನು. "ಏಕ ಕಾಲದಲ್ಲಿ ಸಹಾಯ ಬಯಸಿ ಬಂದಿರುವ ನಿಮ್ಮಿಬ್ಬರಿಗೂ ಸಮನಾಗಿ ಸಹಾಯ ಮಾಡುವುದೆಂತು?" ಎಂದು ಹೇಳುತ್ತ, ಹಾಗೆಯೇ ತನ್ನ ಎಡಗೈಯ ಬೆರಳುಗಳಿಂದ ತನ್ನ ಎರಡು ಕಣ್ಣುಗಳನ್ನೂ ಉಜ್ಜುತ್ತ, ಏನೋ ಆಲೋಚನೆ ಮಾಡುವವನಂತೆ, "ನನಗೆ ಸಮಾನರಾಗಿ ಯುದ್ಧದಲ್ಲಿ ಹಿಮ್ಮೆಟ್ಟದೆ, ಆಯುಧಪಾ ಣಿಗಳಾಗಿ ಅರ್ಬುದ ಸಂಖ್ಯೆಯುಳ್ಳ ಯಾದವರೆಲ್ಲ ಒಂದು; ನಿರಾ ಯುಧನಾಗಿ ಬುದ್ಧಿ ಹೇಳುತ್ತ ಯುದ್ಧ ಮಾಡದೆ ಇರುವ ನಾನೊಬ್ಬ ನೇ ಒಂದು. ಈ ಎರಡರಲ್ಲಿ ನಿನಗೆ ತೋರಿದುದನ್ನು ಬೇಡಿಕೋ" ಎಂದು ಕೌರವೇಶ್ವರನನ್ನು ಕೇಳಿದನು. ಆಗ ಕೌರವನು, ಬಲಭದ್ರನು ತನ್ನ ಕಡೆಗಿ ರುವನೆಂದಾಲೋಚಿಸಿ, ಯಾದವರ ಸಹಾಯವನ್ನು ಬಯಸಿದನು. ಕೃಷ್ಣ ನು ಅರ್ಜುನನನ್ನು ನೋಡಲು, ಆಗ ಅವನು, "ನಿರಾಯುಧನಾದ, ಯುದ್ಧಮಾಡದ, ಬುದ್ಧಿ ಹೇಳುವ ನೀನೊಬ್ಬನೇ ನನಗೆ ಸಾಕು," ಎಂದು ಹರ್ಷದಿಂದ ಒಪ್ಪಿಕೊಂಡನು. ಹೀಗೆ ಕೃಷ್ಣನನ್ನು ಪಾಂಡವರ ಪಾಲುಮಾಡಿ, ಕೌರವನು ಕೃಷ್ಣನ ಅಪ್ಪಣೆಯನ್ನು ಪಡೆದು ಬಲಭದ್ರನ ಲ್ಲಿಗೆ ಹೋದನು. ಆಗ ಬಲರಾಮನು, "ಕ್ಷತ್ರಿಯಧರ್ಮವನ್ನನುಸರಿಸಿ ಪಾಂಡವರೊಡನೆ ಯುದ್ಧಮಾಡು. ಕೃತವರ್ಮನೂ, ನಾನೂ, ನಿನಗೆ ಸಹಾಯಕರಾಗಿರುವೆವು," ಎಂದನು. ಕೌರವನು ಅತಿ ಹರ್ಷದಿಂದ ಹಿಗ್ಗಿ ದವನಾಗಿ ಬಲರಾಮನನ್ನು ತಬ್ಬಿಕೊಂಡು, ಅವನಿಂದ ಅಪ್ಪಣೆಯನ್ನು ಪಡೆದು, ಹಸ್ತಿನಾವತಿಗೆ ಹೊರಟುಹೋದನು.

ಕೌರವೇಶ್ವರಾ ! ಕೃಷ್ಣನ ಸಹಾಯ ಬಯಸಿ ದ್ವಾರಕಿಗೆ ಹೋದೆ. ತಿರುಳನ್ನು ಬಿಟ್ಟು ಓಟೆಯನ್ನು ಬೇಡಿದೆ; ಒಳಗಿನ ಸಾರವನ್ನು ಸ್ವೀಕರಿಸದೆ ಹೊರಗಿನ ಚಿಪ್ಪನ್ನು ಬಯಸಿದೆ. ಮುಖ್ಯಪ್ರಾಣವನ್ನು ಬಿಟ್ಟು ಯಾದವರ ಸಹಾಯ ಯಾಚಿಸಿ ಬಲಭದ್ರನನ್ನು ಬಲವಾಗಿ ತಬ್ಬಿ ಹಿಗ್ಗಿ ಹೆಗ್ಗೋಡಾಗಿ ಹಿಂದಕ್ಕೆ ಹಸ್ತಿನಾಪುರಗೆ ಹೋಗುತ್ತಿರುವೆ. ಪ್ರಾಣವಿಲ್ಲದ ಶರೀರವನ್ನು ತಬ್ಬಿಕೊಂಡು ಅದರೊಡನೆ ನೀನೂ ನೆಲಕ್ಕುರುಳುತ್ತೀಯೆಂಬುದನ್ನು ಅರಿಯದೆ ನಲಿದಾಡುತ್ತಿರುವೆ. ಅದೃಷ್ಟಹೀನರಿಗೆ ಸಮಯದಲ್ಲಿ ಕಣ್ಣು ಕುರುಡಾಗುವುದೆಂಬುದು ನಿನ್ನಲ್ಲಿ ನಿಜಕ್ಕೆ ಬಂತು.

ಇತ್ತ ಕೃಷ್ಣನು ಅರ್ಜುನನನ್ನು ನೋಡಿ, "ನಿರಾಯುಧನಾಗಿ, ಬುದ್ಧಿ ಹೇಳುತ್ತ, ಯುದ್ಧಮಾಡದ ನನ್ನಿಂದ ನಿನಗಾಗತಕ್ಕುದೇನು ?" ಎಂದು ಮಂದಹಾಸದಿಂದ ನುಡಿದನು. ಆಗ ಅರ್ಜುನನು, "ಎಲೈ ಪುಂಡರೀಕಾಕ್ಷನೆ, ನೀನು ಪಾಂಡವರ ಪ್ರಾಣ; ಪ್ರಾಣವಿಲ್ಲದ ಶರೀರಗಳು ಮೃತಪ್ರಾಯಗಳು. ನನ್ನ ಬಳಿ ನೀನೊಬ್ಬನಿದ್ದರೆ ಸಾಕು; ಕೌರವ ಪಡೆಯನ್ನೆಲ್ಲ ನಾನೊಬ್ಬನೆ ಸಂಹರಿಸಬಲ್ಲೆ. ನೀನಿಲ್ಲದ ಜೀವಚ್ಛವದಂತಿರುವ ನಾನು ಏನೂ ಮಾಡಲಾರೆನು. ಆದುದರಿಂದ ನೀನೊಬ್ಬನೇ ನನಗೆ ಸಾಕು" ಎಂದನು. "ನೀನು ಬಯಸಿದಂತೆ ನಿನ್ನೊಡನೆಯೇ ನಾನಿರುವೆನು" ಎಂದು ಹೇಳಿ ಅರ್ಜುನನ ಸಮೇತ ಕೃಷ್ಣನು ಧರ್ಮರಾಯನಲ್ಲಿಗೆ ಬಂದನು.

ದ್ರುಪದನಿಂದ ಆಜ್ಞಪ್ತರಾದ ದೂತರು ಶಲ್ಯನ ಆಸ್ಥಾನವನ್ನು ಸೇರಿ ದೊರೆಯನ್ನು ಕಂಡು, ಕೈಮುಗಿದುಕೊಂಡು, ಧರ್ಮರಾಯನ ಸಹಾಯ ಯಾಚನೆಯನ್ನು ಬಿನ್ನಹ ಮಾಡಿಕೊಂಡರು. ಶಲ್ಯನು ಅತ್ಯಾನಂದಭರಿತನಾಗಿ ಅಪರಿಮಿತ ಸೈನ್ಯಸಮೇತನಾಗಿ ಪಾಂಡವರ ಸಮೀಪಕ್ಕೆ ಬರುತ್ತಿದ್ದನು. ರಾಜನೀತಿ ವಿಶಾರದನಾಗಿಯೂ, ಭೇದೋಪಾಯದಲ್ಲಿ ಅಗ್ರಗಣ್ಯನಾಗಿಯೂ ಇರುವ ಸುಯೋಧನನು, ಶಲ್ಯನ ಬಲುಮೆಯನ್ನು

ಪಡೆದು, ಉಪಪ್ಲವಕ್ಕೆ ಹೋಗುತ್ತಿದ್ದ ಸೈನ್ಯವನ್ನು ಹಸ್ತಿನಾಪುರದ ಕಡೆ ತಿರುಗಿಸುವಂತೆ ಮಾಡಬೇಕೆಂದು ಯೋಚಿಸಿದನು. ಕೌರವೇಶ್ವರನು, ಶಲ್ಯನು ಬರುವ ದಾರಿಯುದ್ದಕ್ಕೂ ಅವನಿಗೆ ತಿಳಿಯದಂತೆ, ಅವನ ಸೈನ್ಯಕ್ಕೆ ಬೇಕಾದ ಸಕಲ ಅನುಕೂಲಗಳನ್ನೂ ಕಲ್ಪಿಸಿ, ಅವನ ಮನಸ್ಸಂತೋಷವಾಗುವಂತೆ ಮಾಡಿದನು. ಹೀಗೆ ಪ್ರಯಾಣ ಮಾಡುತ್ತಿರುವಾಗ ಒಂದು ದಿನ ಶಲ್ಯನು ಬಹಳ ಸಂತೋಷದಿಂದ, ಪಾಂಡವರ ಕಡೆಯವರೇ ಹೀಗೆ ಮಾಡುತ್ತಿರುವರೆಂದು ನಂಬಿ "ನಮ್ಮ ಪಥವು ಸುಖವಾಗಿ ಸಾಗಲು ಬೇಕಾದ ಅನುಕೂಲಗಳನ್ನು ಕಲ್ಪಿಸುತ್ತಿರುವ ಮಹಾಶಯನನ್ನು ನನ್ನ ಸಮ್ಮುಖಕ್ಕೆ ಬರಮಾಡಿ" ಎಂದು, ತನ್ನ ಕಡೆಯವರಿಗೆ ಆಜ್ಞಾಪಿಸಿದನು. ಕೌರವೇಶ್ವರನು ಶಲ್ಯನ ಮುಂದೆ ಹೋಗಿ ನಿಂತನು. ಆಗ ಶಲ್ಯನು "ನೀನು ಮಾಡಿದ ಸೇವೆಗಾಗಿ ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಬೇಡಿಕೋ, ಕೊಡುವೆನು" ಎಂದನು. ಆಗ ಕೌರವನು "ಉಪಪ್ಲವದ ಕಡೆಗೆ ಹೋಗುತ್ತಿರುವ ಸೈನ್ಯವು ಹಸ್ತಿನಾಪುರದ ಕಡೆಗೆ ತಿರುಗುವಂತೆ ಅಪ್ಪಣೆಯಾಗಬೇಕು" ಎಂದನು. ಕೊಟ್ಟ ವಚನವನ್ನು ಹಿಂದಿರುಗಿ ತೆಗೆದುಕೊಳ್ಳಲಾರದವನಾಗಿ ಶಲ್ಯನು 'ಹಾಗೆಯೇ ಆಗಲಿ' ಎಂದು ಹೇಳಿ ತಾನು ಮಾತ್ರ ಪಾಂಡವರ ಯೋಗಕ್ಷೇಮ ವಿಚಾರಿಸಿಕೊಂಡು ಬರುವೆನೆಂದು ಹೇಳಿ ಉಪಪ್ಲವದ ಕಡೆ ಹೊರಟನು.

ಶಲ್ಯನು ತಮ್ಮಲ್ಲಿಗೆ ಬಂದ ವರ್ತಮಾನವನ್ನು ಕೇಳಿ, ಧರ್ಮರಾಯನು, ವಿನಯ ಭಕ್ತಿಪೂರ್ವಕವಾಗಿ ಬರಮಾಡಿಕೊಂಡು, ಉಚಿತಾಸನದಲ್ಲಿ ಕುಳ್ಳಿರಿಸಿ, ತಮ್ಮಂದಿರೊಡನೆ ನಮಸ್ಕಾರ ಮಾಡಿ, ಕುಶಲಪ್ರಶ್ನೆ ಮಾಡಿದನು. ಶಲ್ಯನು ದಾರಿಯಲ್ಲಿ ನಡೆದ ಸಂಗತಿಗಳನ್ನೆಲ್ಲ ವಿವರವಾಗಿ ತಿಳಿಸಿ ಆಗಿಹೋದುದಕ್ಕೆ ಪೇಚಾಡಿ ಪ್ರಯೋಜನವಿಲ್ಲವೆಂದೂ, ತಾನು ಮಾತಿನಂತೆ ಕೌರವನ ಅಧೀನನೆಂದೂ, ತನ್ನಿಂದೇನೂ ಆಗಲಾರದೆಂದೂ ಹೇಳಿ, ಅಜ್ಞಾತದಲ್ಲಿ ಅನೇಕ ಕಷ್ಟನಷ್ಟಗಳನ್ನನುಭವಿಸಿ ಕೊನೆಗೆ

ರಾಜ್ಯಸುಖವನ್ನು ಪಡೆದ ಇಂದ್ರನಂತೆ, ಅವನೂ ರಾಜ್ಯಸುಖವನ್ನನುಭ ವಿಸುವನೆಂದು ಹೇಳಿ ಅವನ ಮನಸ್ಸಂತೋಷಪಡಿಸಿದನು. ಆಗ ಧರ್ಮ ಜನು, "ತಾಯಿ ಸತ್ತರೆ ಸೋದರ ಮಾವನೆಂಬ ನಾಣ್ಣುಡಿಯುಂಟು. ದೈವಗತಿಯನ್ನು ಯಾರೂ ಮೀರಲಾರರು. ನಿನ್ನ ಮಕ್ಕಳಂತಿರುವ ನಮ್ಮನ್ನು ಕಾಪಾಡಬೇಕು" ಎಂದು ಹೇಳಿ ಪುನಃ ತಮ್ಮಂದಿರೊಡನೆ ನಮಸ್ಕಾರ ಮಾಡಿದನು. ಶಲ್ಯನು ದಾರಿಯಲ್ಲಿ ನಡೆದು ಹೋದ ಕಾರ್ಯ ಗಳನ್ನೇ ಚಿಂತಿಸುತ್ತ, ಕೃಷ್ಣನೇ ಮೊದಲಾದವರ ಅಪ್ಪಣೆ ಪಡೆದು ದುರ್ಯೋ ಧನನನ್ನು ನೋಡುವುದಕ್ಕೆ ಹಸ್ತಿನಾಪುರಿಗೆ ಹೋದನು.

ಇತ್ತ ಸಂಧಿ ಪ್ರಸ್ತಾವಕ್ಕಾಗಿ ದ್ರುಪದನಿಂದ ಆಜ್ಞಪ್ತನಾದ, ಅವ ನ ಕುಲಪುರೋಹಿತನು, ಪಾಂಡವರ ಕಡೆಯವನಾಗಿ, ಧೃತರಾಷ್ಟ್ರನಲ್ಲಿಗೆ ಹೋದನು. ಕೂಡಲೆ ಧೃತರಾಷ್ಟ್ರನು ಭೀಷ್ಮದ್ರೋಣಾದಿಗಳಿಂದ ಕೂಡಿದ ಒಂದು ಮಂತ್ರಾಲೋಚನಾಸಭೆಯನ್ನು ಸೇರಿಸಿದನು. ಕರ್ಣ, ಶಕುನಿ, ದುಶ್ಶಾಸನ, ದುರ್ಯೋಧನಾದಿಗಳೂ, ಹಾಜರಿದ್ದರು. ದ್ರುಪದ ಪುರೋಹಿತನನ್ನು ಬರಮಾಡಿ ಸತ್ಕರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ ಧರ್ಮರಾಯನ ಅಭಿಪ್ರಾಯವನ್ನು ಕೇಳಿದನು. ಆಗ ದ್ರುಪದಪುರೋ ಹಿತನು, "ಹನ್ನೆರಡುವರ್ಷ ವನವಾಸ ಮಾಡಿ ಯಾರಿಗೂ ತಿಳಿಯದಂತೆ ಒಂದು ವರ್ಷ ಅಜ್ಞಾತವಾಸವನ್ನೂ ನೂಕಿ, ನಮ್ಮ ಪ್ರತಿಜ್ಞಾಪಾಲನೆ ಮಾಡಿರುವೆವು. ನಿಮ್ಮ ಮಾತಿನಂತೆ ಈಗ ನಮಗೆ ಇಂದ್ರಪ್ರಸ್ಥದೊಡನೆ ಅರ್ಧರಾಜ್ಯವನ್ನು ಕೊಟ್ಟು, ಯುದ್ಧದಿಂದ ಆಗತಕ್ಕ ಅನರ್ಥಗಳನ್ನು ತಪ್ಪಿಸಬೇಕೆಂದು ಬೇಡಿಕೊಳ್ಳುತ್ತೇವೆ" ಎಂಬ ಧರ್ಮರಾಯನ ಅಭಿ ಪ್ರಾಯವನ್ನು ಸಭೆಯ ಮುಂದಿರಿಸಿ "ಧರ್ಮವೇ ಅಪರಾವತಾರವಾಗಿ ಯುಳ್ಳ ಧರ್ಮಜನ ಈ ಬೇಡಿಕೆಯು ದುರಾಶೆಯದಲ್ಲ. ಇಂದ್ರಪ್ರಸ್ಥದೊ ಡನೆ ಅರ್ಧರಾಜ್ಯವನ್ನು ಕೊಟ್ಟಲ್ಲಿ ಕೌರವರಿಗೆ ದೊಡ್ಡ ಬೆಂಬಲವು ದೊರೆ ತಂತಾಗುವುದು, ಇವರಿಬ್ಬರೂ ಏಕೀಭವಿಸಿದರೆ ಈ ಭೂಲೋಕದಲ್ಲಿ ಇವ

ರನ್ನು ಇದಿರಿಸುವವರಾರು? ಹಾಗಲ್ಲದೆ ಮೂರ್ಖನಾದ ದುರ್ಯೋಧನನ ಮಾತಿಗೆ ಕಿವಿಗೊಟ್ಟಲ್ಲಿ ಪಾಂಡವರಿಂದ ಕೌರವರೆಲ್ಲರೂ ಹತರಾಗುವುದು ನಿಶ್ಚಯ" ಎಂದನು.

ಕರ್ಣ, ಶಕುನಿಗಳಿಂದ ಪ್ರೇರಿತನಾದ ದುರ್ಯೋಧನನಿಗೆ ರಾಜಿಯು ರುಚಿಸುವುದೆ! ಅವನಿಗೆ ಅಂದು ಪಾಂಡವರೊಡನೆ ಶಾಂತಿ ಬೇಕಾಗಿರಲಿಲ್ಲ. ಪಾಂಡವರನ್ನು ಧ್ವಂಸಮಾಡಿ ಏಕಚ್ಛತ್ರಾಧಿಪತಿಯಾಗಿ ಈ ಭೂಮಂಡಲವನ್ನೆಲ್ಲ ತಾನೊಬ್ಬನೆ ಅನುಭವಿಸಬೇಕೆಂಬ ದುರಾಶೆ ಮಾತ್ರ ಇತ್ತು. ಪ್ರಪಂಚದ ಹೊನ್ನೆಲ್ಲವೂ ತನಗೆ ಬೇಕು ಪ್ರಪಂಚದ ಸುಖವೆಲ್ಲವೂ ತನಗಿರಬೇಕು. ಪ್ರಪಂಚವು ತನಗಾಗಿ. ತಾನು ಪ್ರಪಂಚಕ್ಕಾಗಿಯಲ್ಲ. ಎಂಬ ಭಾವನೆಯು ಅವನ ಮನಸ್ಸನ್ನೆಲ್ಲ ಆವರಿಸಿ ಬಿಟ್ಟಿತು.

ದ್ರುಪದಪುರೋಹಿತನ ಈ ಮಾತುಗಳನ್ನು ಕೇಳಿ ಕರ್ಣನಿಗೆ ಕೋಪವು ಬಂತು. ಆಗ ಅವನು "ಅರ್ಜುನಾದಿಗಳು ಕೌರವರನ್ನು ಯುದ್ಧದಲ್ಲಿ ಸಂಹರಿಸಿಬಿಡುವರೆಂಬ ಗೊಡ್ಡು ಬೆದರಿಕೆಗೆ ಭಯಪಟ್ಟು, ದ್ರುಪದವಿರಾಟರ ಆಶ್ರಯವನ್ನು ಹೊಂದಿರುವ ಪಾಂಡವರಿಗೆ ಒಂದು ಹಜ್ಜೆ ಭೂಮಿಯನ್ನೂ ದುರ್ಯೋಧನನು ಕೊಡಲಾರನು. ಬೇಡಿದರೆ ಶತ್ರುಗಳಾದರೂ ಚಿಂತೆಯಿಲ್ಲ. ಧರ್ಮಾರ್ಥವಾಗಿ ಭೂಮಂಡಲವನ್ನಾದರೂ, ಕೊಟ್ಟಾನು. ಪಾಂಡವರು ರಾಜ್ಯ ಬಯಸಿದರೆ ಪುನಃ ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಿ ತಮ್ಮ ಸತ್ಯ ಪ್ರತಿಜ್ಞೆಯನ್ನು ನೆರವೇರಿಸಿಕೊಂಡು ಬರಲಿ. ಆಗ ಅವರು ದುರ್ಯೋಧನನ ಅರ್ಧಾಸನದಲ್ಲಿ ಕುಳಿತುಕೊಳ್ಳಲು ಯೋಗ್ಯರಾಗುವರು. ಅಧರ್ಮವಾಗಿ ರಾಜ್ಯ ಬಯಸಿದರೆ ಸುಯೋಧನನ ಸೈನ್ಯದೊಡನೆ ಹೋರಾಡಲಿ," ಎಂದನು.

ಶಾಂತಿಗೆ ಅಡ್ಡಿಯಾಗಿರುವ ಕರ್ಣನನ್ನು ನೋಡಿ ಧೃತರಾಷ್ಟ್ರನು ಸಹಿಸಲಾರದೆ ಉತ್ತರಗೋಗ್ರಹಣದಲ್ಲಿ ತನಗಾದ ಅಪಮಾನವನ್ನು

ನೆನಪಿಗೆ ತಂದುಕೊಳ್ಳುವಂತೆ, ಹೇಳಿ, ಒಳ್ಳೆಯ ಮಾತುಗಳಿಂದ ದ್ರುಪದ ಪುರೋಹಿತನನ್ನು ಸಂತೈಸಿ, ಪಾಂಡವರಲ್ಲಿಗೆ ಒಬ್ಬ ಸಂಧಿವಿಗ್ರಹಿಯನ್ನು ಶೀಘ್ರವಾಗಿ ಕಳುಹಿಸಿಕೊಡುವಂತೆ ಹೇಳಿ ಅವನನ್ನು ಮರ್ಯಾದೆಯಿಂದ ಕಳುಹಿಸಿಕೊಟ್ಟನು.

ಬಳಿಕ ಧೃತರಾಷ್ಟ್ರನು ಸಂಜಯನನ್ನು ಉಪಪ್ಲವಕ್ಕೆ ಪಾಂಡವರೊಡನೆ ಸಂಧಿಪ್ರಸ್ತಾವಕ್ಕಾಗಿ ಕಳುಹಿಸಿ ಕೊಟ್ಟನು. ಧೃತರಾಷ್ಟ್ರನಿಂದ ಆಜ್ಞಪ್ತನಾದ ಸಂಜಯನು ಉಪಪ್ಲವವನ್ನು ಸೇರಿ ಧರ್ಮರಾಜನನ್ನು ಕಾಣಿಸಿಕೊಂಡನು. ಕೂಡಲೆ ಧರ್ಮರಾಜನು, ಕೃಷ್ಣ, ದ್ರುಪದ, ವಿರಾಟರಿಂದ ಕೂಡಿದ ಒಂದು ಮಂತ್ರಾಲೋಚನಾಸಭೆಯನ್ನು ಸೇರಿಸಿ ಸಂಜಯನನ್ನು ಬರಮಾಡಿಕೊಂಡನು. "ನಿಮ್ಮ ನಿರ್ಮಲವಾದ ಯಶಸ್ಸಿಗೆ ಕುಂದಕವಾಗಿಯೂ, ಸಕಲ ಜನ ನಾಶಕರವಾಗಿಯೂ, ಪಾಪಜನಕವಾಗಿಯೂ, ಇರುವ ಯುದ್ಧವನ್ನು ತಪ್ಪಿಸಬೇಕು ಕೌರವರನ್ನು ಯುದ್ಧದಲ್ಲಿ ಸಂಹರಿಸಿ ಗೆದ್ದರೂ, ಅದು ಸೋಲಿಗೆ ಸಮಾನವಾದುದು. ಜ್ಞಾತಿಗಳಿಗೆ ಉಪಕಾರ ಮಾಡುವವನೇ ಧನ್ಯನು. ನೀನು ಸಮಾಧಾನವನ್ನು ತಂದುಕೊಳ್ಳದೆ ಎಲ್ಲರನ್ನೂ ಕೊಂದು ಬದುಕಿದರೆ ಅದೊಂದು ಬದುಕೆ! ಇಬ್ಬರೂ ಸಮಾನಬಲವುಳ್ಳವರಾದುದರಿಂದ ಒಬ್ಬರನ್ನೊಬ್ಬರು ಜಯಿಸುವುದು ಅಸಾಧ್ಯವಾದುದು. ಒಂದು ವೇಳೆ ಯಾರಿಗಾದರೊಬ್ಬರಿಗೆ ಜಯವಾದರೆ, ಯಾರಿಗೂ ಯಾವ ಶ್ರೇಯಸ್ಸೂ ಇಲ್ಲ. ಕೃಷ್ಣ ದ್ರುಪದ, ಮುಂತಾದವರೆಲ್ಲರೂ ಪ್ರಸನ್ನರಾಗಿ ಕೌರವ ಪಾಂಡವರಿಗೆ ಸಂಧಿಯಾಗಲು ಒಡಂಬಡಬೇಕು. ಯಾವ ರೀತಿಯಿಂದಲಾದರೂ, ಯುದ್ಧವನ್ನು ಬಿಟ್ಟು ಸಂಧಿಯನ್ನು ಮಾಡಿಕೊಳ್ಳುವುದು ಎಲ್ಲರಿಗೂ ಮೇಲು," ಎಂಬ ಧೃತರಾಷ್ಟ್ರನ ಈ ಅಭಿಪ್ರಾಯವನ್ನು ಸಭೆಯ ಮುಂದಿಟ್ಟು, "ಪರಮಧಾರ್ಮಿಕರಾಗಿ ನಿರಪರಾಧಿಗಳಾಗಿರತಕ್ಕ ನಿಮಗೆ ದ್ರೋಹಮಾಡಲು ಎಣಿಸಿದನೆಂಬುದೊಂದು ದುರ್ಗುಣವೇ ಹೊರತು ಮಿಕ್ಕ ಗುಣಗಳಲ್ಲಿ ಕೌರವನು ಏನು ಕಡಮೆ? ಧೃತ

ರಾಷ್ಟ್ರನು ವೃದ್ಧನಾದುದರಿಂದ ದುರಾತ್ಮನಾದ ಪುತ್ರನನ್ನು ನಿಗ್ರಹಿಸ ಲಾರದೆ ತಲ್ಲಣಿಸುತ್ತಿರುವನು. ಯುದ್ಧವೆಂಬ ಪ್ರಳಯಕರ್ಮದಿಂದುಂ ಟಾಗುವ ಅನರ್ಥಗಳನ್ನು ತಪ್ಪಿಸಿ ಎಲ್ಲರನ್ನೂ ಕಾಪಾಡುವ ಶಕ್ತಿಯು ನಿನ್ನೊಬ್ಬನಲ್ಲಿದೆಯೇ ವಿನಾ ಇನ್ನಾರಲ್ಲೂ ಇಲ್ಲ " ಎಂದನು.

ಆಗ ಧರ್ಮಜನು "ಎಲೈ ಸಂಜಯನೆ. ನಾನು ಯುದ್ಧಾಪೇಕ್ಷಿ ಯಲ್ಲ. ಧರ್ಮವನ್ನು ತಪ್ಪದೆ ಆಚರಿಸಿದ ಕರ್ಮವು ಸಫಲವಾದುದೆಂಬು ದನ್ನು ಬಲ್ಲೆ. ಸುಖದಿಂದ ಕೆಲಸವಾಗುವುದಾದರೆ, ಕ್ಲೇಶಪಡುವುದು ಏಕೆ? ಧೃತರಾಷ್ಟ್ರನು ನಮ್ಮೊಡನೆ ಕೂಡಿ ಅನುಭವಿಸಬೇಕಾಗಿದ್ದ ರಾಜ್ಯಸುಖವನ್ನು ತಾನೊಬ್ಬನೇ ಅನುಭವಿಸಬೇಕೆಂದೆಳಸಿದನು. ದ್ಯೂತ ದಲ್ಲಿ ನಮ್ಮನ್ನು ವಂಚಿಸಿ ಕಾಡಿಗೆ ಕಳುಹಿಸಲು ಅನುಮತಿ ಕೊಟ್ಟನು. ಐಹಿಕಭೋಗಗಳನ್ನನುಭವಿಸಲು ಧಾರ್ತರಾಷ್ಟ್ರರು ಮಾತ್ರ ಕುರುವಂಶ ದಲ್ಲಿ ಹುಟ್ಟಿದರು! ಪಾಂಡವರಾದ ನಾವು ಹುಟ್ಟಲಿಲ್ಲವೇನು! ಎಲ್ಲವೂ ತನಗಾಗಬೇಕೆಂಬ ದುರಾಶೆಯು ಎಂಥ ಪರಾಕಾಷ್ಠದಶೆಯನ್ನು ಅವರಲ್ಲಿ ಹೊಂದಿದೆ ಎಂಬುದನ್ನು ನೀನೇ ತಿಳಿ. ವನಕ್ಕೆ ಬೆಂಕಿಯನ್ನು ಹಚ್ಚಿ, ಅಗ್ನಿ ದೇವನು ಜಾಜ್ವಲ್ಯಮಾನನಾಗಿ ವನವನ್ನು ದಹಿಸುತ್ತ ನಲಿಯುತ್ತಿರು ವಾಗ, ಅದನ್ನು ಆರಿಸಲು ಈ ಸಮಾಧಾನೋಕ್ತಿಗಳನ್ನು ಹೇಳುತ್ತಿ ದ್ದಾನೆ. ನಮ್ಮಿಬ್ಬರ ಬದುಕುವಿಕೆಯು ಒಂದೇ ಎಂಬುದನ್ನು ಯೋಚಿ ಸದೆ, ದ್ರೋಹವನ್ನೆಣಿಸುತ್ತ ಕಾಡ್ಗಿಚ್ಚು ಹತ್ತಿ ಬೇಯುತ್ತಿರುವಾಗ ಒಣ ಮಾತುಗಳಿಂದೇನು ಪ್ರಯೋಜನ? ಅರಿಭಯಂಕರರಾದ ಭೀಮಾರ್ಜುನ ನಕುಲ ಸಹದೇವರಿರುವಲ್ಲಿ ನನ್ನ ರಾಜ್ಯ ಧನಗಳು ನನಗೆ ಬಾರದೆ ಎಲ್ಲಿ ಹೋಗುವುವು? ಮುಂದೆ ಆಗಬೇಕಾದುದು ಆಗದೆ ಬಿಡುವುದಿಲ್ಲ. ನಮಗೆ ಅರ್ಧರಾಜ್ಯವನ್ನು ಇಂದ್ರಪ್ರಸ್ಥದೊಡನೆ ಕೊಟ್ಟು, ತಾನು ಎಲ್ಲಿ ಬೇಕಾದರೂ ಸುಖವಾಗಿರಲಿ. ಅದು ವಿನಾ ಸಂಧಿಯಾಗಲಾರದು" ಎಂದನು.

ಆಗ ಸಂಜಯನು 'ಯುದ್ಧವು ಅಧರ್ಮವಾದುದು. ಎಲ್ಲರನ್ನೂ ಕೊಂದು ಪಡೆವ ರಾಜ್ಯಸುಖ ಸುಖವಲ್ಲ. ಕ್ಷಮೆಯೇ ಲೋಕದಲ್ಲಿ ದೊಡ್ಡದು. ಪ್ರಪಂಚದಲ್ಲಿ ಎಲ್ಲವೂ ಅಸ್ಥಿರವೇ ಹೊರತು ಸ್ಥಿರವಲ್ಲ. ಕೌರವರು ನಿನಗೆ ಪಾಲನ್ನು ಕೊಡರು. ನೀನು, ನಿನ್ನ ಸಹೋದರರು, ದ್ರೌಪದಿ ಸಮೇತನಾಗಿ ಯದುವೃಷ್ಣಿ ಭೋಜಾದಿ ದೇಶಗಳಲ್ಲಿ ಭಿಕ್ಷಾಟನವನ್ನಾದರೂ ಮಾಡಿಕೊಂಡು ಕಾಲಕ್ಷೇಪ ಮಾಡುವುದು ಲೇಸು. ನೀನು ಇದುವರೆಗೂ ಅನೇಕ ಕಷ್ಟಗಳನ್ನು ಅನುಭವಿಸಿದೆ. ಅನೇಕ ಅಪಮಾನಗಳನ್ನು ಸಹಿಸಿದೆ. ಯುದ್ಧಕ್ಕವಕಾಶ ಕೊಡದೆ ಇನ್ನುಳಿದಿರುವ ಅಲ್ಪಕಾಲದ ಜೀವನಯಾತ್ರೆಯನ್ನು ಪ್ರಪಂಚದ ಶಾಂತಿಗಾಗಿ ಹೇಗಾದರೂ ಕಳೆ" ಎಂದನು.

ಆಗ ಧರ್ಮಜನು "ಎಲೈ ಸಂಜಯನೇ, ದುಷ್ಟರನ್ನು ಶಿಕ್ಷಿಸುವುದು, ಶಿಷ್ಟರನ್ನು ಪರಿಪಾಲಿಸುವುದು' ಕ್ಷತ್ರಿಯಧರ್ಮ. ಕೆಲವು ವೇಳೆ ಧರ್ಮವಲ್ಲವೆಂದು ತೋರುವ ಕಾರ್ಯಗಳೂ ಧರ್ಮವಾಗಿ ಪರಿಣಮಿಸುವುವು. ಹಿಂಸೆಯು ಅಧರ್ಮವಾದುದು, ಯಜ್ಞದಲ್ಲಿ ಪಶುವಧೆಯು ಧರ್ಮ; ಸುಳ್ಳು ಹೇಳುವುದು ಅಧರ್ಮ; ಅದು ಪರರ ಹಿಂಸೆಯನ್ನು ತಪ್ಪಿಸುವುದಾದರೆ, ಧರ್ಮ. ಯುದ್ಧದಲ್ಲಿ ದುಷ್ಟರನ್ನು ನಿಗ್ರಹಿಸಿ ಧನಸಂಪಾದಿಸಿ ಯಜ್ಞಯಾಗಾದಿಗಳನ್ನು ಮಾಡಿಸುವುದು ಕ್ಷತ್ರಿಯರ ಧರ್ಮ, ನಮ್ಮ ಪೂರ್ವಿಕರ ಮಾರ್ಗ. ಈ ಮಾರ್ಗವನ್ನು ನಾನನುಸರಿಸುವುದರಲ್ಲಿ ತಪ್ಪೇನು? ಸ್ವಧರ್ಮವಾದ ಯುದ್ಧವನ್ನು ಬಿಟ್ಟು, ಬ್ರಾಹ್ಮಣವೃತ್ತಿಯಾದ ಭಿಕ್ಷಾಟನದಿಂದ ನನ್ನ ಜೀವನಯಾತ್ರೆ ಕಳೆದರೆ ನನ್ನನ್ನು ಲೋಕವು ನಿಂದಿಸದೆ ಬಿಡುವುದೆ? ಕೃಷ್ಣನು ಧರ್ಮತತ್ತ್ವವನ್ನು ಚೆನ್ನಾಗಿ ಬಲ್ಲವನಾದುದರಿಂದ ಅವನ ಹೇಳಿಕೆಯಂತೆ ನಡೆಯಲು ಸಿದ್ಧನಾಗಿದ್ದೇನೆ." ಎಂದನು.

ಆಗ ಕೃಷ್ಣನು ಸಂಜಯನನ್ನು ಕುರಿತು, "ಧರ್ಮರಾಯನಿಗೆ ಹೇಳಿದಂತೆ ಕೌರವಾದಿಗಳಿಗೂ ಹೇಳಿ ಯುದ್ಧವನ್ನೇಕೆ ತಪ್ಪಿಸಬಾರದು?

ಪಾಂಡವರು ರಾಜ್ಯ ಬೇಡದೆ ಕ್ಷಮೆಯನ್ನು ವಹಿಸಿ ಭಿಕ್ಷಾಟನದಿಂದಲಾದರೂ, ತಮ್ಮ ಜೀವನ ಯಾತ್ರೆಯನ್ನು ಸಾಗಿಸುತ್ತ ಯುದ್ಧವನ್ನು ತಪ್ಪಿಸಬೇಕು ; ಅರ್ಧರಾಜ್ಯವನ್ನು ಕೊಟ್ಟು, ಪಾಂಡವರೂ ತಮ್ಮಂತೆ ಕುರುವಂಶೋದ್ಭವರು ಎಂದು ತಿಳಿದುಕೊಂಡು, ಕೌರವರು ಯುದ್ಧವನ್ನೇಕೆ ತಪ್ಪಿಸಬಾರದು ? ಪರೋಪದೇಶದಲ್ಲಿ ಪ್ರೌಢಿಮೆಯನ್ನು ತೋರಿಸುವುದಕ್ಕಿಂತಲೂ, ಸ್ವಾನುಷ್ಠಾನದಲ್ಲಿ ತೋರಿಸುವುದು ಮೇಲಲ್ಲವೇ ? ಇದರ ಇತ್ಯರ್ಥವನ್ನು ನಾನೇ ಬಂದು ನೋಡಬೇಕೆಂದಿದ್ದೇನೆ. ಬಳ್ಳಿಗಳು ವೃಕ್ಷಗಳನ್ನಾಶ್ರಯಿಸಿ ಬದುಕುವಂತೆ ಪಾಂಡವರನ್ನಾಶ್ರಯಿಸಿಕೊಂಡು ಕೌರವರು ಸುಖವಾಗಿ ಬದುಕಲಿ. ಇಲ್ಲವಾದರೆ ಯುದ್ಧದಲ್ಲಿ ಅವರ ಕೋಪಾಗ್ನಿಗೆ ಆಹುತಿಯಾಗಲಿ. ಇರುವಿಕೆ, ನಾಶ, ಇವೆರಡರಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳಲಿ, ಧೃತರಾಷ್ಟ್ರನಿಗೆ ಈ ಅರ್ಥವನ್ನು ಚೆನ್ನಾಗಿ ತಿಳಿಹಿಸುವುದು " ಎಂದನು. ಆಮೇಲೆ ಸಂಜಯನು ಎಲ್ಲರ ಅಪ್ಪಣೆಯನ್ನೂ ಪಡೆದು, ಕೌರವಾದಿಗಳ ಇತ್ಯರ್ಥವನ್ನು ಜಾಗ್ರತಿಯಾಗಿ ತಿಳಿಹಿಸುವೆನೆಂದು ಹೇಳಿ ಹಸ್ತಿನಾಪುರಕ್ಕೆ ಹೊರಟು ಹೋದನು.



|| ಶ್ರೀ ||

## ಎರಡನೆಯ ಅಧ್ಯಾಯ

# ಸಂತಾಪ ಮತ್ತು ಭಯ

ಧರ್ಮರಾಜನ ನಿಶ್ಚಯವನ್ನು ತಿಳಿದು ಸಂಜಯನು ಹಸ್ತಿನಾಪುರವನ್ನು ಸೇರಿ ಧೃತರಾಷ್ಟ್ರನನ್ನು ಕಂಡು, ಚೆನ್ನಾಗಿ ನಿಂದಿಸಿ, ಮಾರ್ಗಾಯಾಸದಿಂದ ಬಳಲಿದ್ದನಾದುದರಿಂದ ನಾಳೆ ಕಾಣಿಸಿಕೊಳ್ಳುವೆನೆಂದು ಹೇಳಿ ವಿಶ್ರಾಂತಿಸುಖವನ್ನು ಬಯಸಿ ತನ್ನ ಮನೆಗೆ ಹೋದನು. ಇತ್ತ ಧೃತರಾಷ್ಟ್ರನು, ವಿದುರನನ್ನು ಬರಹೇಳಿಕಳುಹಿಸಿದನು. ವಿದುರನು ಗಾಬರಿಯಿಂದ ದೊರೆಯ ಸಮೀಪವನ್ನೈದಿ ಚಿಂತೆಯಿಂದೊಡಗೂಡಿದ ಆತನ ಮುಖವನ್ನು ನೋಡಿ, "ಲೋಕದಲ್ಲಿ ಬಲವಂತನೊಡನೆ ದ್ವೇಷಸಂಪಾದಿಸಿ ಹೀನಸಾಧನನಾಗಿರುವ ದುರ್ಬಲನೂ, ಧನವನ್ನು ಹೋಗಲಾಡಿಸಿಕೊಂಡವನೂ, ಕಾಮಾತುರನಾದವನೂ, ಕಳ್ಳನೂ ಈ ನಾಲ್ವರೂ ನಿದ್ರೆಯಿಲ್ಲದೆ ಬಹಳ ಕಷ್ಟಪಡುತ್ತಿರುವರು. ನಿನ್ನಲ್ಲಿ ಅಂತಹ ದೋಷಗಳೊಂದೂ ಕಾಣುವುದಿಲ್ಲ. ಏನಾದರೂ ಇದ್ದರೆ ಹೇಳು" ಎಂದನು.

ಆಗ ದೊರೆಯು 'ಈಗ ಸ್ವಲ್ಪಕಾಲದ ಹಿಂದೆ ಉಪಪ್ಲವದಿಂದ ಹಿಂದಿರುಗಿ ಬಂದ ಸಂಜಯನ ನಿಂದೆಯಿಂದ ಸಂತಪ್ತನಾಗಿ ಮನಶ್ಶಾಂತಿಯಿಲ್ಲದವನಾಗಿ ನಿನ್ನನ್ನು ಬರಮಾಡಿದೆನು" ಎಂದು ಹೇಳಲು ವಿದುರನು ದೊರೆಯ ಸಂತಾಪವನ್ನು ದೂರ ಮಾಡುವುದಕ್ಕಾಗಿ ಇಂತೆಂದನು.

ಶಾಪಗ್ರಸ್ತನಾಗಿ ವನದಲ್ಲಿದ್ದ ಪಾಂಡುರಾಯನಿಗೆ ಪುತ್ರರಾದ ಪಾಂಡವರನ್ನು ಇಂದ್ರಸಮಾನರೆಂದು ಕರೆತಂದು ನೀನು ವಿದ್ಯಾಭ್ಯಾಸ ಮಾಡಿಸಿದೆ. ಕೃತಜ್ಞರಾದ ಪಾಂಡವರು ನಿನ್ನ ಅಪ್ಪಣೆ ಮೀರದೆ ನಡೆದು

ಕೊಳ್ಳುತ್ತಿದ್ದಾರೆ. ಆದುದರಿಂದ ನಿನ್ನ ತಮ್ಮನ ಪಾಲನ್ನು ಆತನ ಮಕ್ಕಳಾದ ಪಾಂಡವರಿಗೆ ಕೊಟ್ಟು, ನೀನು ಪುತ್ರಪೌತ್ರ ಸಮೇತನಾಗಿ ಸುಖವಾಗಿರು, ಇದರಿಂದ ದೇವತೆಗಳು ಸುಪ್ರೀತರಾಗುವರು. ಕೌರವರಿಗೆ ಅನರ್ಥವು ತಪ್ಪುವುದು. ಪ್ರಜೆಗಳು ನೆಮ್ಮದಿಯಾಗಿರುವರು. ಧರ್ಮರಾಯನು ನೀನೆ ತಂದೆ, ನೀನೆ ತಾಯಿ ಎಂದೆಣಿಸಿ ನಿನಗಾಗಿ ಬಹು ಕ್ಲೇಶಗಳನ್ನು ಅನುಭವಿಸಿದನು. ಈಗಲಾದರೂ ಆತನಿಗೆ ಬಹುಮಾನ ಮಾಡುವುದು ಲೇಸು. ನಿನಗೆ ಸುಖವಾಗಬೇಕಾದರೆ ಪಾಂಡವರಲ್ಲಿ ಪುತ್ರಸ್ನೇಹ ಮಾಡು ಮೂರ್ಖರಾದ ದುರ್ಯೋಧನ, ಶಕುನಿ, ದುಶ್ಶಾಸನ, ಕರ್ಣರಲ್ಲಿ ರಾಜ್ಯಭಾರವನ್ನು ವಹಿಸಿ ಐಶ್ವರ್ಯವನ್ನು ಆಶಿಸಬೇಡ ಇಬ್ಬರಿಗೂ ಸಂಧಿಯನ್ನು ಮಾಡು. ನಿನ್ನ ಮರ್ಯಾದೆಯು ತಪ್ಪದ ಹಾಗೆ ನಿನ್ನ ಮಗನಾದ ದುರ್ಯೋಧನನನ್ನು ನಿಗ್ರಹಿಸು. ವನಸಿಂಹನ್ಯಾಯದಿಂದಲೂ, ವೃಕ್ಷಲತಾನ್ಯಾಯದಿಂದಲೂ, ಮಕ್ಕಳೊಡಗೂಡಿದ ನೀನೂ ಆ ಪಾಂಡವರೂ ಒಬ್ಬರನ್ನೊಬ್ಬರು ಅನುಸರಿಸಿಕೊಂಡು ರಾಜ್ಯಪರಿಪಾಲನ ಮಾಡುತ್ತ ಸುಖವಾಗಿರಿ. ನೀನು ಪಾಂಡವರನ್ನು ಬಿಟ್ಟು ಐಶ್ವರ್ಯವನ್ನು ದುರ್ಯೋಧನನ ಪಾಲು ಮಾಡಿರುವೆ. ಇದು ಕಡೆಹಾಯಲಾರದು. ದುರ್ಯೋಧನನು ರಾಜ್ಯವನ್ನು ಹೋಗಲಾಡಿಸಿಕೊಳ್ಳುವುದು ಖಂಡಿತ. ಅದನ್ನು ನೀನೆ ನೋಡುವೆ. ಪಾಂಡವರಲ್ಲಿಯೂ, ನಿನ್ನ ಮಕ್ಕಳಲ್ಲಿಯೂ ಸಮಬುದ್ಧಿ ಮಾಡಿದರೆ ನಿನಗೆ ಕಲ್ಯಾಣವಾಗುವುದು. ಇದನ್ನು ಬಾರಿಬಾರಿಗೂ ಹೇಳುತ್ತಲಿದ್ದೇನೆ ಇನ್ನು ಮೇಲೆ ನಿನ್ನ ಚಿತ್ತಕ್ಕೆ ಸರಿಬಂದ ಹಾಗೆ ಮಾಡಬಹುದು. ಎಲೈ ಧೃತರಾಷ್ಟ್ರನೆ, ನಾನು ಪಾಂಡವರಿಗೋಸ್ಕರ ನಿನ್ನ ಬುದ್ಧಿಯನ್ನು ಒಳ್ಳೆಯದಾಗುವಂತೆ ಮಾಡಿದರೂ, ಮತ್ತೆ ದುರ್ಯೋಧನಾದಿಗಳನ್ನು ನೋಡಿದರೆ ಆ ಬುದ್ಧಿಯು ಕೆಟ್ಟುಹೋಗುವುದು. ಆದುದರಿಂದ ಲೋಕದಲ್ಲಿ ದೈವವನ್ನತಿಕ್ರಮಿಸುವುದು ಯಾರಿಗೂ ಶಕ್ಯವಿಲ್ಲ. ಮುಖ್ಯವಾಗಿ ದೈವವೇ ಶ್ರೇಷ್ಠವೆಂತಲೂ, ಪೌರುಷವು ನಿರರ್ಥಕವೆಂತ

ಲೂ ಎಣಿಸುತ್ತೇನೆ. ತಪೋನಿಷ್ಠನೂ ಬ್ರಹ್ಮಜ್ಞಾನಿಯೂ, ಆದ ಸನತ್ಸು ಜಾತನ ಬಾಯಿಂದಲೇ ಬ್ರಹ್ಮೋಪದೇಶವನ್ನು ಕೇಳಿ ತಣಿ" ಎಂದು ಹೇಳಿ, ಆ ತಪೋನಿಧಿಯನ್ನು ಭಕ್ತಿಯಿಂದ ಧ್ಯಾನಿಸಲು ಸನತ್ಸುಜಾತನು ಅವನಿಷ್ಟದಂತೆ ಅಲ್ಲಿಗೆ ಬಂದು ಧೃತರಾಷ್ಟ್ರನಿಗೆ ಆತ್ಮವಿಚಾರವನ್ನುಪ ದೇಶಿಸಿ ಹೊರಟುಹೋದನು.

ಸೇವಿಸಿದ ಔಷಧವು ರಕ್ತಗತವಾದರೆ ರೋಗದ ವೇಗವು ತಾನಾ ಗಿಯೇ ಮೆತ್ತಗಾಗುವುದು. ತತ್ತ್ವೋಪದೇಶವು ತಲೆಗೆ ಹಿಡಿದರೆ ತಾನಾ ಗಿಯೇ ಐಹಿಕಾಸಕ್ತಿಯು ಬಿಟ್ಟುಹೋಗುವುದು, ನೆಮ್ಮದಿಯು ಹಿಂದೆ ಯೇ ಮನಸ್ಸನ್ನಾಕ್ರಮಿಸುವುದು. ಯಾವ ತತ್ತ್ವೋಪದೇಶವಾದರೇನು? ಯಾರಿಂದಾದರೇನು? ದುರಾಶಾಪಿಶಾಚಗ್ರಸ್ತರಿಗೆ ದುಃಖವೆಲ್ಲಿ ತೊಲಗು ವುದು? ಮನಶ್ಶುದ್ಧಿಯಿಲ್ಲದೆ ಶ್ರವಣಮಾತ್ರದಿಂದ ಶಾಂತಿಯುಂಟಾದಲ್ಲಿ ಲೋಕದಲ್ಲಿ ದುಃಖವೆಲ್ಲಿ ಬಂತು? ಶ್ರವಣದಿಂದ ದೊರೆಯು ರಾತ್ರಿಯ ನ್ನೇನೋ ಕಳೆದನು. ಬೆಳಗಾಯಿತು. ನಿತ್ಯಕರ್ಮಗಳನ್ನು ನೆರವೇರಿಸು ವುದಕ್ಕೂ ಮನಸ್ಸಮಾಧಾನವಿಲ್ಲದ ಅಂಧನೃಪತಿಯು ಅಂದು ಬೇಗ ಸಭಾಪ್ರವೇಶಮಾಡಿದನು. ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ಭೂರಿಶ್ರವ, ಕೌರವ, ಕರ್ಣ, ಕೃತವರ್ಮ, ಶಲ್ಯ ಮುಂತಾದವರೆಲ್ಲರೂ, ಸಭಾಪ್ರವೇಶಮಾಡಿ ಅರಸಿಗೆ ತಮ್ಮ ಆಗಮನವನ್ನು ಬಿನ್ನಯಿಸಿ, ಕೈಮು ಗಿದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಆಗ ದ್ವಾರಪಾಲ ಕರು, ಸಂಜಯನು ದರ್ಶನಾರ್ಥವಾಗಿ ಬಾಗಿಲ ಬಳಿ ಕಾದಿದ್ದಾನೆಂದು ಹೇಳಿದರು. ಅವನ ನಿರೀಕ್ಷಣೆಯಲ್ಲಿಯೇ ಇದ್ದ ದೊರೆಯು ಬೇಗನೆ ಕರೆತರುವಂತೆ ಅಪ್ಪಣೆಮಾಡಿದನು. ಸಂಜಯನು ಸಭಾಪ್ರವೇಶ ಮಾಡಿ ದೊರೆಗೆ ಕೈಮುಗಿದು ತನ್ನ ಪೀಠದಲ್ಲಿ ಕುಳಿತನು.

"ಇಂದ್ರಪ್ರಸ್ಥದೊಡನೆ ಅರ್ಧರಾಜ್ಯವನ್ನು ಕೊಟ್ಟ ಹೊರತು ಶಾಂತಿಯಾಗದು" ಎಂಬ ಧರ್ಮರಾಯನ ನಿಶ್ಚಯವನ್ನು ಸಭೆಯು

ಮುಂದಿಟ್ಟು "ಎಲ್ಲರೂ ಯುದ್ಧೋತ್ಸುಕರಾಗಿ ಧರ್ಮರಾಯನ ಬಾಯಿಂದ ಬರುವ ಅಪ್ಪಣೆಯನ್ನೇ ನಿರೀಕ್ಷಿಸುತ್ತಿರುವರು. ಅವನು ನಿನ್ನ ನಿಶ್ಚಯವನ್ನು ಇದಿರು ನೋಡುತ್ತಿರುವನು. ಅವರ ಬಲವನ್ನು ನಾನೆ ಕಣ್ಣಾರೆ ಕಂಡು ಬಂದಿದ್ದೇನೆ ನಮ್ಮನ್ನು ಪ್ರತಿಭಟಿಸಲು ಪಾಂಡವರು ಶಕ್ತರೇ ಎಂಬ ಸಂಶಯವನ್ನು ಮಾಡಬೇಡ. ನನಗೇನೋ ಬಹಳ ಭಯ ವಾಗುತ್ತಲಿದೆ. ಭೀಮನು ಬಾಲ್ಯದಲ್ಲಿಯೆ ಭಯಂಕರನಾಗಿದ್ದನು. ಭೀಮನನ್ನು ನೋಡಿದವರೆಲ್ಲರೂ ಹೆಬ್ಬುಲಿಯನ್ನು ನೋಡಿದ ಹುಲ್ಲೆಯಂ ತಾಗುವರು. ಉಳಿದ ಪಾಂಡವರ ಸೈನ್ಯವೆಲ್ಲವೂ ಒಂದು ; ಭೀಮನೊ ಬ್ಬನೆ ಒಂದು. ಅವನ ಮುಂದೆ ನಿಲ್ಲುವವರಾರು ? ಭೀಷ್ಮ, ದ್ರೋಣ, ಕೃಪ ಮುಂತಾದವರಿಗೆ ಕೌರವ ಪಾಂಡವರೊಂದೇ ಆದುದರಿಂದ ಅವರು ಪಾಂಡವರ ಮೇಲೆ ಕಾರ್ಯಭಾಗಮಾಡುವಂತೆ ತೋರುವುದಿಲ್ಲ. ನಿಮ್ಮ ಉಪ್ಪುತಿಂದು ದುರ್ಯೋಧನನನ್ನು ರಕ್ಷಿಸುವುದಕ್ಕೂ, ತಾವು ಕೀರ್ತಿ ಯನ್ನು ಸಂಪಾದಿಸುವುದಕ್ಕೂ, ಯುದ್ಧಮಾಡಿದರೂ, ಅದು ಹೃದಯಪೂ ರ್ವಕವಾದುದೆಂದು ತಿಳಿಯಬೇಡ ಇನ್ನು ನಿನ್ನ ಇಷ್ಟ. ಸಂಧಿಯೇ ಮೇಲು" ಎಂದನು.

ಆಗ ಭೀಷ್ಮನು ದುರ್ಯೋಧನನನ್ನು ಕುರಿತು, "ಅಜೇಯರಾದ ಕೃಷ್ಣಾರ್ಜುನರೊಡನೆ ಯುದ್ಧಬೇಡ. ಪ್ರೇಮದಿಂದ ಹೇಳುತ್ತಿರುವ ನನ್ನ ಮಾತುಗಳನ್ನು ಪರಿಗ್ರಹಿಸು. ಕೌರವರೆಲ್ಲರಿಗೂ ವಿನಾಶಕಾಲವು ಸನ್ನಿಹಿತವಾಯಿತು. ಹಿತಚಿಂತಕರಾದ ನಮ್ಮ ಮಾತುಗಳನ್ನು ನೀನು ಯಾವಾಗಲೂ ಆದರಿಸುವವನಲ್ಲ. ಪರಶುರಾಮನಿಂದ ಶಪಿಸಲ್ಪಟ್ಟ ಸೂತ ಪುತ್ರನಾದ ಕರ್ಣನೂ, ಕಪಟಿಯಾದ ಶಕುನಿಯೂ ಧೂರ್ತನಾದ ದುಶ್ಶಾ ಸನನೂ, ನಿನಗೆ ಆಪ್ತರು. ಅವರ ಮಾತೆ ನಿನಗೆ ಪಥ್ಯ. ಕಾಲಾತೀತವಾ ದಮೇಲೆ ನನ್ನ ವಚನಗಳು ನಿನಗೆ ನೆನಪಿಗೆ ಬರುವುವು," ಎಂದನು. ಆಗ ಕರ್ಣನು "ಎಲೈ ಕುರುಕುಲ ಪಿತಾಮಹನೇ, ದೊಡ್ಡವನಾದ ನೀನು

ಈ ಸಣ್ಣ ಸಣ್ಣ ಮಾತುಗಳನ್ನಾಡಬಹುದೆ? ನನ್ನಲ್ಲಿ ಏನು ತಪ್ಪುಕಂಡು ಈ ಸಭೆಯು ಮುಂದೆ ನಿಂದಿಸಿದೆ? ಕ್ಷತ್ರಿಯಧರ್ಮವನ್ನು ಬಿಡದಿರುವುದು ತಪ್ಪೆ? ಧೃತರಾಷ್ಟ್ರನಾಗಲಿ, ಅವನ ಮಕ್ಕಳಾಗಲಿ, ನನ್ನಲ್ಲಿ ದೋಷವನ್ನೆಣಿಸುವರೆ? ಅವರ ವಿಷಯದಲ್ಲಿ ನಾನೇದಾದರೂ ತಪ್ಪುಮಾಡಿರುವೆನೆ? ಬರಿಯ ಮಾತುಗಳಿಂದೇನು ಪ್ರಯೋಜನ? ಪಾಂಡವರೆಲ್ಲರನ್ನೂ ನಾನೊಬ್ಬನೇ ಸಂಹರಿಸುತ್ತೇನೆ. ಪೂರ್ವದಲ್ಲಿ ದ್ವೇಷಿಗಳಾದವರೊಡನೆ ಸಂಧಿಯುಂಟಾಗುವುದು ಹೇಗೆ? ಸರ್ವಪ್ರಕಾರದಿಂದಲೂ, ನಾನು ದುರ್ಯೋಧನನಿಗೆ ಪ್ರಿಯವಾದ ಕಾರ್ಯಗಳನ್ನೆ ಮಾಡತಕ್ಕವನು,"ಎಂದು ನುಡಿದನು.

ಈ ಮಾತುಗಳನ್ನು ಕೇಳಿ ಭೀಷ್ಮನು ದುರ್ಯೋಧನಾದಿಗಳಿಗಾಗಿ ಬಹಳವಾಗಿ ಪಶ್ಚಾತ್ತಾಪಪಟ್ಟು ಧೃತರಾಷ್ಟ್ರನನ್ನು ಕುರಿತು, "ದುರ್ಯೋಧನಾದಿಗಳಿಗೆ ವಿಪತ್ಕಾಲವು ಹತ್ತಿರವಾಯಿತು. ತನ್ನ ಯೋಗ್ಯತೆಯನ್ನು ತಿಳಿದೂ, ತಿಳಿದೂ, ಈ ಸೂತನಂದನನು ತಾನೊಬ್ಬನೇ ಪಾಂಡವರನ್ನೆಲ್ಲ ಸಂಹರಿಸುವೆನೆಂದು ಪೌರುಷ ಕೊಚ್ಚಿಕೊಳ್ಳುತ್ತಿರುವನು. ಗೋಗ್ರಹಣಕಾಲದಲ್ಲಿ ಇವನ ಪೌರುಷವು ಎಲ್ಲಿ ಹೋಗಿತ್ತು? ಚಿತ್ರಸೇನನು ದುರ್ಯೋಧನನನ್ನು ಹಿಂಗಟ್ಟುಮುರಿಕಟ್ಟಿ ಬಂದಿಯಾಗಿ ತೆಗೆದುಕೊಂಡು ಹೋಗುತ್ತಿದ್ದಾಗ ಇವನೆಲ್ಲಿದ್ದನು? ಹಿಂದುಗಡೆ ನುಡಿಯುವ, ಕೆಲಸಕ್ಕೆ ಬಾರದ ಮಾತುಗಳಿಂದ ಪ್ರಯೋಜನವೇನು?" ಎಂದು ಕೋಪದಿಂದ ನುಡಿದನು.

ಆಗ ದ್ರೋಣನು ಎದ್ದು, "ಭೀಷ್ಮರ ಮಾತಿನಂತೆ ನಡೆಯುವುದು ಎಲ್ಲರಿಗೂ ಲೇಸಾದುದು. ಗರ್ವಿಷ್ಠರಾದ ದುರಾಶಾಗ್ರಸ್ತರಾದ ಕೌರವಾದಿಗಳ ಮಾತಿಗೆ ಕಿವಿಗೊಡಬೇಡ. ಯುದ್ಧಕ್ಕೆ ಮೊದಲೆ ಸಂಧಿಮಾಡಿಕೊಳ್ಳುವುದು ಉತ್ತಮ. ಕರ್ಣನಿಂದ ಅರ್ಜುನನಾಗಲಿ, ಅರ್ಜುನನಿಂದ ಕರ್ಣನಾಗಲಿ ಹತವಾದ ಹೊರತು ಈ ದ್ವೇಷವು ಮುಗಿಯದು. ಅರ್ಜುನನನ್ನು ಗೆಲ್ಲುವವರು ಯಾರಾದರೂ ಉಂಟೆ? ದುರ್ಬುದ್ಧಿಗಳಾದ ದುರ್ಯೋ

ಧನಾದಿಗಳಿಂದ ಕೆರಳಿಸಲ್ಪಟ್ಟಿರುವ ಅರ್ಜುನನ ಕೋಪವು ಎಲ್ಲರನ್ನೂ ಸಂಹರಿಸದೆ ಶಾಂತಿಯನ್ನೈದುವುದೆ ? '' ಎಂದನು. ಧೃತರಾಷ್ಟ್ರನು ಭೀಷ್ಮ ದ್ರೋಣರ ಮಾತುಗಳನ್ನು ಕೇಳಿ, ಭೀಮಾರ್ಜುನರ ಸಾಹಸಕಾರ್ಯಗಳನ್ನು ನೆನೆ ನೆನೆದು ನಿಟ್ಟುಸಿರುಗಳನ್ನು ಬಿಡುತ್ತ, ''ಏನು ಮಾಡಲಿ! ಪೌರುಷಕ್ಕಿಂತಲೂ ದೈವವೇ ದೊಡ್ಡದು ? ಅದೇನೋ ಕಾಣೆ. 'ಪಾಂಡವರೊಡನೆ ಯುದ್ಧ ಮಾಡುವ ಸಾಹಸ ಮಾಡಬೇಡ' ಎಂದು ಮಗನಿಗೆ ಹೇಳಲು ಶಕ್ತಿಯಿಲ್ಲದವನಾಗಿದ್ದೇನೆ. ನಮ್ಮ ಸಮೀಪದಲ್ಲಿದ್ದುಕೊಂಡು ನಮ್ಮ ದ್ರವ್ಯಗಳನ್ನನುಭವಿಸುತ್ತ ಇರುವ ಭೀಷ್ಮದ್ರೋಣಾದಿಗಳು ದುರ್ಯೋಧನಾದಿಗಳನ್ನು ಸಂರಕ್ಷಿಸುವುದಕ್ಕೂ ಕೀರ್ತಿಯನ್ನು ಸಂಪಾದಿಸುವುದಕ್ಕೂ, ಪ್ರಾಣ ಬಿಡುವರೆಂಬ ಆಶೆಯು ಇನ್ನೂ ನನ್ನನ್ನು ಬಾಧಿಸುತ್ತಿದೆ. ಜೂಜಾಡುವಾಗ ವಿದುರನು ಹೇಳಿದ ಮಾತುಗಳು ಚಾಡಿಯೆಂದು ತೋರಿತು. ಪುತ್ರಪೌತ್ರಾದಿಗಳಲ್ಲಿ ಮೋಹಿತನಾದ ನನಗೆ ಸುಖವೆಲ್ಲಿಂದ ಬಂತು ! ಕಪಟದ್ಯೂತವು ಕುಲನಾಶಕ್ಕೆ ಕಾರಣವಾಯಿತು. ಎಲೈ ಸೂತನಂದನನೇ, ಈಗ ನಾನೇನು ಮಾಡಲಿ ! ಎಲ್ಲಿಗೆ ಹೋಗಲಿ ! ನನಗೇನು ದಾರಿ ! '' ಎಂದು ಪ್ರಲಾಪಿಸಿದನು

ಆಗ ಸುಯೋಧನನು ಎದ್ದು ತಂದೆಯನ್ನು ಕುರಿತು, '' ಶತ್ರುಗಳನ್ನೇ ಸ್ತುತಿ ಮಾಡುತ್ತಿರುವ ಇವರುಗಳ ಮಾತನ್ನು ನಂಬಿ ದಿಗಿಲು ಬೀಳಬೇಡ ; ಪಾಂಡವರ ಗರ್ವದ ಮಾತುಗಳಿಗೆ ಬೆದರಿ, ಕ್ಷತ್ರಿಯಧರ್ಮವನ್ನು ಬಿಟ್ಟು, ಧರ್ಮರಾಜಾದಿಗಳಿಗೆ ಶರಣಾಗತರಾಗಲು ಸಾಧ್ಯವೇ ? ಯುದ್ಧದಲ್ಲಿ ಪಾಂಡವರಿಂದ ಪರಾಜಿತರಾದರೂ ಚಿಂತೆಯಿಲ್ಲ. ಕೌರವೇಶ್ವರನು ಭಯದಿಂದ ಪಾಂಡವರಿಗೆ ಶರಣಾಗತನಾದನೆಂಬ ಅಪಕೀರ್ತಿಯನ್ನು ಮಾತ್ರ ಸಹಿಸಿಕೊಂಡು ಬಹಳ ದಿವಸ ಬದುಕಿರಲಾರೆನು. ಇಷ್ಟೊಂದು ಸೇನೆಗಳನ್ನು ಸೇರಿಸಿಕೊಂಡಿರುವ ನಮ್ಮನ್ನು ಜಯಿಸುವುದಕ್ಕೆ ಇಂದ್ರಾದಿ ದೇವತೆಗಳಿಂದಲೂ ಸಾಧ್ಯವಿಲ್ಲ. ಭೀಮಾರ್ಜುನಾದಿಗಳಿಗಿಂತಲೂ ಬಲ

ವಾದವರು ನಮ್ಮ ಸೈನ್ಯದಲ್ಲಿ ಅನೇಕ ಮಂದಿ ಇರುವರು. ನೀನು ಯಾರ ದೆಸೆಯಿಂದಲೂ ಹೆದರಬೇಕಾದುದಿಲ್ಲ. ಒಂದು ವೇಳೆ ಪಾಂಡವರು ಗೆದ್ದರೂ ಭಯಪಟ್ಟು ಸಂಧಿಗೆ ಒಡಂಬಡತಕ್ಕವನಲ್ಲ. ಬಲಾಧಿಕ್ಯವು ನಮ್ಮಲ್ಲಿರುವುದು. ಇವುಗಳೊಂದನ್ನೂ ಎಣಿಸದೆ ಸುಮ್ಮನೆ ಚಿಂತಿಸಬೇಡ" ಎಂದನು.

ಧೃತರಾಷ್ಟ್ರನ ಮನಸ್ಸಿಗೆ ಸ್ವಲ್ಪ ನೆಮ್ಮದಿಯುಂಟಾಯಿತು. ಆದರೂ ಭೀಮಾರ್ಜುನರ ಪರಾಕ್ರಮವನ್ನೂ, ಅವರ ಸಾಹಸಕಾರ್ಯಗಳನ್ನೂ ನೆನೆ ನೆನೆದು ಹಂಬಲಿಸುತ್ತ ಕೊನೆಗೆ "ಮಗನೆ, ಬೇಡ, ಪಾಂಡವರೊಡನೆ ಯುದ್ಧ. ಅರ್ಧರಾಜ್ಯವನ್ನು ಕೊಟ್ಟುಬಿಡು. ಉಳಿದ ಅರ್ಧರಾಜ್ಯವು ನಿನಗೆ ಸಾಕು. ನಿನ್ನ ಸೈನಿಕರಿಗೆ ನಿನ್ನಲ್ಲಿ ವಿಶ್ವಾಸವಿಲ್ಲ. ಯುದ್ಧ ಮಾಡುವುದು ನನಗೆ ಮಾತ್ರ ಅಸಮ್ಮತವೆಂದು ತಿಳಿಯದಿರು. ಭೀಷ್ಮಾದಿಗಳಿಗೂ ಇದು ಅಭಿಮತವಾದುದಲ್ಲ. ಮಹಾತ್ಮರಾದ ಪಾಂಡವರೊಡನೆ ಸಂಧಿಪ್ರಯತ್ನ ಮಾಡು" ಎಂದನು.

ಕೌರವೇಶ್ವರನು ಹೇಡಿಯಲ್ಲ; ಜೀವಗಳ್ಳನಲ್ಲ. ಭೀಮಾರ್ಜುನರಿಗೆ ಕಡಮೆಯಲ್ಲ. ಸಮಶತ್ರುವಿನೊಡನೆ ಹೆದರಿ ಸಂಧಿ ಮಾಡಿಕೊಳ್ಳಲಿಚ್ಛಿಸುವನೇ? ತಂದೆಯ ಒರಲುವಿಕೆಯನ್ನು ಕೇಳಿ ಸಹಿಸಲಾರದೆ ದುರ್ಯೋಧನನು ಖೇದದಿಂದ "ಯಾರ ಸಹಾಯವನ್ನೂ ಅಪೇಕ್ಷಿಸದೆ ಕರ್ಣನೊಡಗೂಡಿ ಯುದ್ಧದಲ್ಲಿ ಪಾಂಡವರನ್ನು ಹತಮಾಡಿ ತಮ್ಮಂದಿರೊಡನೆ ಅಖಂಡಸಾಮ್ರಾಜ್ಯಪದವಿಯ ಸುಖವನ್ನು ಅನುಭವಿಸುವೆನು. ಇಲ್ಲವಾದರೆ ಪಾಂಡವರು ನಮ್ಮನ್ನು ಸಂಹರಿಸಿ ಆ ಸುಖವನ್ನನುಭವಿಸಲಿ. ಇದು ಏನಾ ಪಾಂಡವರಿಗೆ ಭಾಗ ಕೊಟ್ಟು ಸ್ನೇಹವನ್ನೆಂದಿಗೂ ಮಾಡಲಾರೆನು. ಧನದಲ್ಲಿಯೂ, ರಾಜ್ಯದಲ್ಲಿಯೂ, ಪ್ರಾಣಗಳಲ್ಲಿಯೂ, ಆಶೆಯನ್ನು ತೊರೆದಿರುವೆನು. ಪಾಂಡವರಿಗೆ ಸೂಚಿಮೊನೆ ಊರುವಷ್ಟು ಭೂಮಿಯನ್ನಾದರೂ ಕೊಡತಕ್ಕವನಲ್ಲ. ಇದು ಖಂಡಿತ" ಎಂದನು.

ನಿರಾಶನಾಗಿ ನಿಟ್ಟುಸಿರುಗಳನ್ನು ಬಿಡುತ್ತ ಧೃತರಾಷ್ಟ್ರನು "ನನ್ನ ಮಗನು, ತನ್ನ ಸಹಾಯಕ್ಕೆ ಬಂದಿರುವ ದೊರೆಗಳೊಡನೆ, ಯಮಪುರಿಗೆ ಹೋಗಲು ಸಿದ್ಧನಾಗಿರುವನು." ಎಂದು ನುಡಿದು ಸುಮ್ಮನಾದನು.

ಸ್ವಲ್ಪ ಹೊತ್ತಾದ ಮೇಲೆ ಪುನಃ ಧೈರ್ಯ ತಂದುಕೊಂಡು "ಮಗನೆ, ಅಧರ್ಮವಾಗಿಯೂ, ಅಪಕೀರ್ತಿಕರವಾಗಿಯೂ ಅಪಾಯಕರವಾಗಿಯೂ, ಇರುವ ಕ್ರೂರಕರ್ಮವನ್ನು ಮಾಡುವುದಕ್ಕೆಳಸಿರುವೆ. ಪಾಂಡವರೊಡನೆ ವಿರೋಧಮಾಡಿಕೊಳ್ಳುವುದು ನಿನಗೆ ಶ್ರೇಯಸ್ಕರವಲ್ಲ. ಇದು ನಿನಗೆ ತಿಳಿಯದು. ಲೋಕದಲ್ಲಿ ಸಮಸ್ತರೂ ಮಕ್ಕಳಿಗೆ ಹಿತವಾಗಿ ನುಡಿಯುವರು. ಸಜ್ಜನರಾದ ಮಕ್ಕಳು ತಂದೆತಾಯಿಗಳ ಮಾತು ಮೀರುವುದಿಲ್ಲ. ನನ್ನ ಮಾತು ಅಹಿತವೆಂದೆಣಿಸಬೇಡ. ಪಾಂಡವರು ದೇವತೆಗಳಿಂದ ರಕ್ಷಿತರಾಗಿರುವರೆಂಬುದು ದಿಟವೆಂದು ನನ್ನ ಮನಸ್ಸಿಗೆ ತೋರುತ್ತಲಿದೆ. ಅವರನ್ನು ನೋಡುವುದಕ್ಕೆ ಕೂಡ ಮನುಷ್ಯನಿಗೆ ಶಕ್ಯವಿಲ್ಲ. ಅರ್ಜುನನ ಪರಾಕ್ರಮವನ್ನು ಭೀಷ್ಮಾದಿಗಳು ಬಲ್ಲರು ನೀವುಗಳೆಲ್ಲರೂ ಯುದ್ಧದಲ್ಲಿ ಪಾಂಡವರಿಂದ ಹತರಾಗುವುದು ನಿಜ. ಹಗಲಿರುಳೂ ಇದೇ ಚಿಂತೆಯ ಬೇಗೆಯಿಂದ ಬೇಯುತ್ತಲಿದ್ದೇನೆ. ಪಾಂಡವರಿಗೆ ರಾಜ್ಯ ಕೊಟ್ಟು ಸಮಾಧಾನಮಾಡಿಕೊಳ್ಳುವುದೇ ಇದಕ್ಕೆ ಪ್ರತೀಕಾರ. ಇದು ನನ್ನ ಮನಸ್ಸಿಗೆ ಹಿತವಾಗಿ ತೋರುತ್ತಲಿರುವುದು," ಎಂದು ಬಹುವಾಗಿ ಒರಲಿದನು.

ಛಲದ ಮುಂದೆ ಐಶ್ವರ್ಯಾದಿಗಳೂ ಐಹಿಕ ಭೋಗಗಳೂ, ಈ ಪ್ರಾಣಗಳೂ, ತೃಣಪ್ರಾಯಗಳು. ಶತ್ರುವಿನ ಕ್ಷಮೆಯು, ಅಗ್ನಿದೇವನಿಗೆ ವಾಯುದೇವನು ನೆರವಾದಂತೆ; ಶತ್ರುವಿನ ಪ್ರಶಂಸೆಯು, ಉರಿಯುವ ಗಾಯಕ್ಕೆ ಉಪ್ಪು ತುಂಬಿದಂತೆ; ಶತ್ರುವಿಗೆ ಶರಣಾಗತನಾಗೆಂದು ಹೇಳುವುದು ಅಗ್ನಿಗೆ ಆಜ್ಯಾಹುತಿಯನ್ನಿಟ್ಟಂತೆ. ಅಂದು ಕೌರವನಿಗೆ ಹಾಗಾಯಿತು. ತನ್ನ ಕೀರ್ತಿಗೂ, ತನ್ನ ಪರಾಕ್ರಮಕ್ಕೂ ಕೀಳೆಂದೆ

ಣಿಸುವ ಈ ಮಾತುಗಳನ್ನು ಕೇಳಿ, ಕಿಚ್ಚು ಮೇಲಕ್ಕೆದ್ದಿತು. ತಂದೆಯೆಂದು ಸಾಭಿಮಾನಿಸಿ, "ನೀನು ಹೆದರಬೇಡ, ದೇವತೆಗಳಿಂದ ರಕ್ಷಿಸಲ್ಪಟ್ಟ ಪಾಂಡವರು ಹೀಗೇಕೆ ಸರಳಬೇಕು? ನಾನೊಬ್ಬನೇ ಎಲ್ಲರನ್ನೂ ಸಂಹರಿಸಬಲ್ಲೆನು. ನೀರಿನ ಮೇಲೆ ಚತುರಂಗ ಸೈನ್ಯವನ್ನು ಸಾಗಿಸಿಕೊಂಡು ಹೋಗುವ ಸಾಮರ್ಥ್ಯವು ನನಗುಂಟು. ಜಲಾಶಯವಿಲ್ಲದಿರುವ ಮರಳು ಕಾಡಿನಲ್ಲಿ ಎಷ್ಟುಮಂದಿಗಾದರೂ ಜಲವನ್ನೊದಗಿಸಿಕೊಡುವ ಯೋಗ್ಯತೆಯು ನನಗುಂಟು. ಸಮಸ್ತದೇವತೆಗಳೂ, ಭೂತಪ್ರೇತಪಿಶಾಚಾದಿಗಳೂ ನನ್ನ ಆಜ್ಞಾನುವರ್ತಿಗಳಾಗಿರುವರು. ಬುದ್ಧಿ, ಉಪಾಯ, ತೇಜಸ್ಸು ಮತ್ತು ಶೌರ್ಯ ಇವು ಪಾಂಡವರಿಗಿಂತಲೂ ನನ್ನಲ್ಲಿ ಹೆಚ್ಚಾಗಿರುವುವು. ಭೀಷ್ಮದ್ರೋಣರಂತೆ ಶಸ್ತ್ರಾಸ್ತ್ರಗಳ ಚಾತುರ್ಯವನ್ನು ನಾನೂ ತಿಳಿದಿರುವೆನು" ಎಂದನು.

'ಅವರಿಂದ ಇವನು ಜಯಿಸಲ್ಪಡುವನೋ, ಇವನಿಂದ ಅವರು ಜಯಿಸಲ್ಪಡುವರೋ,' ಎಂದು ಚಿಂತಿಸುತ್ತ ಧೈರ್ಯವನ್ನು ತಾಳಲಾರದವನಾಗಿ ಮುಂದಿನ ಕಾರ್ಯಕ್ರಮವನ್ನು ಆಲೋಚಿಸತೊಡಗಿದನು.

ಆಗ ಕರ್ಣನು "ಎಲೈ ದೊರೆಯೆ, ವೃಥಾ ಚಿಂತಾಕ್ರಾಂತನಾಗಬೇಡ. ಪರಶುರಾಮದತ್ತವಾದ ಬ್ರಹ್ಮಾಸ್ತ್ರದ ಸಹಾಯದಿಂದ ಸಕಲ ಶತ್ರುಗಳನ್ನೂ ನಾಶಮಾಡಿ ಕೌರವನಿಗೆ ರಾಜ್ಯವನ್ನು ಕೊಡುವೆನು" ಎಂದು ಧೈರ್ಯ ತುಂಬುವ ನುಡಿಗಳನ್ನು ಹೇಳಲು, ಭೀಷ್ಮನು ಸುಮ್ಮನಿರದೆ, ಚೆನ್ನಾಗಿ ಮುಖಭಂಗಿತ ಮಾಡಲು, ವೀರನಾದ ಕರ್ಣನು ಕುಪಿತನಾಗಿ "ಎಲೈ ಭೀಷ್ಮನೇ ನೀನು ಬದುಕಿರುವ ವರೆಗೂ, ಕೈಯಲ್ಲಿ ಆಯುಧಗಳನ್ನು ಹಿಡಿಯುವುದಿಲ್ಲ. ನೀನು ನೆಲಕ್ಕುರುಳಿದ ಮೇಲೆ ಕೋದಂಡವನ್ನು ಹಿಡಿದು ಈ ಅರಸುಗಳಿಗೆ ನನ್ನ ಪರಾಕ್ರಮವನ್ನು ತೋರಿಸುವೆನು" ಎಂದು ಹೇಳಿ ಸಭಾಸ್ಥಾನವನ್ನು ಬಿಟ್ಟು ಹೊರಟು ಹೋದನು. ಏಕದೇಹನ್ಯಾಯದಿಂದಿದ್ದ ಕರ್ಣನಿಗೆ ಆದ ಅಪಮಾನವನ್ನು ಸಹಿಸಲಾರದೆ ದುರ್ಯೋ

ಧನನೂ ಭೀಷ್ಮರೊಡನೆ ನಿಷ್ಠುರವಾದ ಮಾತಾಡಿ, ಧೃತರಾಷ್ಟ್ರನ ಹಿತೋಕ್ತಿಗಳಿಗೆ ಗಮನ ಕೊಡದೆ ಕರ್ಣನನ್ನು ಹಿಂಬಾಲಿಸಿದನು.

ಬಳಿಕ ಅಂಧನೃಪತಿಯಿಂದ ಆಜ್ಞಪ್ತನಾದ ಸಂಜಯನು ಉಭಯ ಸೈನ್ಯದ ಬಲಾಬಲ ವಿವರಣೆ ಮಾಡಲು ಮೊದಲು ಮಾಡಿದನು. ಪಾಂಡವರ ಬಲದ ವಿವರಣೆಯನ್ನು ಕೇಳಿ ಅಲ್ಲಿದ್ದರಸುಗಳಿಗೆಲ್ಲ ಎದೆಯೊಡೆಯಿತು. ಎಲ್ಲರೂ ಹತಾಶರಾಗಿ, ಆದಷ್ಟು ಬೇಗ, ಒಡ್ಡೋಲಗವನ್ನು ಬಿಟ್ಟು ಹೊರಟು ಹೋದರು.

ಅವಸಾನಕಾಲದಲ್ಲಿ ಶ್ಲೇಷ್ಮ ಒದಗುವಂತೆ ಅಂಧನೃಪತಿಗೆ ಸಂತಾಪವೂ ಹೆಚ್ಚಿತು. "ಎಲೈ ಸೂತನಂದನನೇ, ಈಗ ನಾನೇನು ಮಾಡಲಿ! ಎಲ್ಲಿಗೆ ಹೋಗಲಿ! ನನಗೇನು ದಾರಿ! ಯಾರಿಗೆ ಶರಣಾಗತನಾಗಲಿ! ನನ್ನ ಮಕ್ಕಳು ದೈವಾಧೀನರಾದ ಬಳಿಕ ಅಂತಃಪುರದಲ್ಲಿರುವ ಸ್ತ್ರೀಯರೆಲ್ಲರೂ ಕ್ಲೇಶಪಡುತ್ತಿರುವಾಗ ಆ ದುಃಖಧ್ವನಿಯನ್ನು ಹೇಗೆ ಕೇಳಲಿ! ಅದಕ್ಕೆ ಮೊದಲೆ ನನ್ನ ಶರೀರ ಬಿದ್ದುಹೋದರೆ ಲೇಸು! ಭೀಮನ ಗದಾಪ್ರಹಾರದಿಂದ ನನ್ನ ಮಕ್ಕಳು ಹತರಾಗುವುದು ನಿಜ! ಅರ್ಜುನನ ಶರಜಾಲಗಳಿಂದ ಕೌರವ ಪಡೆಯೆಲ್ಲವೂ ನಷ್ಟವಾಗುವುದು! ಇದಕ್ಕೆ ಸಂಶಯವಿಲ್ಲ!" ಎಂದು ಅಂಧನೃಪತಿಯು ಪ್ರಲಾಪಿಸಿದನು.



|| ಶ್ರೀ ||

## ಮೂರನೆಯ ಅಧ್ಯಾಯ.

# ಅನುಸಂಧಾನ.

ಸಂಜಯನು ಉಪಪ್ಲವವನ್ನು ಬಿಟ್ಟು ಹೋದ ಮೂರನೆಯ ದಿವಸ, ಧರ್ಮರಾಯನು, ಕೌರವನೊಡನೆ ಶಾಂತಿಸ್ಥಾಪನೆಗಾಗಿ ಮಂತ್ರಾಲೋಚನೆಮಾಡಲು, ತನಗೆ ಮಿತ್ರರಾದ ಅರಸುಗಳನ್ನು ತನ್ನ ಸಭಾಮಂಟಪಕ್ಕೆ ಬರಮಾಡಿಕೊಂಡನು. ಈ ಶಾಂತಿಸ್ಥಾಪನೆಯ ಕಾರ್ಯವನ್ನು ಎಲ್ಲರಿಗೂ ಅನುಕೂಲವಾಗುವಂತೆ, ನಿರ್ವಹಿಸಲು ಕೃಷ್ಣನೊಬ್ಬನೇ ಶಕ್ತನೆಂದೂ, ಆತನನ್ನು ಹಸ್ತಿನಾಪುರಕ್ಕೆ ಕಳುಹಿಸುವುದು ಉತ್ತಮವೆಂದೂ, ತೀರ್ಮಾನವಾಯಿತು. ಎಲ್ಲರೂ, ಧರ್ಮರಾಯನನ್ನು ಮುಂದುಮಾಡಿಕೊಂಡು, ಸಾಂತ್ವವಚನಗಳಿಂದ ದ್ರೌಪದಿಯನ್ನು ಸಂತೈಸುತ್ತಿದ್ದ ಕೃಷ್ಣನಲ್ಲಿಗೆ ಹೋದರು. ಕೃಷ್ಣನನ್ನು ಕಂಡು ಧರ್ಮರಾಯನು 'ಎಲೈ ವಾಸುದೇವನೇ, ಮಿತ್ರಕಾರ್ಯವನ್ನು ನೆರವೇರಿಸುವ ಕಾಲವು ಪ್ರಾಪ್ತವಾಯಿತು. ಆಪತ್ತುಗಳು ಬಂದಾಗ ನಮ್ಮನ್ನು ಸಂರಕ್ಷಿಸುವುದಕ್ಕೆ ನೀನಲ್ಲದೆ ಮತ್ತೊಬ್ಬರು ಯಾರಿರುವರು ? ನಿನ್ನಾಶ್ರಯದಿಂದ ಗರ್ವಾಂಧರಾದ ದುರ್ಯೋಧನಾದಿಗಳನ್ನು ಸ್ವಾಧೀನಮಾಡಿಕೊಂಡು ನಮ್ಮ ಪಾಲಿಗೆ ಬರತಕ್ಕ ರಾಜ್ಯವನ್ನು ಪಡೆಯಬೇಕು. ನಮ್ಮ ಭಯವನ್ನು ಪರಿಹರಿಸಿ ನೀನೇ ನಮ್ಮನ್ನು ಕಾಪಾಡಬೇಕು. " ಎಂದನು.

ಆಗ ಕೃಷ್ಣನು ಧರ್ಮರಾಯನನ್ನು ಕುರಿತು " ಈಗ ನಾನು ಮಾಡಬೇಕಾದುದೇನು ? ನಿನ್ನಿಷ್ಟದಂತೆ ನಡೆಯಲು ಸಿದ್ಧನಾಗಿದ್ದೇನೆ. ಧೃತರಾಷ್ಟ್ರನ ಆಸ್ಥಾನಕ್ಕೆ ನಾನೇ ಹೋಗಿಬರಬೇಕೆಂಬ ಅಪೇಕ್ಷೆ ನಿನಗಿದ್ದಲ್ಲಿ ಹೋಗಿಬರಲು ಸಿದ್ಧನಾಗಿದ್ದೇನೆ. " ಎಂದನು. ಆಗ ಧರ್ಮಜನು,

" ಎಲೈ ವಾಸುದೇವನೇ, ಸಂಜಯನ ಮಾತಿನಿಂದ ಧೃತರಾಷ್ಟ್ರನ ಇಂಗಿತವನ್ನು ತಿಳಿದುದಾಯಿತು. ದೂತನಾದವನು ದೊರೆಯ ಅಪ್ಪಣೆಯಿಲ್ಲದೆ ಸ್ವತಂತ್ರವಾದ ಅಭಿಪ್ರಾಯವನ್ನು ಕೊಡಲಾರನು. ನಮಗೆ ರಾಜ್ಯವನ್ನು ಕೊಡಬಾರದೆಂಬುದೇ ಧೃತರಾಷ್ಟ್ರನ ಮತವೆಂದು ತೋರುತ್ತದೆ. ವನವಾಸ ಅಜ್ಞಾತವಾಸಗಳನ್ನು ಕಳೆದ ಮೇಲೆ ರಾಜ್ಯ ಕೊಡುವಂತೆ ಧೃತರಾಷ್ಟ್ರನು ವಚನ ಕೊಟ್ಟಿದ್ದನು. ಅದನ್ನು ಎಲ್ಲರೂ ಬಲ್ಲರು. ಆದರೂ ಮಗನ ಮೇಲಿನ ಮೋಹದಿಂದ ಆತನ ಮನೋರಥವನ್ನು ನೆರವೇರಿಸುವುದಕ್ಕಾಗಿ ನಮ್ಮಲ್ಲಿ ಬರಿಯ ಒಣ ಉಪಚಾರದ ಮಾತುಗಳನ್ನು ಆಡುತ್ತ ಕಾಲ ಕಳೆಯುತ್ತಿರುವನು. ಲೋಭದಿಂದ ನಮಗೆ ರಾಜ್ಯ ಕೊಡದೆ ಹೋದಲ್ಲಿ ದುಃಖವಲ್ಲದೆ ನಮಗೆ ಸುಖವೆಲ್ಲಿಂದ ಬಂದೀತು ? ಎಲೈ ಮುರಧ್ವಂಸಿಯೇ, ಯಾವ ಪ್ರಕಾರದಿಂದ ನಾವು ರಾಜ್ಯವನ್ನು ಬಿಡುವುದಕ್ಕಾದೀತು ? ಇದಕ್ಕೋಸ್ಕರ ಯತ್ನ ಮಾಡುತ್ತಲಿರುವ ನಮ್ಮ ಶರೀರಕ್ಕೆ ಹಾನಿ ಬಂದರೂ ಬರಲಿ, ಅದೂ ಒಳ್ಳೆಯದೆ; ಅದು ಹಾಗಿರಲಿ. ನಾವು ಕೌರವರೊಡನೆ ಬೆರೆತು ಸಕಲ ಸಂಪತ್ತುಗಳನ್ನೂ ಹೊಂದಿ ಶಾಂತಾತ್ಮರಾಗಿರುವುದು ಉತ್ತಮಪಕ್ಷ ; ಹಾಗಲ್ಲದಿದ್ದರೆ ಸಕಲ ಕೌರವರಿಗೂ ನಾಶಕರವಾದ ಯುದ್ಧವನ್ನು ಮಾಡಿ ರಾಜ್ಯಭೋಗಗಳನ್ನು ಪಡೆಯುವುದು, ಎರಡನೆಯ ಪಕ್ಷ. ಆದರೆ ಯುದ್ಧದಲ್ಲಿ ನಾವು ಜ್ಞಾತಿಗಳನ್ನೂ, ಗುರುಜನಗಳನ್ನೂ, ಸ್ನೇಹಿತರನ್ನೂ, ಇತರರನ್ನೂ ಕೊಲ್ಲಬೇಕಾಗುವುದು ; ಇದರಿಂದ ಉಂಟಾಗುವ ಪಾಪಸಂಘಟನೆ ಬೇರೆ. ಆದರೂ ಕ್ಷತ್ರಿಯಧರ್ಮದಂತೆ ಯುದ್ಧ ಮಾಡಿಯೇ ತೀರಬೇಕು. ಆದರೆ ಜಯಾಪಜಯಗಳು ನಮ್ಮ ಕೈಯಲ್ಲಿಲ್ಲ. ಶೂರನಾದವನು ಸೋತು ಹೋಗುವನು ; ಅಶಕ್ತನು ಜಯಶೀಲನಾಗುವನು. ಶತ್ರುವು ನಾಶಹೊಂದುವನೋ, ತಾನೇ ನಾಶಹೊಂದುವನೋ, ಎಂಬ ಸಂಶಯವಿದ್ದರೂ, ರಾಜ್ಯವನ್ನು ಬಿಟ್ಟು ಸುಮ್ಮನಿರ್ಬೇಣವೆಂಬ ಬುದ್ಧಿಯು ಬರುವು

ದಿಲ್ಲ. ರಾಜ್ಯಕ್ಕಾಗಿ ಕುಲಕ್ಷಯ ಮಾಡಲು ಶಕ್ತಿಯಿಲ್ಲದವನಾಗಿರುವೆನು. ಈ ವಿಷಯದಲ್ಲಿ ಶಾಂತಿಯನ್ನು ಹೊಂದುವುದೇ ಉತ್ತಮವೆಂದು ತಿಳಿಯುತ್ತೇನೆ. ಒಂದು ಮಾಂಸದ ತುಂಡಿಗಾಗಿ ನಾಯಿಗಳು ಕಚ್ಚಾಡುವಂತೆ ರಾಜ್ಯಕ್ಕಾಗಿ ನಾವು ಕಚ್ಚಾಡಿದರೆ ನಮಗೆ ಮೇಲ್ಮೆ ಎಲ್ಲಿಬಂತು? ಹೇಗಾದರೂ ಮಾಡಿ ಎಲ್ಲರಿಗೂ ಹಿತವಾಗುವಂತೆ ಮಾಡಲು ನೀನು ಶಕ್ತನಾಗಿರುವುದರಿಂದ ಈ ಕಾರ್ಯನಿರ್ವಾಹ ಮಾಡಿಕೊಂಡು ಬರಬೇಕೆಂದು ನಿನ್ನನ್ನು ಪ್ರಾರ್ಥಿಸುತ್ತೇನೆ" ಎಂದನು.

ಆಗ ಕೃಷ್ಣನು, "ನಿನ್ನ ಇಷ್ಟದಂತೆ ಕೌರವಸಭೆಗೆ ಹೋಗಿಬರುವೆನು. ಉಭಯತ್ರರಿಗೂ ಸಮಾಧಾನವಾಗುವ ಹಾಗೆ ನನ್ನ ಕೈಲಾದ ಯತ್ನಗಳನ್ನೆಲ್ಲ ಮಾಡುತ್ತೇನೆ. ಮೃತ್ಯುಪಾಶಕ್ಕೆ ಸಿಕ್ಕಿ ನರಳುತ್ತಿರುವ ದುರಾತ್ಮರಾದ ದುರ್ಯೋಧನಾದಿಗಳು ನನ್ನ ಮಾತನ್ನು ಮನ್ನಿಸದೆ ಮುನಿದರೆ ನಾನರಿಯೆ" ಎಂದನು. ಆಗ ಧರ್ಮಜನು "ಎಲೈ ಪುಂಡರೀಕಾಕ್ಷನೇ, ನಿನ್ನ ಒಪ್ಪಿತವೇ ನನ್ನ ಒಪ್ಪಿತ. ನೀನು ಮಾಡಿದುದಕ್ಕೆ ಬದಲಿಲ್ಲ. ಶಾಂತಿಸ್ಥಾಪನೆಗೆ ಸಾಧ್ಯವಾದಷ್ಟು ಸನ್ನಾಹಮಾಡು. ಮೀರಿದರೆ ಹೋಗಲಿ. ದೈವೇಚ್ಛೆಗೆ ಯಾರು ಗೊತ್ತುಗಾರರು? ನಿನ್ನ ಕಾರ್ಯಕ್ಕೆ ಜಯವಾಗಲಿ" ಎಂದು ನುಡಿದನು.

ಧರ್ಮಜನ ಅಭಿಪ್ರಾಯವನ್ನು ತಿಳಿದು ಶಾಂತಿಯ ವಿಷಯದಲ್ಲಿ ಉಳಿದವರ ಮತವೇನೆಂಬುದನ್ನು ತಿಳಿಯಲು ಭೀಮನನ್ನು ನೋಡಿದನು. ಆಗ ಭೀಮಸೇನನು "ಯುದ್ಧವಾಗುವುದೆಂದು ಭಯಪಡಿಸದೆ, ಕೌರವನಿಗೆ ಹೇಗೆ ಸಮಾಧಾನ ಉಂಟಾಗುವುದೋ ಹಾಗೆ ಮಾತಾಡಬೇಕು. ಪರರ ಅಭಿವೃದ್ಧಿಯಲ್ಲಿ ಸಹನೆಯಿಲ್ಲದ ದುರ್ಯೋಧನನಲ್ಲಿ ಸಾಮವನ್ನಾಚರಿಸಬೇಕು. ದುಷ್ಟನಾದ ದುರ್ಯೋಧನನೊಡನೆ ಸಂಧಿಯಾಗುವುದು ದುಷ್ಕರವೆಂದು ನಾನು ಚೆನ್ನಾಗಿ ಬಲ್ಲೆನು. ಕುಲನಾಶಕ್ಕಾಗಿಯೇ ದುರ್ಯೋಧನನು ಹುಟ್ಟಿರುವುದು. ಅವನಲ್ಲಿ ಧರ್ಮಯುಕ್ತವಾಗಿಯೂ,

ಮೃದುವಾಗಿಯೂ, ಮಾತನಾಡಬೇಕು. ದುರ್ಯೋಧನನಿಗೆ ನಾವೆಲ್ಲರೂ ಅಧೀನರಾದರೂ ಚಿಂತೆಯಿಲ್ಲ. ಮುಖ್ಯವಾಗಿ ಭರತಕುಲಕ್ಕೆ ನಾಶಬರ ದಂತೆ ಯೋಚಿಸಬೇಕು. ಆತನು ನಮ್ಮಲ್ಲಿ ಉದಾಸೀನನಾಗಿದ್ದರೂ, ಆತನೊಡನೆ ನಾವೆಲ್ಲರೂ ಕೂಡಿರುವ ಹಾಗೆ ಕಾರ್ಯವನ್ನು ಸಾಧಿಸ ಬೇಕು. 'ಭ್ರಾತೃಸ್ನೇಹದಿಂದ ಸಮಾಧಾನ ಹೊಂದಬೇಕು' ಎಂದು ನಾನು ಹೇಳಿದೆನೆಂದು ಸುಯೋಧನನಿಗೆ ತಿಳಿಸಬೇಕು. ಸಹೋದರರನ್ನು ಕೊಲ್ಲಲಾರೆನು. ಶಾಂತಿಗೆ ಪ್ರಯತ್ನಿಸು" ಎಂದನು.

ಕುಲಪರ್ವತವು ಹಗುರವಾಯಿತು; ಅಗ್ನಿಯು ತಣ್ಣಗಾಯಿತು; ಹೆಬ್ಬುಲಿಯು ಹುಲ್ಲೆಯಾಯಿತು; ಬರಸಿಡಿಲು ನಿಃಸ್ವನವಾಯಿತು; ಸರ್ಪ ದಿಂದ ಬಾಧಿಸಲ್ಪಟ್ಟಾಗ ತಾನು ಹೇಳಿದ ಮಾತನ್ನು ಮರೆತನು. ಅವನ ಹೃದಯವು ಅಂದು ಕರುಣಾಸಮುದ್ರವಾಯಿತು. ಮುಹೂರ್ತಮಾತ್ರ ತಾನೂ ಧರ್ಮಜನಂತಾದನು. ಅವನ ಛಲವು ಅವನ ಕೈ ಬಿಟ್ಟಿತು. ಕೃಷ್ಣನು ತಲ್ಲಣಿಸಿದನು. ಹಾಗೆಯೇ ಅರ್ಜುನನನ್ನು ನೋಡಿದನು. ಆಗ ಅರ್ಜುನನು ವಾಸುದೇವನನ್ನು ಕುರಿತು, "ಎಲೈ ಕೃಷ್ಣನೇ, ಧೃತರಾ ಷ್ಟ್ರನ ಅಜ್ಞಾನವನ್ನು ನೋಡಿದರೆ, ನಾವು ದೈನ್ಯದಿಂದ ಕೌರವರೊಡನೆ ಸಂಧಿ ಮಾಡಿಕೊಳ್ಳುವುದು ಸಾಧ್ಯವಿಲ್ಲವೆಂದು ತೋರುತ್ತಲಿದೆ. ಸಂಧಿ ಯೋ, ಯುದ್ಧವೋ, ಯಾವುದೋ ಒಂದು ಆಗಿಯೇ ತೀರಬೇಕು. ಪುರುಷಪ್ರಯತ್ನದಲ್ಲಿ ಸಂಧಿಗಾಗಿ ಏನೇನು ಮಾಡಬಹುದೋ ಅದ ನ್ನೆಲ್ಲ ಮಾಡು. ಇದರ ಮೇಲೆ ಪಾಂಡವರಿಗೆ ಯಾವುದು ಹಿತವೆಂದು ತೋರುತ್ತದೆಯೋ ಆ ರೀತಿ ಕಾರ್ಯಭಾರವನ್ನು ನಡೆಸು" ಎಂದನು. ಆ ಮೇಲೆ ನಕುಲನು "ಸಂಧಿವಿಗ್ರಹಗಳಲ್ಲಿ ಪಾಂಡವರಿಗಾವುದು ಫಲ ಕಾರಿಯೋ ಅದನ್ನು ನೆರವೇರಿಸು" ಎಂದನು.

ಈ ಮಾತುಗಳನ್ನೆಲ್ಲ ಕೇಳುತ್ತಿದ್ದ ಸಹದೇವನು ಅತಿ ಸಿಟ್ಟಿನಿಂದ ಕೂಡಿದವನಾಗಿ ಕೃಷ್ಣನನ್ನು ಕುರಿತು "ಕೌರವರು ಸಂಧಿಗೊಪ್ಪಿದರೂ,

ಯುದ್ಧವಾಗುವಂತೆಯೇ ಮಾಡು, ಅಧರ್ಮವಾದರೂ ನಾನೊಬ್ಬನೇ ಕೌರವರೊಡನೆ ಹೋರಾಡಿ ಹಸ್ತಿನಾಪುರದಲ್ಲಿ ಪುನಃ ಪಾಂಡವರ ರಾಜ್ಯವನ್ನು ಸ್ಥಾಪಿಸುತ್ತೇನೆ. ಇಲ್ಲವಾದರೆ ಅರಣ್ಯಪ್ರವೇಶ ಮಾಡುತ್ತೇನೆ. ಇದು ಹೊರತು ಬೇರೆ ಅಭಿಮತವೇ ನನಗಿಲ್ಲ '' ಎಂದನು. ಸಾತ್ಯಕಿ ಮುಂತಾದವರೆಲ್ಲರೂ ಸಹದೇವನ ಮಾತುಗಳನ್ನು ಪುಷ್ಟೀಕರಿಸಿ ನುಡಿದರು. ಭೂನಭೋಮಂಡಲವೆಲ್ಲವೂ ಸಿಂಹನಾದ ಧ್ವನಿಯಿಂದ ತುಂಬಿತು.

ಎಲ್ಲರ ಅಭಿಪ್ರಾಯಗಳನ್ನೂ ತೆಗೆದುಕೊಂಡು ದ್ರೌಪದಿಯ ಕಡೆ ತಿರುಗಿ '' ಎಲೌ, ವೀರನಾರೀಮಣಿಯೆ, ನಿನ್ನ ಮತವೇನು ? '' ಎಂದನು. ಆಗ ದ್ರೌಪದಿಯು '' ಎಲೈ ವಾಸುದೇವನೇ, ಕೇಳು. ಕೌರವರು ನಾವುಕ್ಕೆ ಸಗ್ಗುಪರಲ್ಲ. ಅವರಲ್ಲಿ ದಯೆಯನ್ನು ಮಾಡಕೂಡದು. ಗದಾದಂಡವನ್ನು ಹಿಡಿದಿರುವ ಭೀಮನ ಭುಜಬಲವನ್ನು ನುಡಬೇಕು. ಗಾಂಡೀವ ಧನುರ್ಧಾರಿಯಾದ ಅರ್ಜುನನು ಮತ್ತೆ ಬೃಹನ್ನಳೆಯಾದಂತೆ ಕಾಣಿಸುತ್ತಿದೆ. ಕೌರವಾದಿಗಳು ಈ ಭೂಲೋಕದಲ್ಲಿ ಬದುಕಿರುವವರೆಗೂ ಈ ನನ್ನ ಹೃದಯ ಕೋಪಾಗ್ನಿಯು ಆರುವಂತಿಲ್ಲ. ಇದುವರೆಗೂ ನೀನು ನನ್ನನ್ನು ರಕ್ಷಿಸಿದೆ. ಈಗ ಈ ನನ್ನ ಹೃದಯತಾಪವನ್ನು ನಂದಿಸಿ ಶಾಂತವನ್ನಾಗಿ ಮಾಡಲು ನೀನೊಬ್ಬನೇ ಸಮರ್ಥನು. ಭೀಮಾದಿಗಳು ಸಂಧಿಗೊಡಂಬಟ್ಟರೆ, ನನ್ನ ತಂದೆ ಮತ್ತು ಸಹೋದರರು ಕೌರವಾದಿಗಳನ್ನು ಯುದ್ಧದಲ್ಲಿ ಸಂಹರಿಸುವರು. ಇಲ್ಲವಾದರೆ ನನ್ನ ಪುತ್ರರು ಅಭಿಮನ್ಯುವನ್ನು ಮುಂದುಮಾಡಿಕೊಂಡು ಆ ಕೆಲಸ ಮಾಡುವರು. ದುಶ್ಶಾಸನನು ನೆಲಕ್ಕುರುಳಿ ಮಣ್ಣುಪಾಲಾದುದನ್ನು ನೋಡಿದ ಹೊರತು ನನ್ನ ಮನಸ್ಸು ಸ್ವಸ್ಥವಾಗಲಾರದು. ಇದುವರೆಗೂ ಸಹನೆಯಿಂದ ತಡೆದುಕೊಂಡಿರುವ ಕೋಪಾಗ್ನಿಗೆ ಈಗಲಾದರೂ ವಿಮೋಚನ ಬೇಡವೆ ? '' ಎಂದು ಗದ್ಗದ ಕಂಠೆಯಾಗಿ ಕಂಬನಿಗಳನ್ನು ಸುರಿಸುತ್ತ ಸುಮ್ಮನಾದಳು.

ವೀರನಾರೀಮಣಿಯಾದ ದ್ರೌಪದಿಯ ಮಾತು ಎಲ್ಲರ ಹೃದಯವನ್ನೂ ಭೇದಿಸಿಬಿಟ್ಟಿತು. ಅಂದು ಅಲ್ಲಿದ್ದವರಿಗೆಲ್ಲ ಪಾಶುಪತಾಸ್ತ್ರ ಬಿಟ್ಟಂತಾಯಿತು. ಧರ್ಮರಾಜನು ತಲ್ಲಣಿಸಿದನು. ಭೀಮನ ನಿರ್ಮಲವಾಗಿದ್ದ ಹೃದಯವು ಪುನಃ ಕದಡಿತು. ಐಹಿಕ ವ್ಯಾಪಾರದಲ್ಲಿಯ ವ್ಯಾಮೋಹವು ಅವನ ಮನಸ್ಸನ್ನೆಲ್ಲ ಆಕ್ರಮಿಸಿಬಿಟ್ಟಿತು. ತಾನು ಹಿಂದೆ ಹೇಳಿದ ಮಾತಿಗೆ ನಾಚಿಕೆಯು ತಲೆದೋರಿತು. ಆಗ ಕೃಷ್ಣನನ್ನು ಕುರಿತು, " ಎಲೈ ಕೃಷ್ಣನೇ, ನಾನು ಹೇಳಿದ ಮಾತುಗಳು ನನ್ನ ಹೃದಯಪೂರ್ವಕವಾದುವುಗಳೆಂದು ತಿಳಿಯಬೇಡ, ಧರ್ಮರಾಜನಿಗಾಗಿ ಹಾಗೆ ನುಡಿದೆನೆಂದು ತಿಳಿ, ನನ್ನ ಪರಾಕ್ರಮವನ್ನು ನೀನು ಬಲ್ಲೆ. ಮುಂದೆ ಶತ್ರುಸಂಹಾರಕಾಲದಲ್ಲಿ ನೀನೇ ನೋಡುವಿ. ಯುದ್ಧವೇ ನಿಶ್ಚಯ. ಕೌರವನೊಡನೆ ಸಂಧಿ ಬೇಡ " ಎಂದನು.

ಬಳಿಕ ಕೃಷ್ಣನು, " ನಿನ್ನ ಸ್ವಭಾವವನ್ನು ನಾನು ಚೆನ್ನಾಗಿ ಬಲ್ಲೆ. ಸಂಧಿಯಾದರೆ ಸರಿ ; ಇಲ್ಲವಾದರೆ ಭಯಂಕರ ಯುದ್ಧವು ಪ್ರಾಪ್ತವಾಗುವುದು. ನೀನೂ ಅರ್ಜುನನೂ, ಅದನ್ನು ನಿರ್ವಹಿಸಬೇಕೇ ಹೊರತು ಮತ್ತಾರಿಂದಲೂ ಸಾಧ್ಯವಾಗುವುದಿಲ್ಲ. ನಾನು ಬುದ್ಧಿ ಹೇಳುವವನೇ ಹೊರತು ಯುದ್ಧಮಾಡುವವನಲ್ಲ " ಎಂದು ಹೇಳಿ ದ್ರೌಪದಿಯ ಕಡೆ ತಿರುಗಿ ಸಾಂತ್ವವಚನಗಳಿಂದ ಆಕೆಯ ಇಷ್ಟವನ್ನು ನೆರವೇರಿಸುವಂತೆ ಅಭಯಕೊಟ್ಟು, ಹಸ್ತಿನಾಪುರಕ್ಕೆ ಹೊರಡಲುದ್ಯುಕ್ತನಾದನು. ಕೃಷ್ಣನನ್ನು ದಾರಿಕಳುಹಿಸಿ ಆತನ ಅಪ್ಪಣೆ ಪಡೆದು ಎಲ್ಲರೂ ನಿಂತರು. ರಥವು ಮುಂದಕ್ಕೆ ಸಾಗಿತು.

ಗ್ರಾಮದ ಗಡಿಯನ್ನು ಬಿಟ್ಟೊಡನೆಯೇ ದುರ್ನಿಮಿತ್ತಗಳು ಕಾಣಿಸಿಕೊಂಡವು. ರಥವು ಬೇಗನೆ ಮುಂದಕ್ಕೆ ಸಾಗಿತು. ಕುಶಸ್ಥಳದ ಬ್ರಾಹ್ಮಣರು ಕೃಷ್ಣಾಗಮನವನ್ನು ತಿಳಿದು ದಾರಿಯಲ್ಲಿ ಪೂರ್ಣಕಲಶವೇ ಮೊದಲಾದ ಶುಭದ್ರವ್ಯಗಳೊಡನೆ ವೇದೋಕ್ತ ಆಶೀರ್ವಾದಗಳಿಂದ

ಸುಖಾಗಮನವನ್ನು ಬಯಸಿದರು. ಕೃಷ್ಣನು ಅವರ ಆತಿಥ್ಯವನ್ನು ಸ್ವೀಕರಿಸಿ ಆ ರಾತ್ರಿ ಅಲ್ಲೇ ಇದ್ದು ಮಾರನೇ ದಿವಸ ಹಸ್ತಿನಾಪುರಕ್ಕೆ ಹೊರಟನು. ಕೃಷ್ಣನು ತಮ್ಮಲ್ಲಿಗೆ ಬರುವುದನ್ನು ತಿಳಿದು ಧೃತರಾಷ್ಟ್ರ ದುರ್ಯೋಧನಾದಿಗಳು ಅವನಿಗೆ ಅಭೂತಪೂರ್ವ ಸ್ವಾಗತವೀಯಲು ಸಿದ್ಧರಾಗಿದ್ದರು.

ಧೃತರಾಷ್ಟ್ರನು ಕೃಷ್ಣನಿಗೆ ಪ್ರಿಯನಾದ ವಿದುರನನ್ನು ಬರಹೇಳಿ ಕಳುಹಿಸಿದನು. ವಿದುರನು ದೊರೆಯ ಸಮೀಪವನ್ನೈದಿ, ಕರೆಯಿಸಿದ ಹದನೇನೆಂದು ಬೆಸಗೊಳ್ಳಲು, ಅಂಧನೃಪತಿಯು ಅವನನ್ನು ಕುರಿತು, "ನಾಳೆ ಇಲ್ಲಿ ಬರಲಿರತಕ್ಕ ವಾಸುದೇವನಿಗೆ, ಇಷ್ಟವಾದದನ್ನು ಕೊಡಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ. ಅವನಿಗಿಷ್ಟವಾದ ವಸ್ತು ಯಾವುದು ?" ಎಂದು ಕೇಳಿದನು. ಆಗ ವಿದುರನು "ಪಾಂಡವರಿಗೆ ಕೊಡುವೆನೆಂದು ಎಲ್ಲರಿದಿರಿಗೂ ವಚನಕೊಟ್ಟು, ಅವರಿಗೆ ಕೊಡಬೇಕಾಗಿದ್ದ ಹಕ್ಕಿನ ರಾಜ್ಯವನ್ನು ಕೊಡಲಾರದೆ ರಾತ್ರಿ ಹಗಲೂ ವೃಥಾ ಸಂಕಟಪಡುತ್ತಿರುವ ನೀನು ನಿಜವಾಗಿಯೂ ವಾಸುದೇವನಿಗೆ ಬೇಕಾದುದನ್ನು ಕೊಡುವೆಯಾ? ಇಂತಹ ದಾತೃತ್ವವು ಪಾಂಡವರಲ್ಲಿ ನಿನಗೇಕೆ ಹುಟ್ಟಬಾರದು! ಜನಾರ್ದನನಿಗೆ ಅರ್ಜುನನು ಪ್ರಿಯನೆಂದೂ, ಪಾಂಡವರು ಪ್ರಾಣವೆಂದೂ ನೀನು ಕಾಣೆಯಾ!" ಎಂದಂದುಕೊಂಡು ಧೃತರಾಷ್ಟ್ರನನ್ನು ಕುರಿತು, "ಜನಾರ್ದನನಿಗೆ ನಿನ್ನ ಭೋಗ್ಯವಸ್ತುಗಳೊಂದೂ ಬೇಕಿಲ್ಲ. ಯಾವ ಕಾರ್ಯವನ್ನು ಬಯಸಿ ನಮ್ಮಲ್ಲಿ ಬರುವನೋ, ಆ ಕಾರ್ಯವನ್ನು ನೆರವೇರಿಸಿದರೆ ಸಕಲವನ್ನೂ ಕೊಟ್ಟಂತಾಯಿತು. ಅವನು ಕೌರವ ಪಾಂಡವರಿಬ್ಬರಿಗೂ ಸಮ. ಅವನ ಮನೋರಥವನ್ನೀಡೇರಿಸು' ಎಂದನು.

ಆಗ ಸಮೀಪದಲ್ಲಿದ್ದ ಕೌರವನು ತಂದೆಯನ್ನು ಕುರಿತು, "ಕೃಷ್ಣನು ಭೇದೋಪಾಯಕ್ಕೆ ಬಗ್ಗತಕ್ಕವನಲ್ಲ. ಶೂರನಾದ ಕ್ಷತ್ರಿ

ಯನು ಯಾವ ಕೆಲಸ ಮಾಡಿದರೆ ಅಪಮಾನ ಬರುವುದೋ ಆ ಕಾರ್ಯ ವನ್ನು ಮಾಡಬಾರದು. ಕೃಷ್ಣನು ಸಮ್ಮುಭಯರಿಗೂ ಲೇಸನ್ನೆಣಿಸುವ ನಾದರೂ ಈಗ ಪಾಂಡವರ ಕಡೆಯಾಗಿ ಬರುವನು. ನಾವು ಅವನಿಗೆ ಏನಾದರೂ ಕೊಟ್ಟರೆ ಭಯಪಟ್ಟು ಕೊಟ್ಟರೆಂದಾಗುತ್ತದೆ. ಆದುದ ರಿಂದ ಏನನ್ನೂ ಕೊಡಬಾರದು. ಯುದ್ಧಮಾಡಲು ನಿಶ್ಚಯಿಸಿರುವವ ನಿಗೆ ಎಷ್ಟು ಕೊಟ್ಟರೆ ತಾನೆ ಏನು ?" ಎಂದನು. ಆಗ ಭೀಷ್ಮಾದಿಗಳು "ಸನ್ಮಾನ ಮಾಡಲಿ, ಬಿಡಲಿ, ಆತನಿಗೆ ಕೋಪ ಬರುವುದಿಲ್ಲ. ನೀವುಗಳೆ ಲ್ಲರೂ ಆತನಲ್ಲಿ ಒಳ್ಳೆಯ ಮಾತುಗಳನ್ನೇ ಆಡಬೇಕು" ಎಂದರು. ಆಗ ದುರ್ಯೋಧನನು ಅಲ್ಲಿದ್ದವರನ್ನೆಲ್ಲ ಕುರಿತು "ಪಾಂಡವರಿಗೆ ಅರ್ಧರಾಜ್ಯ ವನ್ನು ಕೊಟ್ಟು ಇಬ್ಬರೂ ಸುಖದಿಂದಿರಿ" ಎಂದು ಹೇಳಿದರೆ ನಾನು ಕೇಳತಕ್ಕವನಲ್ಲ. ನಾಳೆ ಇಲ್ಲಿಗೆ ಬರುವ ಕೃಷ್ಣನನ್ನು ಉಪಾಯಾಂತ ರಗಳಿಂದ ಕಟ್ಟಿಹಾಕಿದರೆ ಎಲ್ಲರೂ ಸುಲಭವಾಗಿ ನಮ್ಮ ಸ್ವಾಧೀನರಾಗು ವರು. ನಾಳೆ ಇಲ್ಲಿಗೆ ಬರುವ ಆ ಕೃಷ್ಣನು, ಅರಿಯದಂತೆ ನಾವು ಮಾಡತಕ್ಕ ಉಪಾಯವನ್ನು ತಿಳುಹಿಸಿ" ಎಂದನು.

ಆಗ ಧೃತರಾಷ್ಟ್ರನು, "ಛಿ! ಮೂಢಾ, ಕೃಷ್ಣನ ವಿಷಯದಲ್ಲಿ ಹೀಗೆ ಅಪಚಾರವನ್ನು ಎಣಿಸಬೇಡ. ಇದು ನಿನಗೆ ಧರ್ಮವಲ್ಲ" ಎಂದನು. ಭೀಷ್ಮನು ತನ್ನ ಕೈಬೆರಳುಗಳಿಂದ ತನ್ನ ಕಿವಿಗಳನ್ನು ಮುಚ್ಚಿ ಕೊಂಡು ಸಭಾಮಂಟಪವನ್ನು ಬಿಟ್ಟು ಹೊರಟುಹೋದನು.

ಪಾಂಡವರ ಸತ್ವವೆಲ್ಲವೂ ಕೃಷ್ಣನಲ್ಲಿತ್ತು. ಕೃಷ್ಣನಿಲ್ಲದಿದ್ದರೆ ಪಾಂಡವರ ಬಾಳು ಬಾಳಲ್ಲ. ಈ ಗುಟ್ಟನ್ನು ತಿಳಿದ ಕೌರವನು ಪಾಂಡ ವರನ್ನು ತನ್ನ ಸ್ವಾಧೀನ ಮಾಡಿಕೊಳ್ಳಲು ಕೃಷ್ಣನನ್ನು ಬಂದಿಯನ್ನಾಗಿ ಮಾಡಬೇಕೆಂದೂಹಿಸಿದನು. ಆದರೆ ಯಾವುದನ್ನು ಪ್ರಕಟವಾಗಿ ನುಡಿಯ ಬೇಕು, ಯಾವುದನ್ನು ಅಂತರಂಗದಲ್ಲಿಟ್ಟುಕೊಳ್ಳಬೇಕು, ಎಂಬ ವಿವೇಚ ನಾಶಕ್ತಿಯು ಅವನಲ್ಲಿರಲಿಲ್ಲ. ಊಹಿಸುವುದರಲ್ಲಿ ತನ್ನ ಶಕ್ತಿಯನ್ನು

ತೋರುತ್ತಿದ್ದ ಕೌರವೇಶ್ವರನು, ಕಾರ್ಯನಿರ್ವಾಹದಲ್ಲೂ ಅದೇ ಶಕ್ತಿಯನ್ನು ತೋರಿಸಲುಳ್ಳವನಾಗಿದ್ದರೆ ಅವನ ಮುಂದೆ ಯಾರು ನಿಲ್ಲುತ್ತಿದ್ದರು.

ಮಾರನೆಯ ದಿವಸ ಕೃಷ್ಣನು ಹಸ್ತಿನಾಪುರದ ಕಡೆಗೆ ಹೊರಟನು. ದುರ್ಯೋಧನನು ಹೊರತಾಗಿ ಎಲ್ಲರೂ ಅವನನ್ನಿದಿರುಗೊಳ್ಳಲು ಹಸ್ತಿನಾಪುರದ ಗಡಿಯಲ್ಲಿ ಅವನ ಆಗಮನವನ್ನೇ ಇದಿರು ನೋಡುತ್ತಿದ್ದರು. ಅತ್ಯಂತ ವಿಜೃಂಭಣೆಯಿಂದ ಪುರಪ್ರವೇಶವಾಯಿತು. ಅಂದು ಹಸ್ತಿನಾಪುರವು ಎಲ್ಲೆಲ್ಲೂ ಹಸುರು ತೋರಣಗಳಿಂದಲೂ, ಧ್ವಜಪತಾಕೆಗಳಿಂದಲೂ, ಜನಸಂದಣಿಯಿಂದಲೂ ನೋಡುವವರಿಗೆ ಆನಂದವನ್ನೀಯುತ್ತ ರಮಣೀಯವಾಗಿತ್ತು. ಕೃಷ್ಣನು ನೆಟ್ಟಗೆ ಧೃತರಾಷ್ಟ್ರನಲ್ಲಿಗೆ ಹೋಗಿ ಕುಶಲಪ್ರಶ್ನೆಗಳನ್ನು ಮಾಡಿ, ಪಾಂಡವರು ಸೌಖ್ಯದಿಂದಿರುವರೆಂದು ಹೇಳಿ, ವಿದುರನ ಮನೆಗೆ ಹೋಗಬೇಕೆಂದಿರುವಾಗ, ದುರ್ಯೋಧನನು ಅವನನ್ನು ಕಾಣಿಸಿಕೊಂಡು ತನ್ನ ಆತಿಥ್ಯ ಸ್ವೀಕಾರ ಮಾಡಬೇಕೆಂದನು. ಆಗ ಕೃಷ್ಣನು, " ನಾನು ಪಾಂಡವರ ಕಡೆ ದೂತನು. ವಿಶ್ವಾಸದಿಂದ ಬಡಿಸಿದ ಅನ್ನವನ್ನು ಊಟ ಮಾಡಬೇಕು. ಪಾಂಡವರು ನನ್ನ ಪ್ರೀತಿಗೆ ಪಾತ್ರರು. ಅವರಿಗೆ ಅಪ್ರಿಯವಾದ ಕೆಲಸವನ್ನು ಮಾಡುತ್ತಿರುವುದರಿಂದ ನಿನ್ನೊಡನೆ ನಾನು ಊಟ ಮಾಡಲಾರೆನು. ನಾನು ಬಂದ ಕೆಲಸವು ಸುಸೂತ್ರವಾಗಿ ನೆರವೇರಿದ ಮೇಲೆ ಊಟ ಮಾಡುವೆನು " ಎಂದು ಹೇಳಿ ಕೌರವನ ಮನಸ್ಸು ಕಿರಿದು ಮಾಡಿ, ವಿದುರನ ಮನೆಗೆ ಹೊರಟು ಹೋದನು. ಊಟವಾದ ಬಳಿಕ ಕುಂತಿ ಮೊದಲಾದವರ ಮನೆಗಳಿಗೆ ಹೋಗಿ ಯೋಗಕ್ಷೇಮ ವಿಚಾರಿಸಿಕೊಂಡು ಆ ರಾತ್ರಿಯನ್ನು ವಿದುರನ ಮನೆಯಲ್ಲಿ ಸುಖವಾಗಿ ಕಳೆದನು.



|| ಶ್ರೀ ||

## ನಾಲ್ಕನೆಯ ಅಧ್ಯಾಯ

# ಸಂಧಾನಭಂಗ

ಬೆಳಗಾಯಿತು. ಕೃಷ್ಣನು ಸ್ನಾನಮಾಡಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಸೂರ್ಯಪ್ರಾರ್ಥನೆ ಮಾಡುತ್ತಿರುವಾಗ, ಕರ್ಣನು ಕೃಷ್ಣನನ್ನು ಕಾಣಲು ವಿದುರನ ಮನೆಗೆ ಹೋದನು. ಕೃಷ್ಣನು ಅವನನ್ನು ಸತ್ಕರಿಸಿ ಪೀಠದಲ್ಲಿ ಕುಳಿತುಕೊಳ್ಳುವಂತೆ ಹೇಳಿದನು. ಸೂರ್ಯಪ್ರಾರ್ಥನೆಯು ಮುಗಿಯಿತು. ಇಬ್ಬರೂ ಅಲ್ಲಿಂದ ಹೊರಟು ಧೃತರಾಷ್ಟ್ರನ ಒಡ್ಡೋಲಗವನ್ನು ಸೇರಿದರು. ತಮಗಾಗಿ ಸಿದ್ಧವಾಗಿದ್ದ ಆಸನಗಳಲ್ಲಿ ಕುಳಿತುಕೊಂಡರು. ಸಭಾಸದರೆಲ್ಲರೂ ಕೃಷ್ಣನನ್ನು ನೋಡಿ ನೋಡಿ, ಹಿಗ್ಗುತ್ತ ಎವೆಯಿಕ್ಕದೆ ಚಿತ್ರದ ಪ್ರತಿಮೆಗಳೋಪಾದಿಯಲ್ಲಿ ಕುಳಿತಿದ್ದರು.

ಒಳಿಕ ಕೃಷ್ಣನು ಧೃತರಾಷ್ಟ್ರನನ್ನು ಸಂಬೋಧಿಸಿ, "ಎಲೈ ರಾಯನೆ, ಕೌರವರಿಗೂ ಪಾಂಡವರಿಗೂ ಸಂಧಿಯನ್ನು ಬಯಸಿ ನಿನಗೆ ಕ್ಷೇಮವನ್ನುಂಟುಮಾಡುವುದಕ್ಕೋಸ್ಕರ ಇಲ್ಲಿಗೆ ಬಂದಿರುವೆನು. ಶ್ರೇಷ್ಠವಾಗಿರುವ ಕುರುವಂಶಕ್ಕೆ ಕಳಂಕವನ್ನು ತರಬೇಡ. ಒಳಗೂ ಹೊರಗೂ ವಂಚನೆ ಮಾಡುವುದನ್ನು ನಿಗ್ರಹಿಸಿ ಕುಲಗೌರವವನ್ನು ಕಾಪಾಡು. ಕೌರವರಿಗೂ ಪಾಂಡವರಿಗೂ, ಉಂಟಾಗಿರುವ ವೈರವನ್ನು ಸಮಾಧಾನಪಡಿಸು. ಈ ಭಾರವು ನಮ್ಮಿಬ್ಬರ ತಲೆಯ ಮೇಲೆ ಬಿದ್ದಿರುವುದರಿಂದ ನಿನಗೆ ವಶವರ್ತಿಗಳಾದ ಕೌರವರನ್ನು ನೀನು ಸಮಾಧಾನಪಡಿಸು. ನನ್ನ ಅನುಮತಿಯನ್ನು ತಪ್ಪದೆ ನಡೆಯುವ ಪಾಂಡವರನ್ನು ನಾನು ಸಮಾಧಾನಪಡಿಸುವೆನು. ಎಲ್ಲರಿಗೂ ಹಾನಿಕರವಾದ ಯುದ್ಧವನ್ನು ತಪ್ಪಿಸಿ ಉಭ

ಯತ್ರರೂ ಸ್ನೇಹದಿಂದಿರುವಂತೆ ಮಾಡುವುದು ಚಂದ ಕೌರವ ಪಾಂಡ ವರು ಒಂದಾಗಿ ಬೆರೆತರೆ ಅವರನ್ನು ಕೆಣಕಿ ಬದುಕುವರು ಈ ಭೂಮಂಡ ಡಲದಲ್ಲಿ ಯಾರಾದರೂ ಉಂಟೆ? ನೀನು ಪುತ್ರಪೌತ್ರಸಮೇತನಾಗಿ ಯುಧಿಷ್ಠಿರ ಮೊದಲಾದವರನ್ನು ಮುಂದಿಟ್ಟುಕೊಂಡು ಮೊದಲಿನಂತೆ ಬದುಕು. ಈಗ ನೀನು ಅನುಭವಿಸುತ್ತಿರುವ ರಾಜ್ಯವು ಅವರು ಸಂಪಾದಿ ಸಿಕೊಟ್ಟದ್ದು. ಲೋಭವನ್ನು ಮಾಡದೆ ಪಾಂಡವರಲ್ಲಿ ಪುತ್ರವಾತ್ಸಲ್ಯ ವನ್ನು ಮೊದಲಿನಂತೆ ತೋರಿಸು "ನಮಗೆ ಕೊಡಬೇಕಾದ ಅರ್ಧರಾಜ್ಯ ವನ್ನು ಕೊಟ್ಟು ನಮ್ಮನ್ನು ಕಾಪಾಡು. ನಾವು ನಿಮಗೆ ಕಪಟದ್ಯೂತ ದಲ್ಲಿ ರಾಜ್ಯವನ್ನು ಒಪ್ಪಿಸಿ ಮುಂದೆ ರಾಜ್ಯಸುಖವನ್ನನುಭವಿಸುವೆವೆಂಬ ಅಭಿಲಾಷೆಯಿಂದ ಹದಿಮೂರು ವರ್ಷಗಳು ಅಖಂಡವಾಗಿ ಕ್ಲೇಶಪಟ್ಟೆವು ಈಗ ನಮ್ಮಲ್ಲಿ ದಯೆಮಾಡಿ ಆ ರಾಜ್ಯಸುಖವನ್ನನುಭವಿಸುವಂತೆ ಅನುಗ್ರ ಹಿಸು. ಇಗೋ ನಿನಗೆ ಅಡ್ಡಬಿದ್ದು ಬೇಡಿಕೊಳ್ಳುತ್ತೇವೆ. ಯುದ್ಧಕ್ಕಾಗಿ ಮನಸ್ಸು ಮಾಡಬೇಡ. ಲೋಭಮಾಡಿದರೆ ಯುದ್ಧಮಾಡಿ ಕೌರವಾದಿಗ ಳನ್ನು ಕೊಂದು ನಮ್ಮ ರಾಜ್ಯವನ್ನು ಹೊಂದಬೇಕಾಗುತ್ತದೆ. ಅಷ್ಟಕ್ಕೆ ಅವಕಾಶ ಕೊಡಬೇಡ" ಇದೇ ನಿನಗೆ ಪಾಂಡವರ ಬಿನ್ನಹ. ಧರ್ಮಾ ಧರ್ಮವನ್ನು ವಿವೇಚನೆ ಮಾಡಿ ಪಾಂಡವರಲ್ಲಿ ದ್ರೋಹವನ್ನೆಣಿಸದೆ ಅವರ ಹಕ್ಕಿನ ರಾಜ್ಯವನ್ನು ಕೊಟ್ಟು, ಶಾಂತಿಸ್ಥಾಪನೆ ಮಾಡುವುದು ಉತ್ತ ಮಪಕ್ಷ, ಎಂದು ಹೇಳಿ ದುರ್ಯೋಧನನ ಕಡೆ ತಿರುಗಿ. "ಕುರುವಂಶಕ್ಕೆ ಕಳಂಕ ತರಬೇಡ. ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಎಲ್ಲರಿಗೂ ಪ್ರಿಯವಾದುದು. ನೀನು ಯುದ್ಧವನ್ನೇ ಮಾಡುತ್ತೇನೆಂದು ಹಠಮಾಡಿ ದರೆ ನಿನಗೆ ಆಪತ್ತು ಸಂಘಟಿಸಿದಾಗ "ಅಯ್ಯೋ, ಮಿತ್ರರ ಮಾತು ಕೇಳ ದೆ ಕೆಟ್ಟೆ" ಎಂದು ಕಾಲಾತೀತವಾದ ಮೇಲೆ ಪಶ್ಚಾತ್ತಾಪ ಪಡುವೆ. ಶೂರರಾದ ಪಾಂಡವರನ್ನು ಜಯಿಸುವುದಕ್ಕೆ ನಿನ್ನಿಂದಲೂ, ನಿನ್ನೊಡನೆ ಸೇರಿರುವ ಸಕಲರಾದ ಅರಸುಗಳಿಂದಲೂ ಆಗಲಾರದು. ಯುದ್ಧದಲ್ಲಿ

ಕೋಪೋದ್ದೀಪಿತನಾದ ಭೀಮನನ್ನು ನೋಡಲು ಯಾರಿಗಾದರೂ ಶಕ್ತಿಯುಂಟೆ? ಯುದ್ಧದಲ್ಲಿ ಅರ್ಜುನನ ಮುಂದೆ ನಿಂತು ಜೀವಸಹಿತ ಯಾವನಾದರೂ ಹಿಂದಿರುಗಿ ಹೋಗಲು ಶಕ್ತನಾಗುವನೆ! ದೇವದಾನವಗಂಧರ್ವರೂ ಅವನನ್ನು ಜಯಿಸಲಾರರು. ಇದಕ್ಕೆ ಅನೇಕ ನಿದರ್ಶನಗಳು ಆಗಲೇ ಕಾಣಬಂದಿವೆ. ಕಣ್ಣಾರೆ ನೀನು ಎಲ್ಲವನ್ನೂ ನೋಡಿರುವೆ. ಮುಂದೆ ನೋಡುವೆ. ಎಲೈ ದುರ್ಯೋಧನಾ, ಯುದ್ಧಕ್ಕೆ ಬರುವವರೆಲ್ಲರೂ ಜ್ಞಾತಿಗಳು, ಬಂಧುಗಳು, ಮತ್ತು ಒಡಹುಟ್ಟಿದವರುಗಳು. ನಿನಗೋಸ್ಕರ ಅವರೆಲ್ಲರೂ ನಾಶವನ್ನೈದುವರು. ಕೌರವನು ಕುಲನಾಶಕನೆಂಬ ಅಪಕೀರ್ತಿಗೆ ನೀನು ಗುರಿಯಾಗಬೇಡ ನೀನು ಪಾಂಡವರೊಡನೆ ಸಂಧಿಮಾಡಿಕೊಂಡರೆ ಧೃತರಾಷ್ಟ್ರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ನಿನ್ನನ್ನು ಯುವರಾಜನನ್ನಾಗಿ ಮಾಡುವರು. ದೈವಯೋಗದಿಂದ ತನಗೆ ತಾನೇ ಲಭಿಸುವ ಐಶ್ವರ್ಯವನ್ನು ನಿರಾಕರಿಸಬೇಡ. ಇವೆಲ್ಲವನ್ನೂ ವಿಚಾರಿಸಿ ನಿನಗೆ ಮಿತ್ರನಾದ ನನ್ನ ಮಾತನ್ನು ನಡೆಯಿಸಿ, ಪಾಂಡವರಿಗೆ ಅಪಮಾನಮಾಡದೆ, ಅರ್ಧರಾಜ್ಯವನ್ನು ಕೊಟ್ಟು, ಅವರೊಡನೆ ಸಂತೋಷಪಡುತ್ತ ಸುಖವಾಗಿರು" ಎಂದನು. "ಮೂರ್ಖತ್ವವನ್ನು ಬಿಟ್ಟು ಕೃಷ್ಣನ ಮಾತುಗಳನ್ನು ಪರಿಪಾಲಿಸು" ಎಂದು ಭೀಷ್ಮಾದಿಗಳು ನುಡಿದರು.

ಆತ್ಮಗೌರವಕ್ಕೆ ಕುಂದನ್ನು ತರುವ ಕೃಷ್ಣನ ಈ ಮಾತುಗಳು ಕೌರವನನ್ನು ಬಹಳವಾಗಿ ಪೀಡಿಸಿದುವು. ರಣಹೇಡಿಯಾಗಿದ್ದರೆ, ಬೃಹನ್ನಳೆಯನ್ನು ಅರ್ಜುನನೆಂದರಿಯದ ಉತ್ತರಕುಮಾರನಾಗಿದ್ದರೆ, ಕೌರವೇಶ್ವರನು ಅಂದು ಕೃಷ್ಣನ ಮಾತುಗಳಿಗೆ ತಲೆಬಾಗಿ ನಿಲ್ಲುತ್ತಿದ್ದನು. ಅವನು ಪರಾಕ್ರಮದಲ್ಲಾಗಲಿ, ರಾಜತಂತ್ರದಲ್ಲಾಗಲಿ, ಭೀಮಾರ್ಜುನರಿಗೆ ಕಡಮೆಯಿರಲಿಲ್ಲ. ಭೀಮಾರ್ಜುನರ ಪರಾಕ್ರಮದ ಗೊಡ್ಡುಬೆದರಿಕೆಗೆ ಹೇಗೆ ಬಗ್ಗಿಯಾನು? ಆಗ ದುರ್ಯೋಧನನು ಕೃಷ್ಣನನ್ನು ಕುರಿತು, "ಎಲೈ, ಗೋಪಾಲನೇ, ಭೀಷ್ಮದ್ರೋಣಾದಿಗಳಂತೆ ನೀನು ಕೂಡ, ನನ್ನ ಬಳಾ

ಬಲವಿಮರ್ಶೆ ಮಾಡದೆ ದೂಷಿಸುತ್ತಿರುವೆ. ಎಷ್ಟು ವಿಚಾರಿಸಿ ನೋಡಿದರೂ ನೀವು ನನ್ನಲ್ಲಿ ಆರೋಪಿಸುವ ಅಪರಾಧಗಳೊಂದೂ ಕಂಡುಬರುವುದಿಲ್ಲ. ಪಾಂಡವರು ತಾವೇ ಕುತೂಹಲದಿಂದ ಬಂದು ಶಕುನಿಯೊಡನೆ ಜೂಜಾಡಿ ಸೋತು, ರಾಜ್ಯವನ್ನು ಕಳೆದುಕೊಂಡರೆ ನಾನು ಮಾಡಿದ ಅಪರಾಧವೇನು ? ಅವರು ತಮಗೆ ಜೀವನವಿರುವ ತಾವಿನಲ್ಲಿ ಸುಖವಾಗಿರಲಿ. ಅವರೇ ಜೂಜಿನಲ್ಲಿ ಸೋತು ಒಡಂಬಟ್ಟು ಕೊಟ್ಟ ರಾಜ್ಯವನ್ನು ಅನುಭವಿಸುತ್ತಲಿರುವ ನನ್ನಲ್ಲಿ ತಪ್ಪೇನು ? ರಾಜ್ಯವನ್ನು ಸೋತು, 'ನಾವು ಕಾಡಿನಲ್ಲಿ ಕ್ಲೇಶಪಟ್ಟೆವು, ದುಶ್ಶಾಸನನು ದ್ರೌಪದಿಗೆ ಅಪಮಾನ ಮಾಡಿದನು ' ಎಂದು ನಮ್ಮಲ್ಲಿ ದ್ವೇಷಮಾಡಿ ನಮ್ಮ ಅರಿಗಳೊಡನೆ ಸೇರಿಕೊಂಡು ನಮ್ಮ ಮೇಲೆ ದಂಡೆತ್ತಿ ಬರುವರೆ ಹೊರತಾಗಿ, ನಾನೇನು ಮಾಡಿದೆ ? ಯುದ್ಧಕ್ಕಾಗಲಿ, ನಿಷ್ಠುರದ ಮಾತಿಗಾಗಲಿ, ಹೆದರಿ ದೇವೇಂದ್ರನು ದಂಡೆತ್ತಿ ಬಂದರೂ, ಶರಣಾಗತನಾಗಲಾರೆನು. ಕ್ಷತ್ರಿಯರಾದ ನಮಗೆ ಯುದ್ಧವೇ ಧರ್ಮ. ಭೀಷ್ಮದ್ರೋಣಾದಿಗಳು ಯುದ್ಧದಲ್ಲಿ ಅಜೇಯರು. ಗೆದ್ದರೆ ರಾಜ್ಯಲಕ್ಷ್ಮಿಯನ್ನನುಭವಿಸವೆನು. ಸೋತರೆ ವೀರಸ್ವರ್ಗವನ್ನಡರುವೆನು. ಪೂರ್ವದಲ್ಲಿ ಪಾಂಡವರು ಸೋತು ಕೊಟ್ಟ ರಾಜ್ಯವನ್ನು ಮರಳಿ ಕೊಡಲಾರೆ. ವಿಶೇಷವಾಗಿ ಹೇಳುವುದರಿಂದೇನು ? ಸೂಚಿಮೊನೆಯಷ್ಟು ಭೂಮಿಯನ್ನಾದರೂ ನಾನು ಅವರಿಗೆ ಕೊಡಲಾರೆನು. ಇದೇ ನನ್ನ ನಿಶ್ಚಯವು " ಎಂದನು.

ಕೌರವನ ಮಾತುಗಳನ್ನು ಕೇಳಿ ಸಭೆಯವರೆಲ್ಲರೂ ಹತಾಶರಾದರು. ಧೃತರಾಷ್ಟ್ರನ ಗುಂಡಿಗೆಯೊಡೆಯಿತು. ಕರ್ಣ ಶಕುನಿಗಳು ಉತ್ಸಾಹಭರಿತರಾದರು. ಆಗ ಕೃಷ್ಣನು ದುರ್ಯೋಧನನನ್ನು ಕುರಿತು, " ಪಾಂಡವರ ವೈಭವವನ್ನು ಸಹಿಸಲಾರದೆ ಕಪಟದ್ಯೂತದ ವ್ಯಾಜದಿಂದ ಅವರ ಸಂಪತ್ತನ್ನಪಹರಿಸಿದೆ. ಸತ್ಕುಲಪ್ರಸೂತೆಯಾದ, ಸಚ್ಚರಿತ್ರಳಾದ, ಪಾಂಡವರ ಧರ್ಮಪತ್ನಿಯಾದ ದ್ರೌಪದಿಗೆ ಸಭಾಮಧ್ಯದಲ್ಲಿ ಅಪಮಾನ

ಮಾಡಿದೆ. ವಾರಣಾವತದಲ್ಲಿ ಅರಗಿನ ಮನೆಯಲ್ಲಿ ಪಾಂಡವರನ್ನೆಲ್ಲ ದಹಿಸುವುದಕ್ಕೆ ಯತ್ನಿಸಿದೆ. ವಿಷವನ್ನಿಕ್ಕಿ, ಹಗ್ಗಗಳಿಂದ ಕಟ್ಟಿಸಿ ಮಡುವಿನಲ್ಲಿ ತಳ್ಳಿಸಿ, ಹಾವುಗಳಿಂದ ಕಚ್ಚಿಸಿ ನಾನಾವಿಧವಾದ ಕಪಟೋಪಾಯಗಳಿಂದ ಪಾಂಡವರನ್ನು ಕೊಲ್ಲುವುದಕ್ಕೆ ಪ್ರಯತ್ನಿಸಿದೆ. ನೀನು ಹುಟ್ಟಿದ್ದು ಮೊದಲುಗೊಂಡು ಇಂದಿನ ವರೆಗೂ ಪಾಂಡವರಿಗೆ ಕೇಡನ್ನು ಮಾಡಿರುವೆಯೋ ಹೊರತು ಲೇಶವಾದರೂ ಲೇಸನ್ನು ಮಾಡಿರುವೆಯಾ? ಈಗ ನಿನ್ನ ತಂದೆ ತಾಯಿಗಳೂ, ಭೀಷ್ಮದ್ರೋಣಾದಿಗಳೂ, ಸಂಧಿಯು ಲೇಸೆಂದು ಎಷ್ಟು ಹೇಳಿದರೂ ಕೇಳದೆ ದುರ್ಬುದ್ಧಿಯಾಗಿ ಕುಮಾರ್ಗದಲ್ಲೆ ಹೋಗುತ್ತಿರುವೆ. ನಿನಗೆ ಅಧರ್ಮವೂ, ಅಪಕೀರ್ತಿಯೂ ತಪ್ಪದು" ಎಂದನು.

ಸಂಕೇತದಂತೆ ಆಗ ದುಶ್ಶಾಸನನು ದುರ್ಯೋಧನನನ್ನು ಕುರಿತು "ನೀನು ಪಾಂಡವರೊಡನೆ ಸಮಾಧಾನ ಮಾಡಿಕೊಳ್ಳದಿದ್ದರೆ, ಭೀಷ್ಮದ್ರೋಣಾದಿಗಳು ನಿನ್ನನ್ನು ಹಗ್ಗದಿಂದ ಬಿಗಿದು ಧರ್ಮರಾಯನಿಗೆ ಒಪ್ಪಿಸುವರು. ಎಚ್ಚರಿಕೆಯಿಂದಿರುವುದು ಒಳ್ಳೆಯದು." ಎಂದು ನುಡಿದನು. ಆಗ ದುರ್ಯೋಧನನು ಮರ್ಯಾದಾರಹಿತನಾಗಿ, ದೊಡ್ಡವರೆಲ್ಲರಿಗೂ ಅಪಮಾನವಾಗುವಂತೆ, ಸಭೆಯನ್ನು ಬಿಟ್ಟು ಹೊರಟುಹೋದನು. ದುಶ್ಶಾಸನನೂ, ಹಿಂದೆಯೇ ಹೋದನು.

ಆಗ ಕೃಷ್ಣನು ಸಭೆಯವರನ್ನು ಕುರಿತು, ದುರಭಿಮಾನದಿಂದ ಹೀಗೆ ಮರ್ಯಾದೆಯನ್ನುಲ್ಲಂಘಿಸಿದ, ಐಶ್ವರ್ಯಮತ್ತನಾದ ಇವನನ್ನು ಶಿಕ್ಷಿಸದೆ ಇರುವುದು ಸರಿಯಲ್ಲ. ಇವನನ್ನು ಕಟ್ಟಿ ಧರ್ಮರಾಯನಿಗೆ ಒಪ್ಪಿಸಿದರೆ, ಎಲ್ಲರಿಗೂ ಕ್ಷೇಮವುಂಟಾಗುವುದು. ಕುಲವನ್ನು ರಕ್ಷಿಸುವುದಕ್ಕೋಸ್ಕರ ಒಬ್ಬ ಪುರುಷನನ್ನೂ, ಗ್ರಾಮವನ್ನು ರಕ್ಷಿಸುವುದಕ್ಕೋಸ್ಕರ ಒಂದು ಕುಲವನ್ನೂ, ದೇಶವನ್ನು ರಕ್ಷಿಸುವುದಕ್ಕೋಸ್ಕರ ಒಂದು ಗ್ರಾಮವನ್ನೂ, ತನ್ನನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ಭೂಮಿಯನ್ನಾ

ದರೂ ತ್ಯಜಿಸಬೇಕೆಂದು ನೀತಿಯಿರುವುದರಿಂದ ಪಾಪಾತ್ಮನಾದ ಈ ದುರ್ಯೋಧನನನ್ನು ಬಿಗಿದು ಕಟ್ಟಿ ಪಾಂಡವರ ವಶ ಮಾಡಿದರೆ, ನೀವೆಲ್ಲರೂ ಕ್ಷೇಮವಾಗಿರುವಿರಿ " ಎಂದನು. ಕೊನೆಗೆ ಧೃತರಾಷ್ಟ್ರನು ಗಾಂಧಾರಿಯಿಂದ ಮಗನಿಗೆ ಬುದ್ಧಿ ಹೇಳಿಸಿದನು. ಏನು ಮಾಡಿದರೆ ತಾನೆ ಏನು ? ಕೌರವನ ಮೂರ್ಖತ್ವಕ್ಕೆ ಮದ್ದನ್ನು ಯಾರೂ ಕೊಡಲಾರದೆ ಹೋದರು.

ಸಂಕೋಲೆ ಸಾಮಗ್ರಿಗಳಿಂದ ಯುಕ್ತನಾದ ದುಶ್ಶಾಸನನೊಡನೆ ದುರ್ಯೋಧನನು ಸಭಾಪ್ರವೇಶ ಮಾಡಿದನು. ಎಲ್ಲರೂ ಬೆಕ್ಕಸ ಬೆರಗಾಗಿ, ಕಲ್ಲಿನ ಪ್ರತಿಮೆಗಳಂತೆ ಕುಳಿತಿದ್ದರು. ಕೌರವನು ಕೃಷ್ಣನು ಕುಳಿತಿದ್ದ ಕಡೆ ನೋಡಿದನು. ನಾಲ್ಕಾರು ಕೃಷ್ಣರನ್ನು ಕಂಡು ದಿಗ್ಭ್ರಾಂತನಾಗಿ ಯಾರನ್ನು ಕಟ್ಟಬೇಕು ; ಯಾರನ್ನು ಬಿಡಬೇಕು ; ಎಂದು ಯೋಚಿಸುತ್ತ ನಿಂತಿರುವಾಗ ಮಾಯೆಯು ಓರೆಯಾಯಿತು. ಹೃದಯವು ಕಳಂಕರಹಿತವಾಯಿತು; ನಿರ್ಮಲವಾಯಿತು; ವಿಶ್ವಪ್ರೇಮವು ಮೊಳೆಯಿತು. ಸಭೆಯುಲ್ಲಿದ್ದವರೆಲ್ಲ ಕೃಷ್ಣರಾದರು. ಶ್ರೀ ಕೃಷ್ಣನು ಎಲ್ಲರನ್ನೂ ಪ್ರೀತಿಸುವ, ಎಲ್ಲರಿಂದಲೂ ಪ್ರೀತಿಸಲ್ಪಡುವ ವಿಶ್ವಬಂಧುವೆಂದು ಅಂದು ಕೌರವನಿಗೆ ಭಾಸವಾಯಿತು. ಸ್ವಲ್ಪಕಾಲ ಮಾತ್ರ ಅವನ ಹೃದಯವು ವಿಶ್ವದಷ್ಟು ವಿಸ್ತಾರವಾಯಿತು. ಭಾಂಡದ ನೀರು ಸಾಗರದ ನೀರಿನೊಡನೆ ಬೆರೆಯಿತು. ವ್ಯಕ್ತಿಜ್ಞಾನವು ವಿಶ್ವಜ್ಞಾನವಾಯಿತು. ವ್ಯಕ್ತಿಪ್ರೇಮವು ವಿಶ್ವಪ್ರೇಮವಾಯಿತು. ವ್ಯಕ್ತಿಶಕ್ತಿಯು ವಿಶ್ವಶಕ್ತಿಯಾಯಿತು. ಅಖಿಲಾಂಡಕೋಟಿ ಬ್ರಹ್ಮಾಂಡಗಳೂ ಕೃಷ್ಣನಲ್ಲಿ ಅಡಕವಾಗಿರುವುದನ್ನು ಅಂದು ಕಣ್ಣಾರೆ ಕಂಡನು. ಸನತ್ಸುಜಾತನ ಉಪದೇಶದಿಂದ ಕಣ್ಣುಬಾರದ ಅಂಧನೃಪನಿಗೆ ಅಂದು ಕಣ್ಣು ಬಂತು. ಸಭಾಸದರೆಲ್ಲರಿಗೂ ಅಂದು ಹಾಗನ್ನಿಸಿತು. ಎಲ್ಲರೂ ಆನಂದಾಬ್ಧಿಯಲ್ಲಿ ಮುಳುಗಿ ತೇಲಾಡಿದರು. ಸಂಕೋಲೆ ಸಾಮಗ್ರಿಗಳೊಡನೆ ಸಭಾಪ್ರವೇಶ ಮಾಡಿದ ಕೌರವೇಶ್ವರನು ಅಂದು ಸಾಕ್ಷಾತ್ಕಾರಪಡೆದನು.

ಸ್ವಲ್ಪಕಾಲ ಹೋಯಿತು. ಪರದೆಯು ಪುನಃ ಬಿತ್ತು. ಎಲ್ಲರಿಗೂ ಸ್ವಪ್ನ ಕಂಡು ಎಚ್ಚರವಾದಂತಾಯಿತು. ಕೊನೆಗೆ ಕೃಷ್ಣನು "ನಾನು ಮಾಡತಕ್ಕ ಯತ್ನವನ್ನೆಲ್ಲ ಮಾಡಿದೆ ಇನ್ನು ಈ ವಿಷಯದಲ್ಲಿ ಏನು ಮಾಡಲೂ ಅಶಕ್ತನಾಗಿರುವೆನು. ಪಾಂಡವರ ವಿಷಯದಲ್ಲಿ ನಾನೇನೂ ದ್ವೇಷವನ್ನೆಣಿಸಿದವನಲ್ಲ. ಆದುದರಿಂದ ನನ್ನಲ್ಲೇನೂ ತಪ್ಪಿಲ್ಲ. ಇನ್ನು ನಿಮ್ಮ ಅಪ್ಪಣೆಯನ್ನು ಪಡೆದು ಯುಧಿಷ್ಠಿರನ ಸಮೀಪಕ್ಕೆ ಹೋಗಿಬರುವೆನು" ಎಂದು ಹೇಳಿ ಸಭೆಯನ್ನು ಬಿಟ್ಟು ಕುಂತೀದೇವಿಯ ಮನೆಗೆ ಹೋದನು. ಕೃಷ್ಣನ ಈ ಕೊನೆಯ ನುಡಿಗಳು ಎಲ್ಲರ ಕಿವಿಗೂ ಎಲ್ಲೋ ಸ್ವಪ್ನದಲ್ಲಿ ಬಿದ್ದಂತೆ ಬಿದ್ದವು. ಎಲ್ಲರೂ ಸ್ತಂಭೀಭೂತರಾಗಿ, ಕೌರವನು ಸಭಾಪ್ರವೇಶ ಮಾಡುವಾಗ ಹೇಗಿದ್ದರೋ, ಹಾಗೆಯೇ ಕುಳಿತಿದ್ದರು. ಕೌರವನೂ ದುಶ್ಶಾಸನನೂ ನಿಂತಲ್ಲಿಯೇ ನಿಂತಿದ್ದರು.



|| ಶ್ರೀ ||

## ಐದನೆಯ ಅಧ್ಯಾಯ.

# ಸತ್ತ್ವಪಾನ ಮತ್ತು ಸಮರಾಂಗಣಪ್ರವೇಶ

ಕೌರವೇಶ್ವರಾ! ಇಂದು ನೀನು ಅನಾಥನಾದೆ. ದೈವಬಲವಿಲ್ಲದವನೇ ದುರ್ಬಲನು. ಕೃಷ್ಣಪರಮಾತ್ಮನು ನಿನ್ನಲ್ಲಿ ಬಂದು ರಾಜ್ಯಭಿಕ್ಷೆಯನ್ನು ಪಾಂಡವರಿಗಾಗಿ ಬೇಡಿದನು. ತಿರಸ್ಕರಿಸಿಬಿಟ್ಟೆ. ನಿನ್ನ ಅವಿವೇಕದಿಂದ, ಮಲಗಿದ್ದ ಕೃಷ್ಣಸರ್ಪವನ್ನು ಕೆರಳಿಸಿ ಎಬ್ಬಿಸಿಬಿಟ್ಟೆ. ಯುದ್ಧಮಾಡಿಯೋ ಪಾಂಡವರು ರಾಜ್ಯಪಡೆಯಬೇಕೆಂಬ ನಿಶ್ಚಯವನ್ನು ಸೂಚಿಸಿದೆ. ಯುದ್ಧದಲ್ಲಿ ಗೆಲ್ಲಲು ನಿನ್ನ ಸತ್ತ್ವವನ್ನು ಹೀರಿದ ಹೊರತು ಸಾಧ್ಯವಿಲ್ಲ. ಅಗೋ ಕಾರ್ಯ್ಯಭಾಗವನ್ನು ನಡೆಸುತ್ತಿರುವನು. ಏನೂ ತಿಳಿಯದಿರುವ ಹಸುಗೂಸಿನಂತೆ, ತೆಪ್ಪನೆ ಒಂದೆಡೆ ನಿನ್ನಷ್ಟಕ್ಕೆ ನೀನೇ ಸರ್ವಬಲಸಂಪನ್ನನೆಂದು ಹೇಳಿಕೊಳ್ಳುತ್ತ ಕುಳಿತಿರುವೆ. ಯಾವುದೋ ಒಂದು ಕಾರ್ಯಕ್ಷೇತ್ರದಲ್ಲಿ ಯಾವುದೋ ಒಂದು ಕೆಲಸ ಮಾಡಿದರೆ ಅದರ ಪರಿಣಾಮ ಫಲವು ಇನ್ನೊಂದು ಕಾರ್ಯಕ್ಷೇತ್ರದಲ್ಲಿ ಫಲವಾಗಿ ಪರಿಣಮಿಸುವುದು. ಗೆಲುವು ಸೋಲುಗಳು ಅತಿರಥ ಮಹಾರಥರ ಮೇಲೆ ನಿಂತಿಲ್ಲ. ಇವೆರಡೂ ಸತ್ತ್ವಾಸತ್ತ್ವಗಳನ್ನಾಶ್ರಯಿಸಿಕೊಂಡಿವೆ. ಕೈಯಲ್ಲಿರುವ ಕೈದುವು ಸಮಯದಲ್ಲಿ ಉಪಯೋಗಕ್ಕೆ ಬಾರದಂತೆ ಮಾಡಿದರೆ ಸಾಕು. ಇದಿರಾಳು ಇದಿರಿಗೆ ಬಂದಾಗ ಕಾರ್ಯಭಾಗ ನಡೆಸದಂತೆ ಮಾಡಿದರೆ ಸಾಕು. ನಿನ್ನ ಶಸ್ತ್ರಾಸ್ತ್ರಗಳು ಏನನ್ನೂ ಮಾಡಲಾರವು. ಅತಿರಥ ಮಹಾರಥರು ರಕ್ಕೆಪುಕ್ಕಗಳನ್ನು ಕಳೆದುಕೊಂಡ ಹಕ್ಕಿಗಳಂತೆ ದುರ್ಬಲರಾಗುವರು. ನಿನ್ನ ಸತ್ತ್ವವೆಲ್ಲವೂ ಇಂದು ಕವಚಕುಂಡಲಗಳನ್ನು ಕಳೆದುಕೊಂಡ ಕರ್ಣನಲ್ಲಿದೆ.

ಆ ಕರ್ಣನು ಇಂದು ಕೃಷ್ಣ ಕುಂತಿಯರ ಕೈಯಲ್ಲಿದ್ದಾನೆ. ನಿನ್ನೊಡನಿರುವ ಕರ್ಣನೆ ಬೇರೆ. ಕೃಷ್ಣ ಕುಂತಿಯರ ಕೈಯಲ್ಲಿರುವ ನಿಜವಾದ ಕರ್ಣನೆ ಬೇರೆ. ಅವರವರು ಮಾಡಿದ್ದನ್ನು ಅವರವರು ಅನುಭವಿಸಿಯೇ ತೀರಬೇಕು. ಕೌರವೇಶ್ವರ! ಇನ್ನು ರಾಜ್ಯಲಕ್ಷ್ಮಿಯ ಹಂಬಲನ್ನು ಬಿಟ್ಟು, ಮೃತ್ಯುವನ್ನು ಬಲವಾಗಿ ತಬ್ಬಿಕೋ. ನಿನ್ನ ಉಪ್ಪುತಿಂದು ತನ್ನ ಸರ್ವಸ್ವವನ್ನೂ ನಿನಗಾಗಿ ಮುಡುಪಿಟ್ಟಿರುವ ಕರ್ಣನು ಇಂದು ಕೃಷ್ಣ ಕುಂತಿಯರ ಪಾಶಕ್ಕೊಳಗಾಗಿ, ನಿನ್ನ ಹಿತಾಕಾಂಕ್ಷಿಯಾಗಿದ್ದರೂ, ನಿಶ್ಶಕ್ತನಾಗುತ್ತಲಿರುವನು. ಭೀಷ್ಮನ ಮೇಲಿನ ಕೋಪದಿಂದ 'ನಿನ್ನ ತಲೆಬುರುಡೆ ಬೀಳುವವರೆಗೂ, ಕೈಯಲ್ಲಿ ಕೋದಂಡವನ್ನು ಹಿಡಿಯುವುದಿಲ್ಲ' ಎಂದು ಸಭೆಯಲ್ಲಿ ನಿನ್ನಿದಿರಿಗೆ ಪ್ರತಿಜ್ಞೆಮಾಡಿ ಬಿಟ್ಟನು. ಇದು ನಿನ್ನ ದುರ್ದೈವದ ಫಲ. ದೈವವು ಅವನ ಬಾಯಲ್ಲಿ ಅಂದು ಹಾಗೆ ನುಡಿಸಿತು!

ಕೃಷ್ಣನು ಹಸ್ತಿನಾವತಿಗೆ ಬಂದ ಉದ್ದೇಶವು ನೆರವೇರಿತು. ನೆಟ್ಟಗೆ ಕುಂತಿಯ ಮನೆಗೆ ಹೋದನು. ಸಂಧಾನಭಂಗದ ಸಂಗತಿಯನ್ನು ತಿಳಿಸಿ, ಕರ್ಣನ ವೃತ್ತಾಂತವನ್ನು ಹೇಳಿ, ಮಕ್ಕಳಿಗೆ ಅವಳು ಕೊಟ್ಟ ಸಂದೇಶವನ್ನು ತೆಗೆದುಕೊಂಡು ವಿದುರನ ಮನೆಗೆ ಹೋದನು.

ಇತ್ತ ಸಭೆಯಲ್ಲಿದ್ದವರೆಲ್ಲ ಎಚ್ಚತ್ತು, ಕೃಷ್ಣನಿಲ್ಲದಿರುವುದನ್ನು ಕಂಡು, ತಮ್ಮ ತಮ್ಮ ಮನೆಗಳಿಗೆ ಹೋದರು. ಮಧ್ಯಾಹ್ನದ ಊಟವಾದ ಬಳಿಕ ಕೃಷ್ಣನು ಸ್ವಲ್ಪಕಾಲ ವಿಶ್ರಾಂತಿಸುಖವನ್ನನುಭವಿಸಿ ಪ್ರಯಾಣ ಸನ್ನದ್ಧನಾದನು. ಕೃಷ್ಣನ ಸಮಾಚಾರವು ಎಲ್ಲರಿಗೂ ತಿಳಿಯಿತು. ಕೂಡಲೆ ಭೀಷ್ಮದ್ರೋಣ ಕೃಪ ಕರ್ಣಾದಿಗಳು ವಿದುರನ ಮನೆಗೆ ಬಂದರು. ರಥವು ಸಿದ್ಧವಾಯಿತು. ದಾರಿಕಳುಹಿಸಲು ಎಲ್ಲರೂ ಅವನ ಹಿಂದೆಯೇ ಹೊರಟರು. ಸ್ವಲ್ಪದೂರ ಹೋದನಂತರ ಭೀಷ್ಮ ದ್ರೋಣಾದಿಗಳನ್ನು ನಿಲ್ಲುವಂತೆಯೂ ಕರ್ಣನನ್ನು ರಥದ ಮೇಲೇರುವಂತೆಯೂ ಹೇಳಿ ತಾನೂ ಹತ್ತಿದನು.

ರಥವು ಸ್ವಲ್ಪ ದೂರ ಮುಂದೆ ಸಾಗಿತು. ಕರ್ಣನನ್ನು ಬಾಚಿ ತಬ್ಬಿಕೊಂಡು ಅವನು ಹುಟ್ಟಿದ ಕಥೆಯನ್ನು ಹೇಳತೊಡಗಿದನು. "ಹಿಂದೆ ಮಹಾ ತಪಸ್ವಿಗಳಾದ ದೂರ್ವಾಸರು ಒಂದು ದಿನ ಕುಂತಿ ಭೋಜನ ಮನೆಗೆ ಹೋದರು. ದೊರೆಯ ಕೋರಿಕೆಯಂತೆ ಅಲ್ಲಿ ಕೆಲವು ಕಾಲ ನಿಂತರು. ಅವನ ಪುತ್ರಿಯಾದ ಪೃಥೆಯು ಅವರನ್ನು ಬಹುವಾಗಿ ಶುಶ್ರೂಷೆ ಮಾಡಿ ಸಂತೋಷಪಡಿಸಿದಳು. ಆನಂದಭರಿತರಾದ ದೂರ್ವಾಸರು ಕುಂತಿಗೆ ದೇವತೆಗಳನ್ನು ಕರೆಯುವ ಮಂತ್ರವನ್ನುಪದೇಶಮಾಡಿ ಹೊರಟುಹೋದರು. ಮಂತ್ರದ ಬಲಾಬಲಗಳನ್ನು ಪರೀಕ್ಷಿಸಬೇಕೆಂಬ ಕುತೂಹಲವು ಪೃಥೆಗೆ ಹುಟ್ಟಿತು. ಕೂಡಲೆ ಬಾಲಭಾವದಿಂದ ಸೂರ್ಯನನ್ನು ಕರೆದಳು. ಸೂರ್ಯನು ಪ್ರತ್ಯಕ್ಷನಾದನು. ಲೋಕಾಪವಾದಕ್ಕೆ ಹೆದರಿದಳು. ಸೂರ್ಯನನ್ನು ಎಷ್ಟೋ ಬೇಡಿಕೊಂಡಳು. ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸೂರ್ಯನ ಪ್ರಭಾವದಿಂದ ಪುಷ್ಪವತಿಯಾದಳು. ಗರ್ಭಧಾರಣೆಯೂ ಆಯಿತು. ನವಮಾಸ ತುಂಬಿದ ಮೇಲೆ ಕವಚ ಕುಂಡಲಗಳನ್ನು ಧರಿಸಿಕೊಂಡು, ದಿವ್ಯತೇಜಸ್ಸಿನಿಂದೊಪ್ಪುವ ನಿನ್ನನ್ನು ಪಡೆದಳು. ಲೋಕಾಪವಾದ ಭಯವು ನಿನ್ನನ್ನು ಪೆಟ್ಟಿಗೆಯಲ್ಲಿಟ್ಟು ಗಂಗಾನದಿಯ ಪಾಲು ಮಾಡುವಂತೆ ಮಾಡಿಬಿಟ್ಟಿತು. ಒಬ್ಬ ಬೆಸ್ತರವನ ಕೈಗೆ ಆ ಪೆಟ್ಟಿಗೆ ಸಿಕ್ಕಿತು. ಪೆಟ್ಟಿಗೆಯನ್ನೊಡೆದು ನಿನ್ನನ್ನು ಕಂಡು ತನ್ನ ಹೆಂಡತಿಯಾದ ರಾಧೆಗೆ ಕೊಟ್ಟನು. ರಾಧೆಯ ಸ್ತನ್ಯದಿಂದ ನೀನು ಬೆಳೆದೆ. ಹೀಗೆ ಕುಂತೀಪುತ್ರನಾದ ನೀನು ಅಂದು ರಾಧೇಯನಾದೆ" ಎಂದನು.

ಕರ್ಣನಿಗೆ ಶರೀರವೆಲ್ಲವೂ ರೋಮಾಂಚವಾಯಿತು. ಏನೂ ತೋಚದವನಾಗಿ ಕೃಷ್ಣನನ್ನು ನೋಡುತ್ತ ಸುಮ್ಮನೇ ಹಾಗೆ ರಥದ ಮೇಲೆ, ಕೆತ್ತಿದ ಬೊಂಬೆಯಂತೆ ಕುಳಿತಿದ್ದನು.

"ಹೀಗೆ ಕುಂತೀದೇವಿಯು ನಿನ್ನನ್ನು, ಕನ್ಯಕಾವಸ್ಥೆಯಲ್ಲಿ ಪಡೆದಳು. ಅಂತಹ ಮಕ್ಕಳಿಗೆ ಆಕೆಯನ್ನು ವಿವಾಹ ಮಾಡಿಕೊಂಡವನೇ ತಂದೆಯೆಂದು ಧರ್ಮಶಾಸ್ತ್ರಜ್ಞರು ಹೇಳುವರು. ಆದುದರಿಂದ ಧರ್ಮದಿಂದ ನೋಡಿದರೆ ನೀನು ಪಾಂಡುರಾಯನಿಗೆ ಜ್ಯೇಷ್ಠಪುತ್ರನು. ಈಗ ನೀನು ಧರ್ಮರಾಯನ ಸಮೀಪಕ್ಕೆ ಬಂದರೆ ನೀನೇ ಅರಸಾಗುವಿ. ಇತರ ಸಮಸ್ತ ಅರಸುಗಳೂ ನಿನ್ನ ಪಾದಕ್ಕೆ ಅಡ್ಡಬೀಳುವರು. ಯುಧಿಷ್ಠಿರನು ರಾಜ್ಯವನ್ನು ಪಡೆದು ನಿನಗೆ ಚಾಮರವನ್ನು ಬೀಸುವನು. ಭೀಮನು ಶ್ವೇತಚ್ಛತ್ರವನ್ನು ಹಿಡಿಯುವನು. ಅರ್ಜುನನು ಸಾರಥ್ಯವನ್ನು ಮಾಡುವನು. ಅಭಿಮನ್ಯುವು ಪಾರ್ಶ್ವರಕ್ಷಕನಾಗುವನು. ನಕುಲ ಸಹದೇವರೇ ಮೊದಲಾದವರು ನಿನ್ನ ಹಿಂಬಾಲಕರಾಗುವರು. ನಕ್ಷತ್ರಗಳ ಮಧ್ಯದಲ್ಲಿ ಪ್ರಕಾಶಿಸುವ ಚಂದ್ರನಂತೆ ಪಾಂಡವರ ಮಧ್ಯದಲ್ಲಿ ಪ್ರಕಾಶಿಸುತ್ತ ಕುಂತೀದೇವಿಯು ಮನಸ್ಸಂತೋಷಪಡಿಸು. ದ್ರೌಪದಿಯು ಸ್ವರ್ಗಸ್ಥನಾಗಿರುವ ಪಾಂಡುವಿಗೆ ಬದಲಾಗಿ ನೀನೇ ಪಾಂಡುವೆಂದು ಭಾವಿಸಿ ಅವನನ್ನುಪಚರಿಸುವಂತೆ ನಿನ್ನನ್ನು ಉಪಚರಿಸುವಳು. ಇದನ್ನು ನೋಡಿ ಮಿತ್ರರೆಲ್ಲರೂ ಸಂತೋಷಪಡುವರು. ಶತ್ರುಗಳೆಲ್ಲರೂ ವ್ಯಥೆಪಡುವರು. ಪಾಂಡವರೊಡನೆ ನಿನಗೆ ಭ್ರಾತೃಸ್ನೇಹವುಂಟಾಗಲಿ" ಎಂದು ಮೃದು ಮಧುರ ವಚನಗಳಿಂದ ಮನೋಹರವಾಗಿಯೂ, ಪ್ರಿಯವಾಗಿಯೂ, ಹಿತವಾಗಿಯೂ ಧರ್ಮಯುಕ್ತವಾಗಿಯೂ ಇರುವ ಮಾತುಗಳನ್ನು ಕರ್ಣನಿಗೆ ಹೇಳಿದನು

ಆಗ ಕರ್ಣನು, "ನೀನು ಹೇಳಿದ ಮಾತು ಯುಕ್ತವಾದುದು. ಪಾಂಡುರಾಯನಿಗೆ ಮಗನೆಂಬುದನ್ನು ಈಗ ತಿಳಿದೆನು. ಆದರೆ ನನಗೆ ಸ್ತನ್ಯ ಕೊಟ್ಟು ನನ್ನಲ್ಲಿ ಪುತ್ರಪ್ರೀತಿಯನ್ನು ಮಾಡಿ, ನನ್ನ ಮೂತ್ರ ಪುರೀಷಗಳನ್ನು ಸಹಿಸಿ, ನನ್ನನ್ನು ನಾನಾ ಪ್ರಕಾರಗಳಿಂದ ಪೋಷಿಸಿದ ರಾಧೆಗೆ ಧರ್ಮಜ್ಞನಾದ ನಾನು "ಈಗ ನಾನು ನಿನ್ನ ಮಗನಲ್ಲೆಂದು ಹೇಗೆ

ಹೇಳಲಿ? ಇದೂ ಅಲ್ಲದೆ ಆ ಅತಿರಥನೆಂಬ ಸೂತನು ಪುತ್ರಸ್ನೇಹದಿಂದ ನನಗೆ ಶಾಸ್ತ್ರೋಕ್ತಪ್ರಕಾರ ಜಾತಕರ್ಮಾದಿಗಳನ್ನು ಮಾಡಿ, ವಸುಷೇಣನೆಂಬ ನಾಮಕರಣವನ್ನು ಬ್ರಾಹ್ಮಣರಿಂದ ಮಾಡಿಸಿ ಯೌವನಸಮಯದಲ್ಲಿ ಸೂತಕನ್ನಿಕೆಯರನ್ನು ವಿವಾಹ ಮಾಡಿಸಿದನು. ಆತನನ್ನು ನಾನು ತಂದೆಯೆಂದು ಭಾವಿಸಿಕೊಂಡು ಅನುರಾಗಾತಿಶಯದಿಂದ ಅನೇಕ ಪುತ್ರರನ್ನು ಪಡೆದೆನು. ಈ ಅಖಂಡ ಭೂಮಂಡಲಾಧಿಪತ್ಯವು ಲಭಿಸುವುದೆಂತಲೂ ಹೆಚ್ಚಾದ ಐಶ್ವರ್ಯವುಂಟಾಗುವುದೆಂತಲೂ, ಸಂತೋಷದಿಂದಾಗಲಿ ಯುದ್ಧಭಯದಿಂದಲೇ ಆಗಲಿ ಸೂತಪುತ್ರನಲ್ಲವೆಂದು ಹೇಗೆ ಸಟೆಮಾಡಲಿ? ಅದೂ ಅಲ್ಲದೆ ಧೃತರಾಷ್ಟ್ರನ ಮನೆಯನ್ನು ಸೇರಿ ದುರ್ಯೋಧನನ ಆಶ್ರಯದಿಂದ ಹದಿಮೂರು ವರ್ಷಗಳ ಕಾಲ ಅಂಗರಾಜ್ಯವನ್ನು ನಿಷ್ಕಂಟಕವಾಗಿ ಅನುಭವಿಸಿ ಮತ್ತು ಅನೇಕ ಯಜ್ಞಗಳನ್ನು ಮಾಡಿ, ಆ ಸೂತಕುಲದಲ್ಲಿ ಕನ್ನಿಕೆಯರನ್ನು ಕೊಟ್ಟು, ತೆಗೆದುಕೊಂಡು, ಸಂಬಂಧ ಮಾಡಿ, ಆ ಕುಲಧರ್ಮವನ್ನಾಚರಿಸಿದೆನು. ಈ ಪ್ರಕಾರದಿಂದ ನನಗೆ ಮಹೋಪಕಾರ ಮಾಡಿ, ಅರ್ಜುನನಿಗೆ ನಾನೇ ಸರಿಯಾದ ಪ್ರತಿಭಟನೆಂದು ತಿಳಿದು ನನ್ನ ನಂಬಿಕೆಯಿಂದ ಪಾಂಡವರೊಡನೆ ಯುದ್ಧ ಮಾಡುವುದಕ್ಕೆ ನಿಶ್ಚಯಿಸಿಕೊಂಡಿರುವ ದುರ್ಯೋಧನನ ವಿಷಯದಲ್ಲಿ ಭಯದಿಂದಲಾದರೂ, ಸಾಮ್ರಾಜ್ಯಪದವಿ ಲಭಿಸುವುದೆಂಬ ಆಶೆಯಿಂದಲಾದರೂ ಸುಳ್ಳಾಡಲಾರೆನು. ನಾನು ಅರ್ಜುನನ ಸಂಗಡ ಯುದ್ಧಮಾಡದಿದ್ದರೆ, ನನಗೂ, ಅರ್ಜುನನಿಗೂ ಲೋಕದಲ್ಲಿ ಅಪಕೀರ್ತಿ ಬರುವುದು. ಅದು ಹಾಗಿರಲಿ. ನೀನು ಹೇಳಿದ ಮಾತುಗಳೆಲ್ಲವೂ ಗೋಪ್ಯವಾಗಿರತಕ್ಕವುಗಳೇ ಹೊರತಾಗಿ ಮತ್ತೊಬ್ಬರ ಸಂಗಡ ಹೇಳತಕ್ಕವುಗಳಲ್ಲ. ಧರ್ಮಾತ್ಮನಾಗಿಯೂ, ಸತ್ಯಸಂಪನ್ನನಾಗಿಯೂ ಇರುವ ಯುಧಿಷ್ಠಿರನು ನನ್ನನ್ನು ಕುಂತೀದೇವಿಯ ಜ್ಯೇಷ್ಠಪುತ್ರನೆಂದು ತಿಳಿದಿದ್ದೇ ಆದರೆ ತಾನು ರಾಜ್ಯಾಧಿಪತ್ಯಕ್ಕೆ ಒಡಂಬಡಲಾರನು. ಆತನು ನನಗೆ ರಾಜ್ಯಾಧಿಪತ್ಯವನ್ನು

ಕೊಟ್ಟರೆ. ನಾನು ಅದನ್ನು ಸುಯೋಧನನಿಗೆ ಒಪ್ಪಿಸಿಬಿಡುವೆನು. ಅರಸುಗಳು ವೃದ್ಧರಾಗಿ, ರೋಗಪೀಡಿತರಾಗಿ ಸಾಯುವುದಕ್ಕಿಂತ ಯುದ್ಧದಲ್ಲಿ ಶತ್ರುಗಳಿಂದ ಹತರಾಗುವುದು ಮೇಲು. ಇಷ್ಟರ ಮೇಲೆ ನಿನ್ನ ಮನಸ್ಸಿಗೆ ತೋರಿದಂತೆ ಮಾಡು. ಒಟ್ಟಿನಲ್ಲಿ ನನ್ನ ವೃತ್ತಾಂತವನ್ನು ಗೋಪ್ಯವಾಗಿಟ್ಟುಕೊಂಡು, ಪಾಂಡವರನ್ನು ಯುದ್ಧಕ್ಕೋಸ್ಕರ ಕರೆದುಕೊಂಡು ಬಾ " ಎಂದನು

ಆಗ ಕೃಷ್ಣನು, ನಸುನಗುತ್ತ "ಎಲೈ ಕರ್ಣನೆ, ರಾಜ್ಯವನ್ನೆಲ್ಲ ನಿನಗೆ ಕೊಡುವೆನೆಂದು ನಾನು ಹೇಳಿದರೂ, ನೀನು ಅದಕ್ಕೆ ಆಶೆಪಡದೆ ಇರುವೆ. ಪಾಂಡವರಿಗೆ ಜಯವಾಗುವುದಕ್ಕೆ ಸಂದೇಹವಿಲ್ಲ. ಈಹೊತ್ತಿಗೆ ಏಳನೆಯ ದಿವಸವು ಅಮಾವಾಸ್ಯೆಯಾಗಿಯೂ, ಇಂದ್ರದೇವತಾಕವಾಗಿಯೂ, ಇರುವುದು. ಆದುದರಿಂದ ಆ ದಿವಸವೇ ಯುದ್ಧಕ್ಕೆ ಆರಂಭವಾಗತಕ್ಕದ್ದು. ಆ ದಿವಸಕ್ಕೆ ಸರಿಯಾಗಿ ಹೊರಟು ಕುರುಕ್ಷೇತ್ರಕ್ಕೆ ಬಂದು ಪಾಳ್ಯವನ್ನು ಇಳಿಸುತ್ತೇನೆ. ನೀವೂ ಹಾಗೆಯೇ ಬರಬೇಕೆಂದು ನಿಮ್ಮ ಅರಸಿಗೆ ತಿಳುಹಿಸು. ನೀನು ಹೇಳಿದ ಹಾಗೆ ಯುದ್ಧವೇ ಆಗುವುದು. ಎಲ್ಲರೂ ಯುದ್ಧದಲ್ಲಿ ಹತರಾಗಿ ಪುಣ್ಯಲೋಕಗಳನ್ನು ಪಡೆಯುವರು, " ಎಂದನು.

ಆಗ ಕರ್ಣನು, " ಎಲೈ, ಪುಂಡರೀಕಾಕ್ಷನೇ, ಇದೆಲ್ಲವನ್ನೂ ತಿಳಿದೂ ತಿಳಿದು ನನಗೇಕೆ ಮೋಹವನ್ನುಂಟುಮಾಡುತ್ತಿರುವಿ ? ದುಶ್ಶಾಸನ, ದುರ್ಯೋಧನ, ಶಕುನಿ ಮತ್ತು ನಾನು — ಈ ನಾಲ್ವರಾದ ನಾವೇ ಸಕಲ ಕ್ಷತ್ರಿಯರಿಗೂ, ನಾಶವುಂಟಾಗುವುದಕ್ಕೆ ನಿಮಿತ್ತರಾಗಿರುವೆವು. ಎಲ್ಲೆಲ್ಲೂ ದುರ್ನಿಮಿತ್ತಗಳು ಕಂಡುಬರುತ್ತಿವೆ. ದುರ್ಯೋಧನನಿಗೆ ಜಯವು ಲಭಿಸಲಾರದೆಂದು ನನಗೆ ತೋರುತ್ತಿದೆ. ಈ ಯುದ್ಧಸಮುದ್ರದಲ್ಲಿ ಈಜಾಡಿ ಬದುಕಿ ತಡಿಯನ್ನು ಸೇರಿದರೆ ಪುನಃ ನಿನ್ನನ್ನು ನೋಡುತ್ತೇನೆ. ಹಾಗಲ್ಲದಿದ್ದಲ್ಲಿ ಗಾಂಡೀವದಿಂದ ಬಿಡಲ್ಪಟ್ಟ ಬಾಣಪರಂಪರೆಗಳಿಂದ ಹತನಾದರೆ ಸ್ವರ್ಗದಲ್ಲಿಯಾದರೂ ನಿನ್ನನ್ನು ನೋಡು

ತ್ತೇನೆ." ಎಂದು ಹೇಳಿ ಪ್ರೀತಿಪೂರ್ವಕವಾಗಿ ಕೃಷ್ಣನನ್ನು ತಬ್ಬಿಕೊಂಡು ಅವನ ಆಜ್ಞೆಯಿಂದ ಆತನ ರಥದಿಂದಿಳಿದು ಸುವರ್ಣಭೂಷಿತವಾದ ತನ್ನ ರಥವನ್ನೇರಿ ಕಳವಳದಿಂದ ಕೃಷ್ಣನ ರಥವನ್ನು ತಿರುಗಿ ತಿರುಗಿ ನೋಡುತ್ತ ಹಸ್ತಿನಾಪುರದ ಕಡೆ ಹೊರಟನು ಎಂದೂ ಇಲ್ಲದ ಒಂದು ಹೊಸ ವ್ಯಾಮೋಹವು ಅಂದು ಅವನ ಹೃದಯವನ್ನು ಹೊಕ್ಕಿತು. ಸೂರ್ಯನು, ಮಗನು ಚಿಂತಾಕ್ರಾಂತನಾಗಿರುವುದನ್ನು ಕಂಡು ಸಹಿಸಲಾರದೆ, ಅಸ್ತಾದ್ರಿಯ ಶಿಖರದಿಂದ ಕೆಳಕ್ಕಿಳಿದನು.

ಆ ರಾತ್ರಿ ವಿದುರನು ಕುಂತಿಯ ಮನೆಗೆ ಹೋಗಿ, ಕರ್ಣನಿಗೆ ಪಾಂಡವರಲ್ಲಿ ಪ್ರೀತಿಯುಂಟಾಗುವಂತೆ ಮಾಡಬೇಕೆಂದು ಸೂಚಿಸಿದನು. ಮಾರನೆ ದಿವಸ ಕುಂತಿಯು ಯಾರಿಗೂ ಅರಿಯದಂತೆ ಕರ್ಣನನ್ನು ಕಾಣಲು ಗಂಗಾತೀರಕ್ಕೆ ಹೋದಳು. ಕರ್ಣನು ಪೂರ್ವಾಚಲದಲ್ಲಿ ಉದಯಿಸುತ್ತಿರುವ ಸೂರ್ಯದೇವನಿಗೆ ಅರ್ಘ್ಯವನ್ನು ಕೊಡುತ್ತಿದ್ದನು. ಕುಂತಿಗೆ ಮಗನನ್ನು ನೋಡಿದೊಡನೆಯೇ ರೋಮಾಂಚವಾಯಿತು. ಎದೆ ಹಾಲು ಉಕ್ಕಿತು. ಅದೀಗ ನಿಶ್ಚಲವಾದ, ನಿರ್ಮಲವಾದ, ಅಕುಟಿಲವಾದ, ಶುದ್ಧವಾದ, ಶಾಂತಿಮಯವಾದ, ಆನಂದಪೂರಿತವಾದ ಪ್ರೇಮ. ಒಂದು ಪಾತ್ರೆಗೆ ಹಾಲು ಕರೆದು ಪಾನಮಾಡೆಂದು ಕೊಟ್ಟಳು. ಅರ್ಘ್ಯ ಬಿಡುತ್ತಿದ್ದುದರಿಂದ ತೆಗೆದುಕೊಳ್ಳಲಾರದವನಾಗಿ ಕೆಳಗಿಡುವಂತೆ ಹೇಳಿದನು. ಹಾಗೆಯೇ ಕೆಳಗಿಟ್ಟಳು. ಅಲ್ಲೆ ಓಡಾಡುತ್ತಿದ್ದ ಒಂದು ಕಪಿಯು ತನ್ನ ಸ್ವಭಾವವನ್ನನುಸರಿಸಿ ಆ ಹಾಲಿನ ಪಾತ್ರೆಯನ್ನು ಉರುಳಿಸಿತು. 'ಹೋಯಿತು! ಹೋಯಿತು!' ಎಂದು ಕೂಗಿದಳು. ಆಗ ಕರ್ಣನು ಕೆಳಗೆ ಚೆಲ್ಲಿದ್ದ ಹಾಲನ್ನು ತನ್ನ ಎದೆಗೆ ಒತ್ತಿಕೊಂಡನು. ಅಂದು ಅದು ಅಲ್ಲಿ ಅಮೃತವಾಯಿತು. ನೋಡಿದಿರಾ, ಎದೆ ಹಾಲಿನ ಪ್ರಭಾವವನ್ನು ? ರಾಧೆಯ ಸ್ತನ್ಯದಿಂದ ರಕ್ಷಿತನಾದ ಕರ್ಣನಿಗೆ ಅಂದು ತಾಯಿಯ ಸ್ತನ್ಯವು ಒಂದು ವಿಧವಾದ ನವಚೇತನವನ್ನು ಕೊಟ್ಟಿತು. ಒಂದು ವಿಧವಾದ

ಹುರುಪನ್ನು ಹುಟ್ಟಿಸಿತು. ಇದನ್ನೇ ನಾವು ಎದೆಯಲ್ಲಿ ಅಮೃತವಾಗಿ ನಿಂತಿತೆಂದು ಹೇಳುತ್ತೇವೆ.

ಸಂಧ್ಯಾವಂದನೆಯನ್ನು ಬೇಗ ಮುಗಿಸಿಕೊಂಡು ತಾಯಿಗೆ ಪ್ರದಕ್ಷಿಣ ನಮಸ್ಕಾರ ಮಾಡಿ, ಬಂದ ಕಾರ್ಯವನ್ನು ಬೆಸಗೊಳ್ಳಲು ಕುಂತಿಯು ಮಗನನ್ನು ಬಾಚಿ ತಬ್ಬಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಕರ್ಣನು ತನಗೆ ಹುಟ್ಟಿದ ವೃತ್ತಾಂತವನ್ನೂ, ಪಾಂಡವರು ಹುಟ್ಟಿದ ವೃತ್ತಾಂತವನ್ನೂ ವಿಸ್ತಾರವಾಗಿ ತಿಳಿಸಿ, ತಮ್ಮಂದಿರಲ್ಲಿ ಅನುರಕ್ತನಾಗಿ ರಾಜ್ಯಸುಖವನ್ನನುಭವಿಸುತ್ತ ತನ್ನ ಮನಸ್ಸಿಗೆ ಸಂತೋಷಪಡಿಸಬೇಕೆಂದಳು. ಆಗ ಕರ್ಣನು, "ಎಲೌ ತಾಯೆ, ಪಾಂಡವರಲ್ಲಿ ಬೆರೆತು ಬಾಳುವುದೊಂದನ್ನು ಬಿಟ್ಟು ಬೇಕಾದುದನ್ನು ಕೇಳು, ಕೊಡುವೆನು. ಕೌರವನ ಉಪ್ಪು ತಿಂದು ಅವನಿಗಾಗಿ ಈ ಶರೀರವನ್ನು ಮುಡುಪಾಗಿಟ್ಟುಕೊಂಡಿರುವೆನು. ರಾಜ್ಯಸುಖದಿಂದ, ತಮ್ಮಂದಿರ ಮೋಹದಿಂದ, ಈಗ ಅವನಿಗೆ ಎರಡು ಬಗೆಯಲಾರೆ, ಯುದ್ಧವೇ ನಿಶ್ಚಯ" ಎಂದನು.

ಕುಂತಿಯು ಕಣ್ಣುಗಳಲ್ಲಿ ನೀರು ಸುರಿಸುತ್ತ, "ತಂದೆಯಳಿದ ಬಳಿಕ ಅವನ ಸ್ಥಾನವನ್ನು ಜ್ಯೇಷ್ಠನು ಆಕ್ರಮಿಸುವನು. ಇಗೋ, ತಮ್ಮಂದಿರನ್ನು ನಿನ್ನ ಮಡಲಿಗೆ ಹಾಕಿರುವೆನು. ಅವರನ್ನು ನೀನೇ ಕಾಯಬೇಕು" ಎಂದಳು. ಕರ್ಣನಿಗೆ ಧರ್ಮಸಂಕಟ ಬಂತು. ಒಂದೆಡೆ ತಾಯಿ; ಮತ್ತೊಂದೆಡೆ ಸ್ವಾಮಿ; ಅಭಯ ಕೊಟ್ಟರೆ ಸ್ವಾಮಿದ್ರೋಹ; ಕೊಡದಿದ್ದರೆ ಕರ್ತವ್ಯಹೀನತೆ. ಏನೂ ಮಾತಾಡಲಾರದವನಾಗಿ ಹಾಗೆಯೇ ಒಂದು ಘಳಿಗೆ ಸುಮ್ಮನೆ ಕುಳಿತುಕೊಂಡು ಬಿಟ್ಟನು. ಕೊನೆಗೆ "ಎಲೌ, ತಾಯೆ, ನನ್ನನ್ನು ಇಕ್ಕಟ್ಟಿಗೆ ಸಿಕ್ಕಿಸುಬಿಟ್ಟೆ. ಕೊಲ್ಲಲಾರೆ, ಕೊಲ್ಲದಿರಲಾರೆ. ಅರ್ಜುನನ ಹೊರತಾಗಿ ಮಿಕ್ಕ ಯುಧಿಷ್ಠಿರನೇ ಮೊದಲಾದವರು ವಧ್ಯರಾದರಾಗ್ಯೂ ಅವರನ್ನು ನಾನು ಸಂಹರಿಸುವುದಿಲ್ಲ. ಅವರು ನನ್ನ ಕೈಗೆ ಸಿಕ್ಕಿದರೂ ಸಂಹರಿಸದೆ ಬಿಟ್ಟುಬಿಡುತ್ತೇನೆ ಅರ್ಜುನನು ನನ್ನ ಕೈಗೆ ಸಿಕ್ಕಿದರೆ ಮಾತ್ರ

ಬಿಡೆನು. ಅರ್ಜುನನಿಂದ ನಾನು ಹತನಾದರೂ, ನನ್ನಿಂದ ಅರ್ಜುನನು ಹತನಾದರೂ ನಿನಗೆ ಐದು ಮಂದಿ ಕುಮಾರರಿಗೆ ಕಡಮೆಯಿಲ್ಲ" ಎಂದನು. ಪುನಃ ಕುಂತಿಯು ಗದ್ಗದ ಕಂಠೆಯಾಗಿ "ಮಗನೆ, ನಿನಗೂ ಅರ್ಜುನನಿಗೂ ಮುಂದೆ ಖಾಡಾಖಾಡಿ ಯುದ್ಧವಾಗುವುದು ಖಂಡಿತ. ನೀನು ಅವನನ್ನು ಸಂಹರಿಸದೆ ಬಿಡಲಾರೆನೆಂಬ ಮನೋವೃತ್ತಿಯುಳ್ಳವನಾದರೆ 'ತೊಟ್ಟ ಬಾಣವನ್ನು ಪುನಃ ತೊಡುವುದಿಲ್ಲ' ಎಂಬ ವಚನವನ್ನಾದರೂ ಕೊಡು. ಅಲ್ಲಿಗೆ ನೀನು ನಿನ್ನ ತಮ್ಮಂದಿರನ್ನೆಲ್ಲ ಭ್ರಾತೃವಾತ್ಸಲ್ಯದಿಂದ ಕಾದಹಾಗಾಯಿತು" ಎಂದಳು. "ತಥಾಸ್ತು" ಎಂದು ಹೇಳಿ ತಾಯಿಯನ್ನು ಕುರಿತು "ಅಮ್ಮಾ, ನನ್ನ ವೃತ್ತಾಂತವನ್ನೆಲ್ಲ ಬಹಳ ಗೋಪ್ಯವಾಗಿಟ್ಟುಕೊಂಡಿರಬೇಕು. ಇಗೋ ಹೋಗಿಬರುವೆನು. ಅಪ್ಪಣೆ ಕೊಡು. ಯುದ್ಧದಲ್ಲಿ ಗೆದ್ದು ಬದುಕಿದರೆ ನಿನ್ನ ಪಾದವನ್ನು ಪುನಃ ನೋಡುವೆನು; ಇಲ್ಲವಾದರೆ ಸ್ವರ್ಗದಲ್ಲಿ ನೋಡುವೆನು" ಎಂದು ಹೇಳಿ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿ, ಅವಳ ಅಪ್ಪಣೆ ಪಡೆದು ಚಿಂತಾಕ್ರಾಂತನಾಗಿ ದುರ್ಯೋಧನನ ದುರವಸ್ಥೆಯನ್ನು ನೆನೆಯುತ್ತ ತನ್ನ ಮನೆಗೆ ಹೋದನು.

ಕುಂತಿಯು ಬಹುಕಾಲ ಅರುವಿಲ್ಲದೆ ಅಗಲಿದ ಪುತ್ರನ ಸಮಾಗಮದಿಂದುಂಟಾದ ಆನಂದದಿಂದ ಭರಿತಳಾಗಿ ತನ್ನ ಮನೆಗೆ ಹೋದಳು.

ಕುಂತಿಯನ್ನು ಬಿಟ್ಟು ಸೆಟ್ಟಗೆ ತನ್ನ ಮನೆಗೆ ಹೋಗಿ, ಹೊಸ ವ್ಯಾಮೋಹದಿಂದುಂಟಾದ ವೇದನೆಗಳನ್ನು ತೊಡೆದುಹಾಕಿ, ಮನಸ್ಥೈರ್ಯವನ್ನು ತಂದುಕೊಂಡು, ಊಟವಾದ ಒಳಿಕ ದುರ್ಯೋಧನನನ್ನು ನೋಡುವುದಕ್ಕೆ ಹೋದನು. ಕೌರವನು ಕರ್ಣನನ್ನು ಬಾಚಿ ತಬ್ಬಿಕೊಂಡು ಕೃಷ್ಣನೊಡನೆ ಅವನಿಗಾದ ಸಂಭಾಷಣೆಯ ಸಾರಾಂಶವನ್ನು ಕೇಳಲು, ಕರ್ಣನು ಯುದ್ಧಪ್ರಾರಂಭಕಾಲವನ್ನೂ ಆ ಕಾಲಕ್ಕೆ ಸರಿಯಾಗಿ ಕುರುಕ್ಷೇತ್ರದಲ್ಲಿ ಎಲ್ಲರೂ ಸಿದ್ಧರಾಗಿರಬೇಕೆಂಬ ಸಂಗತಿಯನ್ನೂ ತಿಳುಹಿಸಿ

ದನು. ಭೀಷ್ಮದ್ರೋಣಾದಿಗಳಿಂದ ಕೂಡಿದ ಒಂದು ಸಭೆಯನ್ನು ಕೂಡಲೆ ಕೌರವನು ಸೇರಿಸಿದನು. ಒಂದೊಂದು ಅಕ್ಷೌಹಿಣೀ ಸೈನ್ಯಕ್ಕೂ ಒಬ್ಬೊಬ್ಬ ನಾಯಕನನ್ನು ಗೊತ್ತು ಮಾಡಿ, ಒಟ್ಟು ಸೈನ್ಯಕ್ಕೆಲ್ಲ ಕರ್ಣನ ಅಭಿಮತದಂತೆ ಕುರುಕುಲ ಪಿತಾಮಹನಾದ ಭೀಷ್ಮನನ್ನು ಅಧಿನಾಯಕನನ್ನಾಗಿ ಮಾಡಿದನು. ಚತುರ್ದಶಿಯ ದಿವಸ ಸಾಯಂಕಾಲ ಕುರುಕ್ಷೇತ್ರವನ್ನು ಮುಟ್ಟುವಂತೆ ಎಲ್ಲರೂ ಪ್ರಯಾಣ ಬೆಳೆಸಿದರು.

ಇತ್ತ ಕೃಷ್ಣನು ಉಪಪ್ಲವವನ್ನು ಸೇರಿದನು. ಇವನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಧರ್ಮರಾಜಾದಿಗಳು ದಾರಿಯಲ್ಲೇ ಅವನನ್ನು ಇದಿರುಗೊಂಡು ಮನೆಗೆ ಕರೆದುಕೊಂಡು ಹೋದರು. ಮಾರ್ಗಾಯಾಸದಿಂದ ಬಳಲಿದ್ದ ಕೃಷ್ಣನು ಕೊಂಚ ಕಾಲ ವಿಶ್ರಾಂತಿ ಸುಖವನ್ನನುಭವಿಸಿ ಭೋಜನಾದಿಗಳಾದನಂತರ ದುರ್ಯೋಧನನ ಮೂರ್ಖತ್ವದಿಂದ ಸಂಧಾನ ಭಂಗವಾದ ಕಥೆಯನ್ನು ವಿಸ್ತಾರವಾಗಿ ತಿಳಿಸಿ ಎಲ್ಲರೂ ಕುರುಕ್ಷೇತ್ರಕ್ಕೆ ಪ್ರಯಾಣಮಾಡಲು ಸಿದ್ಧರಾಗಬೇಕೆಂದೂ, ಅಮಾವಾಸ್ಯೆಯ ದಿನ ಯುದ್ಧವು ಪ್ರಾರಂಭವಾಗುವುದೆಂದೂ ಹೇಳಿದನು. ಆಗ ಧರ್ಮರಾಯನು ಪಶ್ಚಾತ್ತಾಪ ಪಡುತ್ತ ಅವಧ್ಯರಾದ ಭೀಷ್ಮಾದಿಗಳೊಡನೆ ಯುದ್ಧಮಾಡಕೂಡದೆಂದು ಎಷ್ಟು ಪ್ರಯತ್ನಿಸಿದರೂ, ಆ ಪ್ರಯತ್ನವು ಸಾಗದೆ. ಯುದ್ಧವೇ ಪ್ರಾಪ್ತವಾಯಿತು" ಎಂದಂದುಕೊಳ್ಳುತ್ತ ಯುದ್ಧಕ್ಕೋಸ್ಕರ ಕುರುಕ್ಷೇತ್ರಕ್ಕೆ ಪ್ರಯಾಣ ಮಾಡಲು ಸೈನ್ಯವು ಸಿದ್ಧವಾಗಲಿ ಎಂದನು.

ಒಂದೊಂದು ಅಕ್ಷೌಹಿಣೀ ಸೈನ್ಯಕ್ಕೂ ಒಬ್ಬೊಬ್ಬ ದಂಡನಾಯಕನನ್ನು ಗೊತ್ತುಮಾಡಿ ಕೃಷ್ಣನ ಇಷ್ಟದಂತೆ ಒಟ್ಟು ಸೈನ್ಯಕ್ಕೆಲ್ಲ ಧೃಷ್ಟದ್ಯುಮ್ನನನ್ನು ಅಧಿನಾಯಕನನ್ನಾಗಿ ಮಾಡಿದನು. ಧೃಷ್ಟದ್ಯುಮ್ನನ ಅಪ್ಪಣೆಯಂತೆ ಸೈನ್ಯವು ಕುರುಕ್ಷೇತ್ರಕ್ಕೆ ಪ್ರಯಾಣ ಬೆಳೆಸಿತು.

ಗೊತ್ತು ಮಾಡಿದ ಕಾಲಕ್ಕೆ ಸರಿಯಾಗಿ ಉಭಯರೂ ತಮತಮಗಾಗಿ ಸಿದ್ಧವಾಗಿದ್ದ ಪಾಳ್ಯಗಳಲ್ಲಿ ಬೀಡಾರ ಬಿಟ್ಟರು.

ಅರ್ಜುನನು ಧರ್ಮರಾಯನಿದ್ದಲ್ಲಿಗೆ ಹೋಗಿ ಅವನನ್ನು ಕುರಿತು, 'ಎಲೈ ಅಗ್ರಜನೇ, ನಿವಾತಕವಚರೊಡನೆ ಕಾಳಗವಾಡಿದಾಗ ಮಾತಲಿಯು ಸಾರಥಿಯಾಗಿದ್ದನು; ಉತ್ತರಗೋಗ್ರಹಣಕಾಲದಲ್ಲಿ ಭೀಷ್ಮಾದಿಗಳನ್ನು ಇದಿರಿಸಿದಾಗ ಉತ್ತರನು ಸಾರಥ್ಯವನ್ನು ಮಾಡಿದನು; ಈಗ ಸರಿಯಾದ ಸಾರಥಿಗಳಿಲ್ಲದೆ ಯುದ್ಧ ಮಾಡುವುದೆಂತು ? ಹಗಲಿರುಳೂ ಇದೇ ಚಿಂತೆಯಲ್ಲಿದ್ದೇನೆ' ಎಂದನು. ಧರ್ಮಜನಿಗೂ ಯೋಚನೆ ಹುಟ್ಟಿತು. 'ಏನು ಮಾಡುವುದು ? ಯಾರನ್ನು ಸಾರಥ್ಯಕ್ಕೆ ನೇಮಿಸುವುದು' ಎಂದು ಚಿಂತಿಸುತ್ತಿರುವಾಗ ಕೃಷ್ಣನು ಅಲ್ಲಿಗೆ ಬಂದನು, "ನಾನಿರುವಾಗ ಚಿಂತೆಯೇಕೆ ? ಅರ್ಜುನನಿಗೆ ಸಾರಥ್ಯವನ್ನು ಮಾಡುವೆನು" ಎಂದು ವಚನ ಕೊಟ್ಟನು.

ಇತ್ತ ಧರ್ಮರಾಜಾದಿಗಳೂ, ಅತ್ತ ಕೌರವರೂ ತಮ್ಮ ತಮ್ಮ ಸೈನಿಕರಿಗೆಳಿಗೆಲ್ಲ ವೀರವಾಕ್ಯಗಳಿಂದ ಹುರಿದುಂಬಿಸುತ್ತ, ಒಂದಾವರ್ತಿ ತಮ್ಮ ಸೈನ್ಯಾಂಗಣವನ್ನೆಲ್ಲ ನೋಡಿಕೊಂಡು ಶಿಬಿರಾಗ್ನಿಯ ಮುಂದೆ ಕುಳಿತು ಮಾತನಾಡುತ್ತಿರುವಾಗ ಉಲೂಕನು ಬಂದು "ನಿಮ್ಮ ಹಿಂದಿನ ಚರಿತ್ರೆಯನ್ನು ಜ್ಞಾಪಿಸಿಕೊಂಡು ಪೌರುಷವನ್ನು ತಾಳಿ ಯುದ್ಧ ಮಾಡಿ" ಎಂದು ಹೇಳಿ ಕಳುಹಿಸಿದ ಕೌರವನ ಮಾತನ್ನು ಧರ್ಮರಾಯನಿಗೆ ಕೃಷ್ಣಾದಿಗಳಿದಿರಿಗೆ ಹೇಳಿದನು. ಆಗ ಧರ್ಮಜನು ಉಲೂಕನನ್ನು ಕುರಿತು, "ಯುದ್ಧ ಬೇಡ. ಈಗಲೂ ನಾನು ಸಂಧಿಗೆ ಸಿದ್ಧನಾಗಿರುವೆನು. ಸಮರಾಂಗಣಪ್ರವೇಶಮಾಡಿದ್ದರಿಂದ ಯುದ್ಧ ಮಾಡಿಯೇ ತೀರಬೇಕೆಂಬ ನಿಯಮವೇನೂ ಇಲ್ಲ, ನಾಳೆ ರಥಿಕರೂ, ಮಾವುತರೂ, ಅಶ್ವಾರೋಹಿಗಳೂ, ಕಾಲಾಳುಗಳೂ, ಪರಸ್ಪರ ಸಂಧಿಸುವುದಕ್ಕೆ ಬದಲಾಗಿ ಕೌರವೇಶ್ವರನು ಆಕಡೆಯಿಂದ ಬರಲಿ. ನಾನು ಈಕಡೆಯಿಂದ ಬರುವೆನು.

ಎಲ್ಲರೂ ನೋಡುವಂತೆ ರಣಾಂಗಣಮಧ್ಯದಲ್ಲಿ ಇಬ್ಬರೂ ಸಂಧಿಸಿ, ಕೈಕುಲುಕಿ ಬಾಚಿ ತಬ್ಬಿಕೊಂಡು, ಪ್ರಾಣಬಿಡುವುದಕ್ಕಾಗಿ ಬಂದಿರುವ ಅರಸುಗಳನ್ನೂ ಅವರ ಸೈನಿಕರನ್ನೂ ಹಿಂದಿರುಗಿ ಅವರವರ ದೇಶಕ್ಕೆ ಕಳುಹಿಸುವುದು ಉತ್ತಮ. ಈಗ ನನಗೆ ಕುಶಸ್ಥಳ, ವೃಕಸ್ಥಳ, ವಾರಣಾವತ, ವಾಸಂತಿ ಇನ್ನಾವುದಾದರೊಂದು ಗ್ರಾಮ ಕೊಟ್ಟರೆ ಸಾಕು. ಪ್ರಪಂಚದ ಶಾಂತಿಗಾಗಿ ಯುದ್ಧವನ್ನು ನಿಲ್ಲಿಸಲು ಸಿದ್ಧನಾಗಿರುವೆನು. ಮೂರ್ಖತ್ವವನ್ನು ಬಿಟ್ಟು ಶಾಂತಿಯ ದೃಷ್ಟಿಯಿಂದ ನಾನು ಹೇಳಿದ ಮಾತುಗಳನ್ನು ಗ್ರಹಿಸುವಂತೆ ಹೇಳು" ಎಂದು ಹೇಳಿ ಕಳುಹಿಸಿದನು.

ಅಂದು ರಾತ್ರಿ ಎಲ್ಲರೂ ಯುದ್ಧಭಯವನ್ನು ಮರೆತಿದ್ದರು. ಎಲ್ಲೆಲ್ಲೂ ಶಿಬಿರಾಗ್ನಿಗಳು; ಅಗ್ನಿಯ ಮುಂದೆ ನೃತ್ಯ ಗೀತ ವಾದ್ಯಗಳು; ನಾಟ್ಯಾಭಿನಯಗಳು; ಎಲ್ಲೆಲ್ಲೂ ಘೊಳ್ಳೆಂಬ ನಗು; ಎಲ್ಲೆಲ್ಲೂ ಕರತಾಡನಗಳು; ಹೀಗೆ ಭಯಂಕರವಾದ ಸಮರಾಂಗಣವು ಅಂದು ಏನೋ ಒಂದು ಬಗೆ ರಮಣೀಯವಾಗಿತ್ತು.

ಧರ್ಮರಾಯನು ಆಯಾಸದಿಂದ ಹಾಗೆಯೇ ನೆಲದ ಮೇಲೆ ತಲೆಯನ್ನೂರಿದನು. ಸ್ವಲ್ಪ ನಿದ್ದೆ ಹತ್ತಿದ ಹಾಗಾಯಿತು. ಕೂಡಲೆ ಕೌರವನು ಆ ಕಡೆಯಿಂದ ಏಕಾಂಗಿಯಾಗಿ ಸಮರಾಂಗಣ ಪ್ರವೇಶ ಮಾಡುವುದನ್ನು ಕಂಡನು. ತಾನೂ ಹೊರಟು ಕೌರವೇಶ್ವರನನ್ನು ಮಧ್ಯದಲ್ಲಿ ಸರಿಯಾಗಿ ಇದಿರುಗೊಂಡು ಕೈಕುಲುಕಿ, ಬಾಚಿ ತಬ್ಬಿಕೊಂಡು ಸಂತೋಷದಿಂದ ನಗುತ್ತ ಇಬ್ಬರೂ ತಮ್ಮ ತಮ್ಮ ಪಾಳ್ಯದ ಕಡೆ ತಿರುಗಿದರು. ಧರ್ಮಜನಿಗೆ ಎಚ್ಚರವಾಯಿತು. ಎಲ್ಲೆಲ್ಲೂ ಗಾಢಾಂಧಕಾರ. ಸುತ್ತಲೂ ನೋಡಿದನು. ಯಾರನ್ನೂ ಕಾಣದೆ ಹಾಗೆಯೇ ಮಲಗಿದನು.

ಧರ್ಮಜ! ಶಾಂತಿಯಿಂದ ಸ್ವರಾಜ್ಯಸ್ಥಾಪಿಸಬೇಕೆಂದು ಬಹು ಕ್ಲೇಶಪಟ್ಟೆ. ಕೊನೆಗೂ ಕಾಳಗವೇ ನಿನ್ನ ಕೊರಳಿಗೆ ಕಟ್ಟಿತು. ಜಯಾ

ವಿಜಯಗಳು ನಿನ್ನ ಕೈಯಲ್ಲಿಲ್ಲ. ಕೌರವನ ಕೈಯಲ್ಲೂ ಇಲ್ಲ. ಎಲ್ಲರಿಗೂ ಸೂತ್ರಧಾರಿಯಾದ ಕೃಷ್ಣನ ಕೈಯಲ್ಲಿದೆ. ಆ ಕೃಷ್ಣನು ಇಂದು ನಿನ್ನ ಕೈಯ ಬೊಂಬೆಯಾಗಿದ್ದಾನೆ. ಯೋಗಿಗಳಿಗೆ ಯಜಮಾನನಾದ, ಯದುಕುಲತಿಲಕನು ಎಲ್ಲಿರುವನೋ, ಎಲ್ಲಿ ಧನಂಜಯನು ಧನುರ್ಧಾರಿಯಾಗಿರುವನೋ ಅಲ್ಲಿ ವಿಜಯವೆಂಬ ದನ್ನು ನೀನರಿಯೆ. ಇಂದು ಚಾಪಲ್ಯದಿಂದ ಕಳವಳಪಡುತ್ತಿರುವೆ. ಶಾಂತಿಗೆ ಬಾಯ್ಬಿಡುತ್ತಿರುವೆ. ದುಷ್ಟನಿಗ್ರಹವಾದ ಹೊರತು ಶಾಂತಿಯೆಲ್ಲಿ ಬಂತು? ಸೂರ್ಯಪ್ರಕಾಶಕ್ಕೆ ಸಮಾನವಾದ ನಿನ್ನ ಸತ್ಯಪ್ರಭೆಯೂ, ಅಹಿಂಸಾತ್ಮಕವಾದ ನಿನ್ನ ಮಾಹಾತ್ಮ್ಯವೂ ಲೋಕಕ್ಕೆ ಶಾಂತಿಯನ್ನೀಯುವುವು ಅದನ್ನು ನೀನೇ ನೋಡುವೆ !

## ದ್ವಿತೀಯಭಾಗ ಸಂಪೂರ್ಣಂ.



